# ಹೊಸತು




ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ತನು, ವಿ. ಗೋಪಾಲ್, ಗೋಪಿ ಹಿರೇಬೆಟ್ಟು
**ಮುಖಪುಟದಲ್ಲಿ ಪದ್ಮಶ್ರೀ ಡಾ॥ ಎ. ಎಸ್. ಕಿರಣಕುಮಾರ**
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಹಿಂದುಸ್ತಾನ್ ಮೆಷಿನ್ ಟೂಲ್ಸ್ ಭಾರತದಲ್ಲಿ ಯಂತ್ರಗಳ ತಯಾರಿಕೆಗಾಗಿಯೇ ಸಾರ್ವಜನಿಕ ಕ್ಷೇತ್ರದಲ್ಲಿ ಸ್ಥಾಪಿತವಾದ ಮೊದಲ ಉದ್ಯಮಗಳಲ್ಲೊಂದು. 'ಮದರ್ ಮೆಷೀನ್ಸ್ ದಟ್ ಬಿಲ್ಡ್ ಅದರ್ ಮೆಷೀನ್ಸ್' ಎಂಬ ಘೋಷಣೆಯಡಿಯಲ್ಲಿ ಬೆಂಗಳೂರು ನಗರದಲ್ಲಿ ಅದು ಪ್ರಾರಂಭವಾದ್ದು ೧೯೫೩ರಲ್ಲಿ. ದೇಶದಲ್ಲಷ್ಟೇ ಅಲ್ಲದೆ ಆಗ್ನೇಯ ಏಷಿಯಾದ ದೇಶಗಳಲ್ಲೂ ಹೆಸರು ಮಾಡಿದ ಸಂಸ್ಥೆ ಹೆಚ್.ಎಂ.ಟಿ. ಕಾರ್ಮಿಕರ ಸಹಕಾರ ಪಡೆಯಲು ಜಂಟಿ ಮ್ಯಾನೇಜ್‌ಮೆಂಟ್ ಪ್ರಯೋಗ ನಡೆಸಿದ ಪ್ರಥಮ ಸಂಸ್ಥೆಯೂ ಆಗಿತ್ತು ಅದು. ಜಪಾನಿನ ಸಿಟಿಜನ್ ವಾಚ್ ಕಂಪನಿಯೊಂದಿಗೆ ಒಪ್ಪಂದ ಮಾಡಿಕೊಂಡು ೧೯೬೧ರಲ್ಲಿ ಕೈಗಡಿಯಾರಗಳ ತಯಾರಿಕೆಯನ್ನು ಪ್ರಾರಂಭಿಸಲಾಯಿತು. ಹೆಚ್.ಎಂ.ಟಿ. ವಾಚ್‌ಗೆ ಬೇಡಿಕೆ ಚೆನ್ನಾಗಿತ್ತು. ಕ್ಯೂ ನಿಂತು ಗಡಿಯಾರ ಖರೀದಿಸುವಂಥ ದಿನ ಇತ್ತು. ಈಗಲೂ ಹೆಮ್ಮೆಯಿಂದ ಹೆಚ್.ಎಂ.ಟಿ. ಗಡಿಯಾರವನ್ನು ಧರಿಸಿರುವವರನ್ನು ಕಾಣಬಹುದು ಬೆಂಗಳೂರಿನಲ್ಲಿ. ಹತ್ತು ವರ್ಷಗಳಾದ ಮೇಲೆ ದೂರದ ಕಾಶ್ಮೀರದ ಶ್ರೀನಗರದಲ್ಲಿ ಗಡಿಯಾರ ಕಾರ್ಖಾನೆಯ ಶಾಖೆಯೊಂದನ್ನು ಸ್ಥಾಪಿಸಲಾಯಿತು. ಮತ್ತೆ ೧೯೭೮ರಲ್ಲಿ ತುಮಕೂರಿನಲ್ಲಿ ಶಾಖೆ ಪ್ರಾರಂಭವಾಗಿ ಕ್ವಾರ್ಟ್ಸ್ ಗಡಿಯಾರ ತಯಾರಾಗುತ್ತಿತ್ತು. ಈಗ ಅದೆಲ್ಲ ಕನಸಿನ ಮಾತು. ಒಂದೊಂದೇ ಸಾರ್ವಜನಿಕ ಉದ್ಯಮವನ್ನು ಕೊಲ್ಲುವುದಕ್ಕೆ ಪ್ರಾರಂಭವಾದ್ದು ೧೯೮೦ರ ದಶಕದಲ್ಲಿ. ದೇಶ ಉದಾರೀಕರಣ, ಜಾಗತೀಕರಣಗೊಳ್ಳುತ್ತಿದ್ದಂತೆ ದೇಶದ ಸ್ವತ್ತನ್ನು ಕರಗಿಸುವ ಕೆಲಸವೂ ಪ್ರಾರಂಭವಾಯಿತು. ಈ ಅರವತ್ತು ವರ್ಷಗಳ ನಂತರ ಹೆಮ್ಮೆಯಿಂದ ತಲೆ ಎತ್ತಿನಿಂತ ಹೆಚ್.ಎಂ.ಟಿ. ಗಡಿಯಾರ ತಯಾರಿಕೆ ಸಂಸ್ಥೆ ಅವಸಾನ ಹೊಂದುತ್ತಿದೆ. ಎನ್.ಡಿ.ಎ. ಮೊದಲ ಸರಕಾರದ ಕಾಲದಲ್ಲೇ ಸಾರ್ವಜನಿಕ ಉದ್ಯಮಗಳನ್ನು ಕರಗಿಸಲು ಪ್ರತ್ಯೇಕವಾದ ಸಚಿವಾಲಯವನ್ನು ಸೃಷ್ಟಿಸಿತ್ತು. ಈಗ ಎರಡನೇ ಎನ್.ಡಿ.ಎ. ಅಧಿಕಾರದಲ್ಲಿ ಮಗುಮ್ಮಾಗಿ ಸರಕಾರಿ ಉದ್ಯಮಗಳನ್ನು ಮುಚ್ಚುವ ಕೆಲಸ ನಡೆಯುತ್ತಿದೆ. ಹೆಚ್.ಎಂ.ಟಿ. ವಾಚ್ ಫ್ಯಾಕ್ಟರಿಯನ್ನು ಮುಚ್ಚಲು ೨೦೧೬ರ ಜನವರಿ ೬ರಂದು ಮೋದಿ ಸರಕಾರ ತೀರ್ಮಾನ ತೆಗೆದುಕೊಂಡಿದೆ. ಕೆಲ ವರ್ಷಗಳ ಹಿಂದೆಯೇ ಹೆಚ್.ಎಂ.ಟಿ. ಯಂತ್ರ ತಯಾರಿಕಾ ಘಟಕವನ್ನು ಮುಚ್ಚಲಾಗಿತ್ತು. ಈ ಉದ್ಯಮಗಳನ್ನು ಸ್ಥಾಪಿಸಿದಾಗ ಆಗ ಪ್ರಧಾನಿಯಾಗಿದ್ದ ಪಂಡಿತ ಜವಹರಲಾಲ್ ನೆಹರೂ ಅವನ್ನು 'ಆಧುನಿಕ ದೇವಾಲಯಗಳು' ಎಂದು ಕರೆದಿದ್ದರು. ಈಗ ಅವೆಲ್ಲ ಅದೃಶ್ಯವಾಗುತ್ತಿವೆ. ಈಗಿರುವ ಸರಕಾರ ಅದರ ಪೌರೋಹಿತ್ಯ ವಹಿಸಿ ಅಪರ ಕರ್ಮ ನೆರವೇರಿಸುತ್ತಿದೆ. ಅಯೋಧ್ಯೆಯಲ್ಲಿ ಶ್ರೀರಾಮ ಮಂದಿರ ನಿರ್ಮಿಸಲು ಹೊರಟಿದೆ, ಕೇರಿಗೊಂದು ಇರುವ ದೇವಾಲಯಗಳ ಜೊತೆಗೆ. ಕಾರ್ಖಾನೆಗಳು ಮುಚ್ಚಿ ನಿರುದ್ಯೋಗಿಗಳಾಗುವ ಬಡಪಾಯಿಗಳು ಇನ್ನು ಭಗವಂತನ ಮೊರೆಹೋಗಬೇಕು ಅಷ್ಟೆ.

✶ ✶ ✶

ಅಯೋಧ್ಯೆಯಲ್ಲಿ 'ರಾಮಮಂದಿರ'ದ ಸ್ಥಾಪನೆ ಸಂಘ ಪರಿವಾರಕ್ಕೆ ಈಗ ಮುಖ್ಯ ಗುರಿ. ಈ ವಿಷಯದಲ್ಲಿ ಮುಂದೆ ನಿಂತಿರುವ ವಿಶ್ವ ಹಿಂದೂ ಪರಿಷತ್ ಅದಕ್ಕಾಗಿ ಕಲ್ಲುಗಳನ್ನು ಸಂಗ್ರಹಿಸುತ್ತಿದೆ. ಕಂಬಗಳ ನಿರ್ಮಾಣಕ್ಕಾಗಿ ಕೆತ್ತನೆ ಕೆಲಸ ಯಾವತ್ತೊ ಪ್ರಾರಂಭವಾಯಿತು. ಉತ್ತರ ಪ್ರದೇಶದಲ್ಲಿ, ಪಶ್ಚಿಮ ಬಂಗಾಳದಲ್ಲಿ ಚುನಾವಣೆಗಳು ಮುಂದಿನ ವರ್ಷ ಬರುತ್ತಿದೆ. ಅದಕ್ಕೆ ಪೂರ್ವಸಿದ್ಧತೆಯಾಗಿ ಹಿಂದುತ್ವವಾದಿಗಳು ಧ್ರುವೀಕರಣದ ಕಾರ್ಯ ಕೈಗೆತ್ತಿಕೊಂಡಿದ್ದಾರೆ. ಪಶ್ಚಿಮ ಬಂಗಾಳದ ಮಾಲ್ಡಾದಲ್ಲಿ ನಡೆಯುತ್ತಿರುವ ಹಿಂಸಾಚಾರ ದಾಂಧಲೆಗಳು ಅದಕ್ಕೆ ಸಾಕ್ಷಿ.

ಇಪ್ಪತ್ತಮೂರು ವರ್ಷಗಳ ಹಿಂದೆ ಹಿಂದುತ್ವವಾದಿ ಕರಸೇವಕರು ಅಯೋಧ್ಯೆಯಲ್ಲಿರುವ ಬಾಬ್ರಿ ಮಸೀದಿ ಧ್ವಂಸ ಮಾಡಿದರು. ಈಗ ಮೋದಿ ಸರಕಾರ ಅಸ್ತಿತ್ವಕ್ಕೆ ಬಂದು ಹತ್ತೊಂಬತ್ತು ತಿಂಗಳಾಗಿದೆ ಅಷ್ಟೆ. ಉತ್ತಮ

*(೭ನೇ ಪುಟಕ್ಕೆ)*



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೭ ಸಂಚಿಕೆ-೭ ಫೆಬ್ರವರಿ ೨೦೧೬





**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಅರಿವು ತರುವ ನೋವು...

**ಸಾ**ಮಾನ್ಯವಾಗಿ ಶೋಷಣೆ ನೋವಿನ ಸಂಕಟವನ್ನುಂಟುಮಾಡುವುದಿಲ್ಲ. ಶೋಷಿತನಾಗಿದ್ದೇನೆ ಅಥವಾ ಶೋಷಣೆಗೊಳಗಾಗುತ್ತಿದ್ದೇನೆ ಎನ್ನುವ ಅರಿವು ಅಪಾರವಾದ ನೋವನ್ನು ತರುತ್ತದೆ. ಆ ನೋವು ಪ್ರತಿರೋಧದ ಮೂಲವಾಗುತ್ತದೆ. ಸಾಮಾಜಿಕ ಶೋಷಣೆ, ವರ್ಗ ಶೋಷಣೆ, ವರ್ಣ ವ್ಯವಸ್ಥೆಯ ಶೋಷಣೆ, ಲಿಂಗಾಧಾರಿತ ಶೋಷಣೆ ಇಂಥ ಹಲವಾರು ರೀತಿಯ ಶೋಷಣೆಗೆ ಒಳಗಾದ ಜನತೆ ಶೋಷಣೆಯನ್ನು ಸಹಿಸಿಕೊಂಡು ಇದು ತಮ್ಮ ಕರ್ಮವೆಂದು ಸಹಜವಾಗಿ ಶೋಷಣೆಗೊಳಗಾಗುತ್ತಲೇ ಬದುಕು ಸಾಗಿಸುತ್ತಿರುತ್ತಾರೆ. ಆದರೆ ಶೋಷಣೆಯ ಕುರಿತು ಅರಿವು ಉಂಟಾದಾಗ ದೈಹಿಕವಾದ ನೋವು ಮಾನಸಿಕ ನೋವಾಗಿ ಪರಿವರ್ತನೆ ಆಗುತ್ತದೆ. ಆಗ ನೋವಿಗೊಳಗಾದ ವ್ಯಕ್ತಿ ಆ ನೋವಿನಿಂದ ಬಿಡುಗಡೆ ಪಡೆಯಲು ಯತ್ನಿಸುತ್ತಾನೆ. ಶೋಷಕ ಮನಸ್ಸುಗಳು ಈ ಬಿಡುಗಡೆಯ ಪ್ರಯತ್ನವನ್ನೇ ಅವಿಧೇಯತೆ, ಪ್ರತಿರೋಧ ಎಂದು ಬಗೆದು ಪ್ರತಿರೋಧವನ್ನು ದಮನ ಮಾಡಲು ಯತ್ನಿಸುತ್ತಾರೆ. ಶೋಷಣೆ ಎನ್ನುವುದು ಒಂದು ವ್ಯವಸ್ಥೆಯ ಭಾಗವಾಗಿರುತ್ತದೆ. ಶೋಷಕ ಆ ವ್ಯವಸ್ಥೆಯನ್ನು ಉಳಿಸಿಕೊಂಡು, ಬೆಳೆಸಿಕೊಂಡು ಹೋಗಲು ಯಾವ ಮಟ್ಟಕ್ಕಾದರೂ ಇಳಿಯುತ್ತಾನೆ. ಈ ಶೋಷಕರಿಗೆ ಪ್ರಭುತ್ವದ ಬೆಂಬಲ ದೊರೆತರೆ ಹೈದರಾಬಾದ್‌ನ ವಿಶ್ವವಿದ್ಯಾಲಯದಲ್ಲಿ ನಡೆದ ಘಟನೆಗಳು ನಿರಂತರವಾಗಿ ನಡೆಯುತ್ತವೆ.

ಹೈದರಾಬಾದ್ ವಿಶ್ವವಿದ್ಯಾಲಯದಲ್ಲಿ ದಲಿತ ಯುವಕ, ಸಂಶೋಧನಾ ವಿದ್ಯಾರ್ಥಿ ರೋಹಿತ್ ವೇಮುಲ ಆತ್ಮಹತ್ಯೆಯ ಘಟನೆ ಹೊಸದೇನೂ ಅಲ್ಲ. ನಿತ್ಯ ನಿರಂತರ ನಮ್ಮ ಸಮಾಜದಲ್ಲಿ ಲಕ್ಷಾಂತರ ಜನ ಶೋಷಕರ ದಾಳಿಗೆ ಬಲಿಯಾಗುತ್ತಿದ್ದಾರೆ. ಶೋಷಣೆಯ ಅರಿವು ಪಡೆದು ಅಂಥ ವ್ಯವಸ್ಥೆಯ ವಿರುದ್ಧ ಹೋರಾಟಕ್ಕಿಳಿದ ದಲಿತ ಯುವಕನ ಬದುಕು ಇಂದು ಆತ್ಮಹತ್ಯೆಯಲ್ಲಿ ಪರ್ಯಾವಸಾನಗೊಂಡಿದೆ. ಇದು ಕಾನೂನಿನ ಚೌಕಟ್ಟಿನಲ್ಲಿ ಒಂದು ಆತ್ಮಹತ್ಯೆಯೆಂದಾದರೂ ವ್ಯವಸ್ಥೆ ನಡೆಸಿದ ವ್ಯವಸ್ಥಿತ ಕೊಲೆ. ಈಗಲಾದರೂ ದಲಿತರು, ಪ್ರಗತಿಪರರು, ಎಡಪಂಥೀಯ ಶಕ್ತಿಗಳು ಈ ವ್ಯವಸ್ಥಿತ ಕೊಲೆಯ ವಿರುದ್ಧ ತೀವ್ರವಾದ ಪ್ರತಿರೋಧವನ್ನು ವ್ಯಕ್ತಪಡಿಸಿ ಇಂಥ ವರದಿಯಾದ, ವರದಿಯಾಗದ ಸಾವಿರಾರು ಘಟನೆಗಳ ವಿರುದ್ಧ ದೇಶದಾದ್ಯಂತ ಹೋರಾಟ ರೂಪಿಸಬೇಕಿದೆ.

ಹೈದರಾಬಾದ್ ವಿಶ್ವವಿದ್ಯಾಲಯದ ಘಟನೆ ಮೇಲ್ನೋಟಕ್ಕೆ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ ಮತ್ತು ಅಂಬೇಡ್ಕರ್ ವಿದ್ಯಾರ್ಥಿ ಒಕ್ಕೂಟ ಎಂಬ ಎರಡು ವಿದ್ಯಾರ್ಥಿ ಸಂಘಟನೆಗಳ ನಡುವಿನ ಸಂಘರ್ಷದಂತೆ ಕಾಣುತ್ತಿರಬಹುದು. ಆದರೆ ಇದರ ಹಿಂದೆ ಶೋಷಕ ಮತ್ತು ಶೋಷಿತ ಜನಸಮೂಹದ ತಾತ್ವಿಕ ಸಂಘರ್ಷವಿದೆ.

ವಿಶ್ವವಿದ್ಯಾಲಯದಂಥ ಕ್ಷೇತ್ರಗಳಲ್ಲಿ ನಡೆಯುವ ಇಂಥ ಘಟನೆಗಳಿಗೆ ಸಾಮಾನ್ಯವಾಗಿ ಚರ್ಚೆ, ಸಂವಾದಗಳ ಮೂಲಕ ಪರಿಹಾರ ಕಂಡುಕೊಳ್ಳಬಹುದು. ವಿಶ್ವವಿದ್ಯಾಲಯದ ಕುಲಪತಿಯೋ, ಇನ್ಯಾವ ಅಧಿಕಾರಿಯೋ ಎರಡೂ ಬಣಗಳನ್ನು ಕೂರಿಸಿ ಸಮಸ್ಯೆಯನ್ನು ಪರಿಹರಿಸಬಹುದಿತ್ತು. ಆದರೆ ಅಲ್ಲಿನ ಎ.ಬಿ.ವಿ.ಪಿ. ಎಂಬ ಸಂಘಟನೆ ಕೇವಲ ವಿದ್ಯಾರ್ಥಿ ಸಂಘಟನೆಯಲ್ಲ. ಅದು ಶಿಕ್ಷಣ ಕ್ಷೇತ್ರದಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘ ಹಾಗೂ ಭಾರತೀಯ ಜನತಾ ಪಕ್ಷದ ಪರವಾಗಿ ಕೆಲಸ ಮಾಡುವ, ಹಿಂದುತ್ವವನ್ನು ಪ್ರತಿಪಾದಿಸುವ ಒಂದು ಸಂಘಟನೆ. ವಿಶ್ವವಿದ್ಯಾಲಯದಲ್ಲಿ ತನ್ನ ಕಾರ್ಯಸೂಚಿಯನ್ನು ವಿರೋಧಿಸುವ ಅಥವಾ ಪರ್ಯಾಯ ಚಿಂತನೆಗಳನ್ನು ಹೊಂದಿರುವ ಸಂಘಟನೆಗಳನ್ನು ಸದೆಬಡಿಯುವ ಕಾರ್ಯಕ್ರಮವನ್ನು ಅದು ಹೊಂದಿದೆ. ಅದರ ಪರಿಣಾಮವಾಗಿಯೇ ಹೈದರಾಬಾದ್ ವಿಶ್ವವಿದ್ಯಾಲಯದಲ್ಲಿ ಕ್ರಿಯಾಶೀಲವಾಗಿದ್ದ ಅಂಬೇಡ್ಕರ್ ವಿದ್ಯಾರ್ಥಿ ಸಂಘಟನೆಯ ಮೇಲೆ ದಾಳಿ ನಡೆದಿದೆ. ವಿಶ್ವವಿದ್ಯಾಲಯದಲ್ಲಿ ನಡೆದ ಒಂದು ಚಿಕ್ಕ ಘಟನೆಯನ್ನೇ ನೆಪ ಮಾಡಿಕೊಂಡು ಈ ದೇಶದ ಆಳುವ ಪಕ್ಷದ ಕೇಂದ್ರ ಮಂತ್ರಿ ಬಂಡಾರು ದತ್ತಾತ್ರೇಯ ವಿದ್ಯಾರ್ಥಿ ಪರಿಷತ್ತಿನ ಪರವಾಗಿ ಸಂಬಂಧಿಸಿದ ಮಂತ್ರಾಲಯಕ್ಕೆ ಪತ್ರ ಬರೆಯುತ್ತಾನೆ. ಕೇಂದ್ರದ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆ ಮಂತ್ರಿ ಸ್ಮೃತಿ ಇರಾಣಿ ಅಂಬೇಡ್ಕರ್ ವಿದ್ಯಾರ್ಥಿ ಸಂಘಟನೆಯ ಕಾರ್ಯಕರ್ತರ ಮೇಲೆ ಕ್ರಮ ಕೈಗೊಳ್ಳಲು ಕುಲಪತಿಗೆ ಪತ್ರ ಬರೆಯುತ್ತಾರೆ. ವಿಶ್ವವಿದ್ಯಾಲಯಗಳು ಸ್ವಾಯತ್ತ ಸಂಸ್ಥೆಗಳಾದರೂ ಆಳುವ ವರ್ಗದ ಗುಲಾಮರಾಗಲು ಹಪಹಪಿಸುತ್ತಿರುವ ಕುಲಪತಿ ಹಾಗೂ ಆಡಳಿತ ಮಂಡಳಿ ಸೇರಿ ರೋಹಿತ್ ಒಳಗೊಂಡಂತೆ ಐದು ವಿದ್ಯಾರ್ಥಿಗಳ ಮೇಲೆ ಕ್ರಮ ಕೈಗೊಳ್ಳುತ್ತಾರೆ. ಆ ಕ್ರಮವಾದರೂ ಎಂಥದ್ದು, ವಿದ್ಯಾರ್ಥಿಗಳು ಕ್ಲಾಸ್‌ರೂಮ್ ಹೊರತುಪಡಿಸಿ ಕ್ಯಾಂಪಸ್ಸಿನಲ್ಲಿ ಇನ್ನೆಲ್ಲೂ ಕಾಣಿಸಿಕೊಳ್ಳಬಾರದೆಂಬುದು. ವಸತಿನಿಲಯದಿಂದ ಆ ವಿದ್ಯಾರ್ಥಿಗಳನ್ನು ಹೊರಹಾಕಲಾಗಿದೆ. ಸಾಮಾನ್ಯ ಹಳ್ಳಿಯಲ್ಲಿ ನಡೆವ ದಲಿತರ ಮೇಲಿನ ಸಾಮಾಜಿಕ ಬಹಿಷ್ಕಾರಕ್ಕೂ ಒಂದು ವಿಶ್ವವಿದ್ಯಾಲಯದಲ್ಲಿ ದಲಿತ ಸಂಶೋಧನಾ ವಿದ್ಯಾರ್ಥಿಗಳ ಮೇಲಿನ ಕ್ಯಾಂಪಸ್ ಬಹಿಷ್ಕಾರಕ್ಕೂ ಯಾವುದೇ ವ್ಯತ್ಯಾಸವಿಲ್ಲ.

ವಸತಿನಿಲಯದಿಂದ ಹೊರಹಾಕಿದ ನಂತರ ಐದು ಜನ ವಿದ್ಯಾರ್ಥಿಗಳು ವಿಶ್ವವಿದ್ಯಾಲಯದ ಹೊರವಲಯದ ಬಯಲಿನಲ್ಲಿ ಟೆಂಟ್ ಹಾಕಿಕೊಂಡು ವಾಸವಾಗಿದ್ದಾರೆ. ಇದು ಅವರು ವಿಶ್ವವಿದ್ಯಾಲಯದ ಕ್ರಮದ ವಿರುದ್ಧ ಕೈಗೊಂಡ ಪ್ರತಿಭಟನೆ. ಆಗಲೇ ದೊಡ್ಡ ಪ್ರಮಾಣದ ಪ್ರತಿರೋಧ, ಪ್ರತಿಭಟನೆ ಶೈಕ್ಷಣಿಕ, ಸಾಮಾಜಿಕ ಕ್ಷೇತ್ರದಲ್ಲಿ

ವ್ಯಕ್ತವಾಗಬೇಕಿತ್ತು. ಇಂದು ನಡೆಯುತ್ತಿರುವ ಪ್ರತಿಭಟನೆಗಳು ಅಂದೇ ನಡೆದಿದ್ದರೆ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದ ರೋಹಿತ್ ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ ಉಂಟಾಗುತ್ತಿರಲಿಲ್ಲ. ವಿಶ್ವವಿದ್ಯಾಲಯದ ಆಡಳಿತ ಮಂಡಳಿ ಆಳುವ ಪಕ್ಷದ ಹಿತಾಸಕ್ತಿಗೆ ಪೂರಕವಾಗಿ ದಲಿತ ವಿದ್ಯಾರ್ಥಿಗಳ ಮೇಲೆ ಅನಾವಶ್ಯಕವಾಗಿ, ಅನ್ಯಾಯದ ಮಾರ್ಗದಲ್ಲಿ ಕ್ರಮ ಕೈಗೊಂಡಾಗಲೇ ದಲಿತ, ಪ್ರಗತಿಪರ, ಎಡಪಂಥೀಯ ವಿದ್ಯಾರ್ಥಿ ಸಂಘಟನೆಗಳು ಒಂದಾಗಿ ಹೋರಾಡಿ ಇದನ್ನೊಂದು ರಾಷ್ಟ್ರೀಯ ವಿಷಯವನ್ನಾಗಿ ಮಾಡಬೇಕಿತ್ತು. ರೋಹಿತ್ ಬರೆದ ಆತ್ಮಹತ್ಯೆಯ ಮುಂಚಿನ ಪತ್ರವನ್ನು ನೋಡಿದರೇ ಅರ್ಥವಾಗುತ್ತದೆ ಅನಾಥಪ್ರಜ್ಞೆ ಅವನ ಬದುಕಿನ ಕೊನೆಯ ಕ್ಷಣಗಳಲ್ಲಿ ಕಾಡುತ್ತಿತ್ತು ಎಂಬುದು. ಒಬ್ಬ ಹೋರಾಟಗಾರ ಅಸಹಾಯಕತೆ, ಅನಾಥಪ್ರಜ್ಞೆಗೊಳಗಾಗಿ ಇಂಥ ತೀರ್ಮಾನಕ್ಕೆ ಬಂದರೆ ಅದು ಒಂದು ಕೆಟ್ಟ ಸಂದೇಶವನ್ನು ಸಮಾಜಕ್ಕೆ ರವಾನಿಸುತ್ತದೆ.

ಸಾಮಾನ್ಯವಾಗಿ ದಲಿತ, ಪ್ರಗತಿಪರ, ಎಡಪಂಥೀಯ ಸಂಘಟನೆಗಳ ಮಧ್ಯೆ ಇರುವ ತಾತ್ವಿಕ ಭಿನ್ನಾಭಿಪ್ರಾಯಗಳೇ ಐಕ್ಯ ಹೋರಾಟಕ್ಕೆ ಅಡ್ಡಿಯಾಗಿವೆ. ಯಾರು ಎಷ್ಟು ಕ್ರಾಂತಿಕಾರಿಗಳೆಂಬುದೇ ಅವರ ಭಿನ್ನಾಭಿಪ್ರಾಯದ ಮೂಲ. ಇಂದು ದೇಶದ ಶೈಕ್ಷಣಿಕ ವಲಯ ಒಂದು ಕಡೆ ಕಾರ್ಪೊರೇಟೀಕರಣಗೊಳ್ಳುತ್ತಿದ್ದರೆ ಇನ್ನೊಂದೆಡೆ ಕೋಮುವಾದೀಕರಣ ಗೊಳ್ಳುತ್ತಿದೆ. ಇಂಥ ಸಂದರ್ಭದಲ್ಲಿ ಈ ಎರಡೂ ಶಕ್ತಿಗಳನ್ನು ವಿರೋಧಿಸುವ ಎಲ್ಲ ಜನಪರ ಸಂಘಟನೆಗಳೂ ತಮ್ಮ ನಡುವಿನ ತಾತ್ವಿಕ ಭಿನ್ನಾಭಿಪ್ರಾಯಗಳನ್ನು ಬದಿಗಿರಿಸಿ ಒಂದಾಗಬೇಕಿದೆ. ರೋಹಿತ್ ವೇಮುಲನ ಆತ್ಮಹತ್ಯೆಯ ಘಟನೆ ಶೈಕ್ಷಣಿಕ ವಲಯದ ಎಲ್ಲ ಸಂಘಟನೆಗಳೂ, ಚಿಂತಕರೂ ಒಂದಾಗುವ ಅವಶ್ಯಕತೆಯನ್ನು ಮನಗಾಣಿಸಿದೆ. ಪ್ರಸ್ತುತ ಘಟನೆಯಲ್ಲಿ ಕೇಂದ್ರ ಸರಕಾರದ ಮಂತ್ರಿಗಳು ನೇರವಾಗಿ ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಯಲ್ಲಿ ಅನಧಿಕೃತ ಪ್ರವೇಶ ಮಾಡಿದ್ದಾರೆ. ವಿಶ್ವವಿದ್ಯಾಲಯಗಳು ಅಕಾಡೆಮಿಕ್ ಆದ ವಿಷಯಕ್ಕೆ ಮಹತ್ವ ಕೊಡಬೇಕೇ ಹೊರತು ಆಳುವ ಪಕ್ಷಗಳ ಹಿತಾಸಕ್ತಿ ಕಾಯುವ ಏಜೆನ್ಸಿಗಳಾಗಬಾರದು. ವಿದ್ಯಾರ್ಥಿ ಸಂಘಟನೆಗಳೂ ಸಹ ಪ್ರಸ್ತುತ ವಾಣಿಜ್ಯೀಕರಣ ಹಾಗೂ ಕೋಮುವಾದೀಕರಣಗೊಳ್ಳುತ್ತಿರುವ ಶಿಕ್ಷಣ ವ್ಯವಸ್ಥೆಯನ್ನು ವೈಚಾರಿಕತೆ, ವೈಜ್ಞಾನಿಕತೆ, ಸಾರ್ವತ್ರಿಕತೆಯತ್ತ ತಂದು ಜನಮುಖಿ ಆಯಾಮಕ್ಕೊಳಪಡಿಸಲು ಸಾಮಾನ್ಯ ಕಾರ್ಯಕ್ರಮವನ್ನು ರೂಪಿಸಿಕೊಳ್ಳಬೇಕು. ಯಾರು ಎಷ್ಟು ಕ್ರಾಂತಿಕಾರಿಗಳೆಂದು ತೀರ್ಮಾನವಾಗುವುದಕ್ಕೂ ಮೊದಲು ಸಮಾನ ಶತ್ರು ಎಷ್ಟು ಪ್ರಬಲ ಎಂಬುದನ್ನು ತೀರ್ಮಾನಿಸಿ ಒಂದುಗೂಡಬೇಕಿದೆ.

ಪ್ರಧಾನಿ ಮೋದಿ ಅವರು ಪ್ರಕರಣ ಕುರಿತು ತಮ್ಮ ಸಂಪ್ರದಾಯದಂತೆ ಮೌನವಾಗಿದ್ದಾರೆ. ಮಾನವ ಸಂಪನ್ಮೂಲ ಇಲಾಖೆ ಮಂತ್ರಿ ಸ್ಮೃತಿ ಇರಾಣಿ ಬಾಯಿ ತೆರೆದಿದ್ದಾರೆ. ಅವರು ಇದು ದಲಿತ–ದಲಿತೇತರರ ನಡುವಿನ ಸಂಘರ್ಷವಲ್ಲವೆಂದು ಹೇಳುತ್ತಲೇ ದಲಿತರ ವಿರುದ್ಧ ದಲಿತೇತರರನ್ನೆಲ್ಲ ಎತ್ತಿಕಟ್ಟುವ ಅಥವಾ ದಲಿತರ ವಿರುದ್ಧ ಇತರರನ್ನೆಲ್ಲ ಪ್ರತ್ಯೇಕಗೊಳಿಸುವ ಕೆಲಸವನ್ನು ಸೂಕ್ಷ್ಮವಾಗಿ ಮಾಡಿದ್ದಾರೆ. ಮಾತ್ರವಲ್ಲ, ಪ್ರಕರಣದ ಕುರಿತು ನೇರವಾಗಿ ಮಾತನಾಡದೆ, ಇದರಲ್ಲಿ ರಾಜಕೀಯ ಬೆರೆಸಬಾರದೆಂದೂ ವಿರೋಧ ಪಕ್ಷಗಳು ರಾಜಕೀಯ ಮಾಡುತ್ತವೆಂದು ಹೇಳಿ ಪ್ರಕರಣದ ದಿಕ್ಕು ತಪ್ಪಿಸುವ ಕೆಲಸ ಮಾಡಿದ್ದಾರೆ. ನಿಜವಾದ ರಾಜಕಾರಣವನ್ನು ಮಾಡಿದ್ದೇ ಸ್ಮೃತಿ ಇರಾಣಿ ಹಾಗೂ ಬಂಡಾರು ದತ್ತಾತ್ರೇಯ ಎಂಬ ಮಂತ್ರಿದ್ವಯರು. ವಿಶ್ವವಿದ್ಯಾಲಯದಲ್ಲಿನ ವಿದ್ಯಾರ್ಥಿಗಳ ನಡುವಿನ ಭಿನ್ನಮತವನ್ನು ಪರಿಹರಿಸಲು ವಿಶ್ವವಿದ್ಯಾಲಯ ಆಡಳಿತ ಮಂಡಲಿಗೆ ಬಿಡದೆ ಎ.ಬಿ.ವಿ.ಪಿ. ಎಂಬ ಬಿಜೆಪಿಯ ವಿದ್ಯಾರ್ಥಿ ಸಂಘಟನೆ ಪರವಾಗಿ ಕೇಂದ್ರದ ಬಿಜೆಪಿ ಸರಕಾರದ ಮಂತ್ರಿಗಳು ನೇರವಾಗಿ ದಲಿತ ವಿದ್ಯಾರ್ಥಿಗಳ ಮೇಲೆ ದಾಳಿಗಿಳಿದಿದ್ದಾರೆ. ವಿಶ್ವವಿದ್ಯಾಲಯದ ಕುಲಪತಿಯನ್ನೂ, ಕಾರ್ಯನಿರ್ವಾಹಕ ಸಮಿತಿಯನ್ನೂ ನೇರವಾಗಿಯೇ ಬಳಸಿಕೊಂಡಿದ್ದಾರೆ. ಇದು ರಾಜಕಾರಣವಲ್ಲದೆ ಇನ್ನೇನು? ಇದು ರಾಜಕಾರಣವಾಗಿದ್ದರಿಂದ ಇದನ್ನು ರಾಜಕೀಯವಾಗಿಯೇ ಎದುರಿಸಬೇಕು. ಇದು ಬಿಜೆಪಿಯು ವರ್ಣಾಶ್ರಮ ವ್ಯವಸ್ಥೆಯ ರಕ್ಷಣೆಗಾಗಿ ನಡೆಸಿದ ರಾಜಕಾರಣವಾಗಿದ್ದರಿಂದ, ಜಾತಿವಾದವನ್ನು ವಿರೋಧಿಸುವ ರಾಜಕೀಯ ಶಕ್ತಿಗಳೆಲ್ಲ ದೇಶದಲ್ಲಿ ಜಾತಿವಾದಿ ವಿರೋಧಿ ರಾಜಕೀಯ ಆಂದೋಲನವನ್ನೇ ನಡೆಸಬೇಕು.

ಶೋಷಣೆಯ ಅರಿವು ತರುವ ನೋವು ಶೋಷಣೆಯ ನಿರ್ಮೂಲನೆಗೆ ಛಲವನ್ನುಂಟುಮಾಡುವ ಭಾವವನ್ನು ಮೂಡಿಸಬೇಕು.

ಸಿದ್ದನಗೌಡ ಪಾಟೀಲ

## ಭಾರತ–ಪಾಕಿಸ್ತಾನ ಸಂಬಂಧ–ಮಾತುಕತೆ ಅನಿವಾರ್ಯ

**ಭಾ**ರತ–ಪಾಕಿಸ್ತಾನಗಳ ಮಧ್ಯೆ ಮಾತುಕತೆ ನಿಗದಿಯಾದಾಗಲೆಲ್ಲ ಭಯೋತ್ಪಾದನೆಯ ಕೃತ್ಯ ಜರುಗಿ ಸಂಬಂಧಗಳು ಹಳಸುತ್ತವೆ. ಕಳೆದ ಎರಡು ದಶಕಗಳಿಂದ ಇದು ಒಂದು ಕ್ರಮವಾಗುತ್ತ ಬಂದಿದೆ. ಏಕೋ ಏನೋ ಪಾಕಿಸ್ತಾನದ ಲಾಹೋರಿಗೂ ಎನ್‌ಡಿಎ ಸರಕಾರಕ್ಕೂ ಆಗಿಬಂದಿಲ್ಲ. ವಾಜಪೇಯಿ ಅಧಿಕಾರದಲ್ಲಿದ್ದಾಗ ಲಾಹೋರಿಗೆ ಭೇಟಿ ನೀಡಿಬಂದ ನಂತರ ಕಾರ್ಗಿಲ್ ಕದನ ನಡೆಯಿತು. ಈಗ ಮೋದಿ ಲಾಹೋರಿಗೆ ಹೋಗಿ ಬಂದಮೇಲೆ ಪಠಾಣ್‌ಕೋಟ್ ಹಲ್ಲೆ ನಡೆಯಿತು. ನಡೆಯಬೇಕಾಗಿದ್ದ ಮಾತುಕತೆಗಳು ಸ್ಥಗಿತಗೊಂಡಿತು. ಎರಡು ಘಟನೆಗಳ









**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಕಾಲದಲ್ಲೂ ಪಾಕಿಸ್ತಾನದಲ್ಲಿ ಪ್ರಧಾನಿಯಾಗಿದ್ದವರು ನವಾಜ್ ಷರೀಫರೆ. ಈ ಅವಧಿಯಲ್ಲಿ ಎರಡೂ ದೇಶಗಳ ಅಧಿಕಾರಿಗಳ ಮಟ್ಟದ ಮಾತುಕತೆಗಳು ನಡೆದಿದ್ದರೂ, ಏನೊಂದೂ ಪ್ರಗತಿಯಾಗದೆ ಎಲ್ಲವೂ ಭಯೋತ್ಪಾದಕ ಕೃತ್ಯಗಳಿಂದ ಕೊಚ್ಚಿಹೋಗಿವೆ. ಪಾಕಿಸ್ತಾನದ ನಾಗರಿಕ ಸರಕಾರ ಮತ್ತು ಅಲ್ಲಿನ ಸೇನೆಯ ಮಧ್ಯೆ ಹೊಂದಾಣಿಕೆ ಇಲ್ಲದಿರುವುದೇ ಇದಕ್ಕೆ ಕಾರಣ. ಪಾಕಿಸ್ತಾನದಲ್ಲಿ ಸೇನೆಯ ಪ್ರಾಬಲ್ಯ ಎಂಥದ್ದೆಂಬುದು ರಹಸ್ಯವೇನಲ್ಲ. ಹೆಚ್ಚುಕಡಿಮೆ ದೇಶದಲ್ಲಿ ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಸೇನಾಡಳಿತವೇ ಇದ್ದುದನ್ನು ಮರೆಯುವಂತಿಲ್ಲ. ಸೇನೆಯ ಪರವಾನಗಿ ಇಲ್ಲದೆ ನಾಗರಿಕ ಸರಕಾರ ಹೆಜ್ಜೆ ಮುಂದಿರಿಸುವಂತಿಲ್ಲ. ಇದು ನವಾಜ್ ಷರೀಫರಿಗೂ ಗೊತ್ತು, ಪ್ರಧಾನ ಮಂತ್ರಿ ಮೋದಿಯವರಿಗೂ ಗೊತ್ತು. ಹಾಗಾಗಿ ಭಾರತ–ಪಾಕಿಸ್ತಾನಗಳ ಸಂಬಂಧದಲ್ಲಿ ಯಾವುದೇ ಮಟ್ಟದಲ್ಲಿ ಗಂಭೀರವಾದ ಮಾತುಕತೆಗಳು ನಡೆಯಬೇಕಾದರೂ ಪಾಕ್ ಸೇನೆಯ ಸಹಕಾರ ಅಗತ್ಯವಾಗುತ್ತದೆ.

ಎರಡೂ ದೇಶಗಳು ಎಲ್ಲ ವಿವಾದಗಳನ್ನೂ ನೇರವಾಗಿ ಮೂರನೆಯವರ ಮಧ್ಯಸ್ತಿಕೆ ಇಲ್ಲದೆ ಮಾತುಕತೆಯಿಂದ ಬಗೆಹರಿಸಿಕೊಳ್ಳಬೇಕೆಂಬುದಾಗಿ ಒಪ್ಪಂದಕ್ಕೆ ಬಂದು ಐವತ್ತು ವರ್ಷಗಳಿಗೂ ಮೇಲಾಗಿದೆ. ಆದರೆ ಇದುವರೆಗೆ ಗಂಭೀರವಾದ ಮಾತುಕತೆಗಳು ಜರುಗಿಲ್ಲ. ವಾಜಪೇಯಿ ಪ್ರಧಾನಿಯಾಗಿದ್ದಾಗ ಪಾಕಿಸ್ತಾನದ ಅಧ್ಯಕ್ಷರಾಗಿದ್ದ ಜನರಲ್ ಮುಷಾರಫ್ ಮಧ್ಯೆ ಆಗ್ರಾದಲ್ಲಿ ಮಾತುಕತೆ ನಡೆದರೂ ಯಶಸ್ವಿಯಾಗಲಿಲ್ಲ. ಜಂಟಿ ಹೇಳಿಕೆ ನೀಡಲಾಗಲಿಲ್ಲ. ಯುಪಿಎ ಸರಕಾರ ಅಧಿಕಾರದಲ್ಲಿದ್ದಾಗಲೂ ಮಾತುಕತೆಗಳನ್ನು ಮುಂದುವರಿಸಲು ನಡೆಸಿದ ಪ್ರಯತ್ನಗಳು ಫಲಕಾರಿಯಾಗಲಿಲ್ಲ. ಮುಖ್ಯವಾಗಿ ಕಾಶ್ಮೀರದ ಸಮಸ್ಯೆ ಎರಡೂ ದೇಶಗಳ ಮಧ್ಯೆ ಇರುವ ಕಗ್ಗಂಟು. ಒಂದು ಸಮಯದಲ್ಲಿ ಆಕ್ರಮಿತ ಕಾಶ್ಮೀರ ಪ್ರದೇಶವನ್ನೇ ಅಂತರರಾಷ್ಟ್ರೀಯ ಗಡಿಯಾಗಿ ಮಾನ್ಯಮಾಡುವ ವಿಚಾರದಲ್ಲಿ ಒಮ್ಮತ ಮೂಡಿತ್ತು. ಆದರೆ ಅದು ಹೆಚ್ಚು ಕಾಲ ನಿಲ್ಲಲಿಲ್ಲ. ಪಾಕಿಸ್ತಾನದ ರಾಜಕೀಯದಲ್ಲಿ, ಸೇನೆಯಲ್ಲಿ ಗೊಂದಲದ ವಾತಾವರಣ ಉಂಟಾದುದರಿಂದ ಅದು ಹಾಗೆಯೇ ಮುರಿದುಬಿತ್ತು.

ಅಂತರರಾಷ್ಟ್ರೀಯ ಸಮಾವೇಶಗಳಲ್ಲಿ ಪ್ರಧಾನಿಗಳು ಭೇಟಿಯಾಗುವುದು, ಮುಗುಳ್ನಗೆಯಿಂದ ಹಸ್ತಲಾಘವ ನೀಡಿ, ಮಾತುಕತೆಗಳನ್ನು ನಡೆಸಲು ಮುಂದಾಗುವುದು ಸಾಮಾನ್ಯ. ಇವೆಲ್ಲ ಮಾಧ್ಯಮಗಳಿಗೆ ಗ್ರಾಸ ಒದಗಿಸುವುದಕ್ಕೆ ಮಾತ್ರ ಸೀಮಿತ. ಪ್ರಧಾನಿ ನರೇಂದ್ರ ಮೋದಿಯವರ ಅಧಿಕಾರ ಸ್ವೀಕಾರ ಸಮಾರಂಭದಲ್ಲಿ ಪಾಕ್ ಪ್ರಧಾನಿ ನವಾಜ್ ಷರೀಫ ಹಾಜರಾಗಿದ್ದಾಗಲಿ, ಪ್ರಧಾನಿ ನರೇಂದ್ರ ಮೋದಿ ದಿಢೀರ್ ಎಂದು ಲಾಹೋರಿಗೆ ಭೇಟಿ ನೀಡಿ, ಪಾಕ್ ಪ್ರಧಾನಿಗೆ ಹುಟ್ಟುಹಬ್ಬದ ಶುಭ ಕೋರಿದ್ದಾಗಲಿ, ಅವರ ಮೊಮ್ಮಗಳ ಮದುವೆಯಲ್ಲಿ ಭಾಗವಹಿಸಿದ್ದಾಗಲಿ ಪ್ರಾಮುಖ್ಯವಾದ ಸುದ್ದಿಯಾದೀತು ಅಷ್ಟೆ. ರಾಜಕೀಯವಾಗಿ ಅದು ಒಂದು ಸೌಜನ್ಯದ ಸಂದರ್ಭ. ಅದಕ್ಕಿಂತ ಹೆಚ್ಚು ಅರ್ಥ ನೀಡುವುದು ಸರಿಯಲ್ಲ. ಇಂಥ ಸಜ್ಜನಿಕೆ ಮಾತುಕತೆಗಳ ಪ್ರಾರಂಭಕ್ಕೆ ಅನುಕೂಲವಾದ ವಾತಾವರಣ ಕಲ್ಪಿಸಬಹುದು ಅಷ್ಟೆ. ಗಂಭೀರವಾದ ಮಾತುಕತೆಗಳಿಗೆ ಪೂರ್ವಸಿದ್ಧತೆ ಬೇಕು ಎರಡೂ ಕಡೆ. ನಿಜವಾದ ಪ್ರಗತಿ ಸಾಧಿಸಲು ಎರಡೂ ಕಡೆ ರಾಜಕೀಯ ಇಚ್ಛಾಶಕ್ತಿ ಬೇಕು. ಹಾಗಿಲ್ಲದೇ ಹೋದರೆ ಕ್ಷುಲ್ಲಕ ಕಾರಣಗಳಿಂದಲೂ ಮಾತುಕತೆಗೆ ಅಡ್ಡಿಯಾಗುತ್ತದೆ.

ಪಾಕ್ ರಾಜಧಾನಿ ಇಸ್ಲಾಮಾಬಾದ್‌ನಲ್ಲಿ ಜರುಗಬೇಕಾಗಿದ್ದ ಅಧಿಕಾರಿಗಳ ಮಟ್ಟದ ಮಾತುಕತೆಗಳ ವಿಚಾರದಲ್ಲಿ ಆದದ್ದೂ ಹಾಗೆಯೆ. ಪಠಾನ್‌ಕೋಟ್ ಭಯೋತ್ಪಾದನಾ ಕೃತ್ಯ ಜರುಗದೇ ಹೋಗಿದ್ದರೆ ಇಷ್ಟು ಹೊತ್ತಿಗೆ ಮಾತುಕತೆ ಪ್ರಾರಂಭವಾಗುತ್ತಿತ್ತೇನೊ! ಮಾತುಕತೆಯನ್ನು ರದ್ದುಗೊಳಿಸದೆ ಮುಂದಕ್ಕೆ ಹಾಕಿರುವುದು ಪರಸ್ಪರ ಎರಡೂ ದೇಶಗಳ ಸಮ್ಮತಿಯಿಂದ. ಹಾಗೆಯೇ ಎರಡೂ ದೇಶಗಳು ಪಠಾನ್‌ಕೋಟ್ ಭಯೋತ್ಪಾದನಾ ಕೃತ್ಯದಲ್ಲಿ ತೊಡಗಿದ್ದವರ ಹಿನ್ನೆಲೆ ಕುರಿತು ಸಂಯುಕ್ತವಾಗಿ ತನಿಖೆ ನಡೆಸಲು ಎರಡೂ ಸರಕಾರಗಳು ನಿರ್ಧರಿಸಿರುವುದು ಸರಿಯಾದ ಕ್ರಮ. ಎರಡೂ ದೇಶಗಳ ಸಂಬಂಧಗಳನ್ನು ಉತ್ತಮಗೊಳಿಸಬೇಕಾದರೆ ಸಾಹಸ ಪ್ರವೃತ್ತಿಗಿಂತ, ಸಾಮರಸ್ಯದ ಕ್ರಮ ಅತ್ಯಗತ್ಯ. ಮಾತುಕತೆಗಳು ಫಲಕಾರಿಯಾಗಲು ಅನ್ಯ ಮಾರ್ಗವಿಲ್ಲ.

ಕಾವ್ಯಲೋಕ

## ಬಿನ್ನಹ

ಹಿಂತಿರುಗದಿರು ಹಿಮ್ಮೆಟ್ಟದಿರು
ಜಗದ ನಿಯಮವ.
ದಾರಿ ಹೋಕನಾದ ಕಾಲವೇ
ತಣಿಯದ ನಾಡಿನೊಳು
ಕುಹುಕದ ನೆಲವನ್ನೊಮ್ಮೆ ಕಿರಿದಾಗಿಸು;
ಸಿಗಲಾರದ ನಿನ್ನ ಸಿಹಿಚೇತನವ
ಚೇತರಿಕೆಯೊಂದಿಗೆ ಬಡಿಸು;
ಹಸಿವಿನ ಬಟ್ಟಲು ತುಂಬಲಿ.

ಬಾಯಾರಿದ ಬಾಳಿನೊಳ್
ಭಾವೈಕ್ಯತೆಯ ಮೂಡಿಸು;
ಭಾವಪೂರ್ಣ ಹರಕೆಯ
ಮುಡಿಯೊಂದಿಗೆ
ಮಾಯದ ಗಾಯವ ಮಾಯಿಸು.

ಹಿಂತಿರುಗಿ ನೋಡದಿರು
ನಿಲುಮೆಯ ನೆಲೆಯೊಳಗೆ
ಬಂಧಿಯಾಗದಿರು.

ನೋವು–ನಲಿವುಗಳ ಸಸಿಯೊಳಗೆ
ಕಗ್ಗತ್ತಲೆಯೆಂಬ ನಾಳೆಯ ಕಿತ್ತೆಸೆದು
ಬಾಳ ಹಸನಾಗಿಸು.
ನಿನ್ನೊಂದಿಗೆ ಸಾಗುವೆ
ನಿರಾಕಾರಿಯಾಗಿ.
ಆವಿಯಾಗುವೆ ನಾ
ತನ್ನದಲ್ಲದ ತನ್ನೊಳಗೆ
ಅನನ್ಯತೆಯ ಬೊಗಸೆಯೊಳಗೆ
ಮೂಡಿಸು ನವಚೈತನ್ಯವ.

ನಾಗರಿಕ ಪ್ರಪಂಚದೊಳಗೆ
ನಾಂದಿಯಾಡದಿರು;
ಚಿಗುರೊಡೆದ ಬೀಜಕ್ಕೆ.
ಬೇಲಿಯಾಗದಿರು ನಾನೆಂಬ
ಅಹಂಕಾರದ ಕೂಸಿಗೆ.
ಎಂದೆಂದಿಗೂ ಖಾಲಿಯಾಗದಿರು
ಬುದ್ಧಿಯೆಂಬ ಬುಟ್ಟಿಯೊಳಗಿನ
ಚಿಟ್ಟೆಯೊಳಗೆ.

ಕಾವೇರಿ ಎಸ್.ಎಸ್.
ಕೇರಾಫ್ : ಎಸ್. ಬಿ. ಕಾಳಿಂಗಪ್ಪ
ಕುಶಾಲನಗರ ಬಡಾವಣೆ, ಸಕಲೇಶಪುರ
ಹಾಸನ ಜಿಲ್ಲೆ – ೫೭೩ ೧೩೪

(ಈ ತಿಂಗಳು : ೩ನೇ ಪುಟದಿಂದ)
ಆಡಳಿತದ ಭರವಸೆ ನೀಡಿ ಅಧಿಕಾರಕ್ಕೆ ಬಂದ ಈ ಸರಕಾರದ ಮೇಲೆ ರಾಮಮಂದಿರ ನಿರ್ಮಾಣದ ಒತ್ತಡ ಬರುತ್ತಿದೆ ಸಂಘಪರಿವಾರದಿಂದ. ಕಳೆದ ವರ್ಷ ಡಿಸೆಂಬರ್ ಆರರಂದು (ಅದು ಬಾಬ್ರಿ ಮಸೀದಿ ಧ್ವಂಸ ಮಾಡಿದ ದಿನ) ವಿಶ್ವ ಹಿಂದು ಪರಿಷತ್ತಿನ ಯುವಜನ ವಿಭಾಗ ಭಜರಂಗ ದಳ 'ಶೌರ್ಯ ದಿನ'ವನ್ನಾಗಿ ಆಚರಿಸಿತು. ಬಾಬ್ರಿ ಮಸೀದಿ ಧ್ವಂಸಮಾಡಿ ಇಡೀ ದೇಶ ತಲೆತಗ್ಗಿಸುವಂತೆ ಮಾಡಿದ್ದು ಮಹಾಶೌರ್ಯದ ಪ್ರತಾಪ ಹಿಂದುತ್ವವಾದಿಗಳಿಗೆ. ಮಸೀದಿ ಇರುವ ಸ್ಥಳವನ್ನು ನೆಲಸಮ ಮಾಡಿ ಅಲ್ಲಿ ಭವ್ಯವಾದ ರಾಮಮಂದಿರ ನಿರ್ಮಿಸುವುದು ಅವರ ಧ್ಯೇಯ. ಅದಕ್ಕಾಗಿ ಸಕಲ ಸಿದ್ಧತೆಗಳನ್ನು ನಡೆಸಿದ್ದಾರೆ ವಿಶ್ವ ಹಿಂದೂ ಪರಿಷತ್ತಿನ ವರಿಷ್ಠರು. ೨೦೧೯ರೊಳಗೆ, ಅಂದರೆ ಮೋದಿ ಸರಕಾರದ ಆಡಳಿತಾವಧಿ ಮುಗಿಯುವ ಹೊತ್ತಿಗಾಗಲೆ ರಾಮಮಂದಿರದ ನಿರ್ಮಾಣವಾಗಬೇಕು ಎನ್ನುವುದೇ ಅವರ ನಿರ್ಧಾರ. ಈಚೆಗೆ ಎಲ್ಲ ತರಲೆ ವ್ಯವಹಾರಗಳಿಗೆ ಪ್ರಸಿದ್ಧರಾಗಿರುವ ಭಾಜಪ ಪಾರ್ಲಿಮೆಂಟ್ ಸದಸ್ಯ ಸುಬ್ರಮಣ್ಯಸ್ವಾಮಿ ರಾಮಮಂದಿರ ನಿರ್ಮಾಣಕ್ಕೆ ಕೈ ಹಾಕಿದ್ದಾರೆ. ಇವರ ಆರೆಸ್ಸೆಸ್ ಪೂರ್ವೇತಿಹಾಸ ಎಲ್ಲರಿಗೂ ತಿಳಿದದ್ದೆ. ಮಹಾಬುದ್ಧಿವಂತ ಅಷ್ಟೇ ವಕ್ರಬುದ್ಧಿ ಇರುವ ವ್ಯಕ್ತಿ ಈತ. ಸದಾ ಮಾಧ್ಯಮಗಳಲ್ಲಿ ಸುದ್ದಿ ಮಾಡುವುದೊಂದೇ ಗೀಳು ಈತನಿಗೆ. ಗಾಳಿಯಲ್ಲಿ ಗುದ್ದಾಡುವುದು ಎಂದರೆ ಪ್ರಿಯ ಈತನಿಗೆ. ರಾಮಮಂದಿರದ ತಕರಾರು ಈಗ ಸರ್ವೋಚ್ಚ ನ್ಯಾಯಾಲಯದ ಅಂಗಳದಲ್ಲಿದೆ. ಹಲವಾರು ದಶಕಗಳಿಂದ ನ್ಯಾಯಾಲಯದ ಮೆಟ್ಟಿಲೇರಿ ತೂಗಾಡುತ್ತಿರುವ ಈ ಮೊಕದ್ದಮೆ ಶೀಘ್ರವಾಗಿ ಇತ್ಯರ್ಥವಾಗಬೇಕೆಂಬುದು ವಿಶ್ವ ಹಿಂದೂ ಪರಿಷತ್ತಿನ ಆಶಯ. ಸುಬ್ರಮಣ್ಯಸ್ವಾಮಿ ಪ್ರಧಾನಿ ಮೋದಿಯವರಿಗೆ ಪತ್ರ ಬರೆದು ಸರಕಾರ ಸುಪ್ರೀಮ್ ಕೋರ್ಟ್‌ಗೆ ಬಾಬ್ರಿ ಮಸೀದಿ ವಿವಾದವನ್ನು ಇತ್ಯರ್ಥಗೊಳಿಸಲು ದೈನಂದಿನ ವಿಲೇವಾರಿ ಆಧಾರದ ಮೇಲೆ ವಿಚಾರಣೆ ನಡೆಸಲು ಅರ್ಜಿ ಸಲ್ಲಿಸಬೇಕೆಂದು ಒತ್ತಾಯ ಮಾಡಿದ್ದಾರೆ. ಸರಕಾರಕ್ಕೆ ಹದಿನೈದು ದಿನಗಳ ಗಡುವನ್ನು ನೀಡಿದ್ದಾರೆ. ಮುಂದೇನು ಮಾಡುತ್ತಾರೋ ನೋಡೋಣ. ವಿಶ್ವ ಹಿಂದೂ ಪರಿಷತ್ ನಾಯಕರು ಮುಸ್ಲಿಮ್ ನಾಯಕರ ಮನವೊಲಿಸಿಕೊಳ್ಳಲು ನಾನಾ ಒತ್ತಡಗಳನ್ನು, ಆಮಿಷಗಳನ್ನು ಒಡ್ಡುತ್ತಿದ್ದಾರೆ. ನ್ಯಾಯಾಲಯದ ತೀರ್ಪಿಗೆ ಕಾಯದೆ ಬೇರೊಂದು ಸ್ಥಳದಲ್ಲಿ ಮಸೀದಿ ನಿರ್ಮಿಸಿಕೊಳ್ಳಲು ವ್ಯವಸ್ಥೆ ಮಾಡುವುದಾಗಿ ಹೇಳುತ್ತಿದ್ದಾರೆ. ಹಿಂದುತ್ವವಾದಿಗಳ ಪ್ರಕಾರ ಅಯೋಧ್ಯೆಯಲ್ಲಿ ರಾಮಮಂದಿರದ ನಿರ್ಮಾಣ 'ರಾಷ್ಟ್ರೀಯ ಪುನಶ್ಚೇತನ'ದ ಸಂಕೇತ. ಮುಂದಿನ ದಿನಗಳಲ್ಲಿ ಈ ಒತ್ತಡ ಇನ್ನೂ ಹೆಚ್ಚಲಿದೆ.

* * *

ಪಶ್ಚಿಮ ಬಂಗಾಳದ ಮಾಲ್ಡಾ ನಗರ ಈಗ ದೊಡ್ಡ ಸುದ್ದಿ ಮಾಡಿದೆ. ಜನವರಿ ೩ರಂದು ಅಲ್ಲಿನ ಕಾಲಿಯಚಾಕ್ ಪೊಲೀಸು ಠಾಣೆಯ ಮೇಲೆ ನಡೆದ ದಾಳಿಯೇ ಗಲಭೆಗಳಿಗೆ ಮೂಲ ಕಾರಣ. ಉತ್ತರ ಪ್ರದೇಶದ ಸಚಿವ ಆಜಂಖಾನ್ ಮತ್ತು ಹಿಂದೂ ಮಹಾಸಭಾ ನಾಯಕ ತಿವಾರಿ ಮಧ್ಯೆ ಕೆಸರೆರಚಾಟವೇ ಈ ಪ್ರದೇಶದಲ್ಲಿ ಮತೀಯ ಬಡಿದಾಟಗಳಿಗೆ ಕಾರಣ. ಮುಖ್ಯಮಂತ್ರಿ ಮಮತಾ ಬ್ಯಾನರ್ಜಿ ಮಟ್ಟಿಗೆ ಅದು ಮಾಮೂಲಿ ಘಟನೆ. ಯಾವುದೇ ಕ್ರಮ ಕೈಗೊಳ್ಳದೆ ತೆಪ್ಪಗಿದ್ದಾರೆ ತಮಗೂ ಅದಕ್ಕೂ ಸಂಬಂಧವೇ ಇಲ್ಲ ಎನ್ನುವಂತೆ. ಪ್ರಾಯಶಃ ಬಡಿದಾಡಿಕೊಳ್ಳಲಿ ಎಂಬ ಧೋರಣೆ ಇರಬೇಕು. ಎಲ್ಲ ಚುನಾವಣೆಗಳಲ್ಲಿ ಮತಗಳ ಲೆಕ್ಕಾಚಾರ ಆದರೆ ಆಗೋದು ಹೀಗೆಯೇ. ಹಿಂದುತ್ವವಾದಿಗಳು ಪಶ್ಚಿಮ ಬಂಗಾಳದಲ್ಲಿ ಈ ಸಲದ ಚುನಾವಣೆಗಳಲ್ಲಿ ನೆಲೆ ಪಡೆದುಕೊಳ್ಳಲು ಸತತವಾದ ಪ್ರಯತ್ನ ನಡೆಸುತ್ತಿದ್ದಾರೆ. ಇವರಿಗೆ ಅಮಿತ್ ಷಾ – ಮೋದಿ ಜೋಡಿಯ ಆಶೀರ್ವಾದ, ಬೆಂಬಲವೂ ಇದೆ. ಮಾಲ್ಡಾದಲ್ಲಿ ನಡೆದಿರುವ ಗಲಭೆಗಳ ಲಾಭ ಪಡೆದುಕೊಳ್ಳಲು ಹಿಂದುತ್ವವಾದಿಗಳು ಲೆಕ್ಕ ಹಾಕುತ್ತಿದ್ದಾರೆ. ಇಲ್ಲಿನ ಪ್ರಕರಣದ ಬಗ್ಗೆ ನ್ಯಾಯಾಂಗ ವಿಚಾರಣೆ ನಡೆದಾಗಲೇ ನಿಜ ಸ್ಥಿತಿ ಹೊರಬರುವುದು. ಮಮತಾ ಬ್ಯಾನರ್ಜಿ ಸರಕಾರ ನಿಷ್ಪಕ್ಷಪಾತವಾದ ವಿಚಾರಣೆಗೆ ಅನುವು ಮಾಡಿಕೊಡುವುದೇ ?

* * *

ಕರ್ನಾಟಕ ರಾಜ್ಯ ಸರಕಾರದ ಮುಖ್ಯಮಂತ್ರಿ ಸಿದ್ದರಾಮಯ್ಯ ಅಧಿಕಾರಕ್ಕೆ ಬಂದು ಎರಡು ವರ್ಷದ ಮೇಲಾಯಿತು. ಅವರ ವಿಷಯದಲ್ಲಿ ಜನ ಇರಿಸಿಕೊಂಡಿದ್ದ ನಿರೀಕ್ಷೆಗಳೆಲ್ಲ ಹುಸಿಯಾಗಿವೆ. ಯಾವುದೊಂದು ಯೋಜನೆಯೂ ಕಾರ್ಯಗತವಾಗಿಲ್ಲ. ಆ ಭಾಗ್ಯ ಈ ಭಾಗ್ಯ ಯೋಜನೆಗಳನ್ನೇನೋ ಪ್ರಕಟಿಸುತ್ತ ಬಂದಿದ್ದಾರೆ. ಅದು ತಲುಪ ಬೇಕಾದವರಿಗೆ ತಲುಪುತ್ತಿಲ್ಲ. ಹೊಸ ವರ್ಷದ ಕೊಡುಗೆಯಾಗಿ ಸರಕಾರ ಹಾಲಿನ ಬೆಲೆ ನಾಲ್ಕು ರೂಪಾಯಿ ಏರಿಸಿತು ಒಂದು ಲೀಟರಿಗೆ. ಅದಕ್ಕೆ ಸರಿಹೊಂದುವಂತೆ ನಂದಿನಿಯ ಎಲ್ಲ ತಯಾರಿಕೆಯ ಬೆಲೆಯನ್ನೂ ಹೆಚ್ಚಿಸಿದೆ. ಬೆಲೆ ಏರಿಸಿದಾಗ ರೈತರಿಗೆ ಮೂರು ರೂಪಾಯಿ ನೀಡುವುದಾಗಿ ಹೇಳಲಾಗಿತ್ತು. ಆದರೆ ಸರಕಾರ ಕೈಗಿಟ್ಟದ್ದು ಎರಡೇ ರೂಪಾಯಿ. ಹಾಗೆಯೇ ಎಲ್ಲವನ್ನೂ ಸರಕಾರ ಅರೆಬರೆ ಮಾಡುತ್ತಿದೆ. ಸಚಿವ ಸಂಪುಟದಲ್ಲಿ ಮತ್ತು ಪಕ್ಷದಲ್ಲಿ ಸಾಮರಸ್ಯದ ಕೊರತೆ ಎದ್ದುಕಾಣುತ್ತಿದೆ. ಇದುವರೆಗೆ ಸಿದ್ದರಾಮಯ್ಯನವರಿಗೆ ನಿಗಮ ಮಂಡಳಿಗೆ ನೇಮಕಾತಿಯನ್ನೂ ಪೂರೈಸಲಾಗುತ್ತಿಲ್ಲ. ಅತೃಪ್ತಿ ಗುಂಪುಗಾರಿಕೆ ಯಾವತ್ತೂ ಕಾಂಗ್ರೆಸ್ಸಿನ ಹುಟ್ಟುಗುಣ. ಅದು ಸಿದ್ದರಾಮಯ್ಯ – ಪರಮೇಶ್ವರ ಜೋಡಿಯಲ್ಲಿ ಎದ್ದು ಕಾಣುತ್ತಿದೆ. ಯಡಿಯೂರಪ್ಪ ನಾಯಕತ್ವದ ಭಾಜಪ ಸರಕಾರವೇ ಎಷ್ಟೋ ವಾಸಿಯಾಗಿತ್ತು ಎಂಬ ಮಾತು ಕೇಳಿಬರುತ್ತಿದೆ. ಭ್ರಷ್ಟಾಚಾರದಲ್ಲಿ ಮುಳುಗಿ ಹೋಗಿದ್ದ ಭಾಜಪ ಸರಕಾರ ಮತ್ತೆ ಅಧಿಕಾರಕ್ಕೆ ಬಂದೀತೆ ಎಂಬ ಸಂಶಯ ಬರುತ್ತಿದೆ. ದಿಕ್ಕುದಿಶೆಯಿಲ್ಲದೆ ಆಡಳಿತ ಯಂತ್ರ ಸಾಗುತ್ತಿರುವುದೇ ಜನರಲ್ಲಿ ಈ ಬಗೆಯ ಭಾವನೆಗಳು ಬೆಳೆಯುತ್ತಿರುವುದಕ್ಕೆ ಸಾಕ್ಷಿ. ಶ್ರೀರಾಮ ಸೇನೆಯು ರಾಜ್ಯದಲ್ಲಿ ನಡೆಸುತ್ತಿರುವ ಪೋಲೀಸುಗಿರಿ ಎಲ್ಲರಿಗೂ ಗೊತ್ತಿರುವ ವಿಷಯ. ಅದರ ನಾಯಕ ಮುತಾಲಿಕ್ ಬಾಯಿಬಿಟ್ಟರೆ ದ್ವೇಷದ ಜ್ವಾಲೆ ಉರಿಯುತ್ತದೆ. ಆತನ ಮೇಲೆ ಪೊಲೀಸರು ಹಲವು ಮೊಕದ್ದಮೆಗಳನ್ನು ದಾಖಲು ಮಾಡಿದ್ದಾರೆ. ಸರಕಾರ ಎಲ್ಲ ಮೊಕದ್ದಮೆಗಳನ್ನೂ ವಾಪಸ್ಸು ತೆಗೆದುಕೊಳ್ಳುವ ಚಿಂತನೆ ನಡೆಸಿತ್ತು. ಸಾರ್ವಜನಿಕರಿಂದ ಗಾಬರಿಯ ಪ್ರತಿಕ್ರಿಯೆ ಬಂದದ್ದರಿಂದ ಸ್ವತಃ ಸಿದ್ದರಾಮಯ್ಯನವರೇ ಅಂಥ ವಿಚಾರ ಯಾವುದೂ ಇಲ್ಲ ಎಂದು ಹೇಳಬೇಕಾಗಿ ಬಂತು. ಆದರೆ ತನಿಖೆ ನಡೆಸುವ ಪೊಲೀಸು ಅಧಿಕಾರಿಗಳು ಮಾತ್ರ ಮುತಾಲಿಕ್ ಸ್ವತಂತ್ರವಾಗಿ ಓಡಾಡಿಕೊಂಡಿರುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ. ಇದುವರೆಗೆ ಯಾವ ಮೊಕದ್ದಮೆಯಲ್ಲೂ ಕೂಡ ಅವರಿಗೆ ಶಿಕ್ಷೆಯಾಗಿಲ್ಲ. ವರ್ಷಗಟ್ಟಳೆ ಎಳೆದು ಎಳೆದು ಕೊನೆಗೊಂದು ದಿನ ಮುತಾಲಿಕ್ ಮುಕ್ತವಾಗುವುದಂತೂ ಖಚಿತ. ಇದು ಸರಕಾರದ ವೈಖರಿ. ಎಲ್ಲ ವಿಚಾರಗಳಲ್ಲೂ ಸಿದ್ದರಾಮಯ್ಯ ಸರಕಾರ ಮುಗ್ಗರಿಸುತ್ತಿದೆ.

* * *

ಹಳೆಯ ಲೋಕಾಯುಕ್ತ ಭಾಸ್ಕರರಾವ್ ಹೋಗಿ ಸಾಕಷ್ಟು ದಿನಗಳು ಕಳೆಯಿತು. ಆದರೆ ಕರ್ನಾಟಕ ಸರಕಾರಕ್ಕೆ ಇನ್ನೂ ಲೋಕಾಯುಕ್ತರನ್ನು ನೇಮಕ ಮಾಡುವುದಕ್ಕಾಗಿಲ್ಲ. ಕನ್ನಡ ನಾಡಿನಲ್ಲಿ ಕಳಂಕರಹಿತ ಪ್ರಾಮಾಣಿಕರಾರೂ ಸರಕಾರದ ಕಣ್ಣಿಗೆ ಬೀಳದಿರುವುದು ನಾಚಿಕೆಗೇಡು. ಹಲವಾರು ನಿವೃತ್ತ ನ್ಯಾಯಾಧೀಶರುಗಳ ಹೆಸರುಗಳು ಮಾಧ್ಯಮಗಳಲ್ಲಿ ಬಂದುಹೋಗಿವೆ. ಎಲ್ಲರ ಮೇಲೂ ಒಂದಲ್ಲ ಒಂದು ಆರೋಪಗಳೂ ಇವೆ. ಸರಕಾರಕ್ಕೆ ಲೋಕಾಯುಕ್ತ ಸಂಸ್ಥೆಯನ್ನು ಬಲಗೊಳಿಸುವ ಇಚ್ಛಾಶಕ್ತಿ ಇಲ್ಲ ಎಂಬುದು ಸ್ಪಷ್ಟವಾಗುತ್ತಿದೆ. ಅದನ್ನು ದುರ್ಬಲಗೊಳಿಸಿ ನಿರುಪಯುಕ್ತವಾಗಿಸುವುದೇ ಗುರಿ. ನ್ಯಾಯಮೂರ್ತಿಗಳಾದ ವೆಂಕಟಾಚಲಯ್ಯ, ಸಂತೋಷ ಹೆಗ್ಡೆ ಕಾಲಾವಧಿ ಮುಗಿದಮೇಲೆ ಲೋಕಾಯುಕ್ತ ಮೂಲೆಗುಂಪಾಗಿ, ಮುಖಕ್ಕೆ ಮಸಿ ಬಳಿಸಿಕೊಂಡಿದೆ. ಅಂದಹಾಗೆ ಇದುವರೆಗೆ ಲೋಕಾಯುಕ್ತರು ಅಧಿಕಾರಿಗಳ ಮೇಲೆ ನೂರಾರು ದಾಳಿ ನಡೆಸಿದ್ದಾರೆ. ಸಾವಿರಾರು ಕೋಟಿ ರೂಪಾಯಿಗಳ ನಗದು, ಒಡವೆ, ಆಸ್ತಿಪಾಸ್ತಿಗಳನ್ನು ವಶಪಡಿಸಿಕೊಂಡಿದ್ದಾರೆ. ಮಾಧ್ಯಮಗಳಲ್ಲಿ ಸಾಕಷ್ಟು ಪ್ರಚಾರ ಗಿಟ್ಟಿಸಿವೆ, ಇಂಥ ದಾಳಿಗಳು. ಆದರೆ ಇದುವರೆಗೆ ಯಾವೊಬ್ಬ ಅಧಿಕಾರಿಯೂ ಶಿಕ್ಷೆಗೆ ಗುರಿಯಾಗಿರುವುದು ಮಾತ್ರ ವರದಿಯಾಗಿಲ್ಲ. ಅಕ್ರಮವಾಗಿ ಸಂಗ್ರಹಿಸಿಕೊಂಡಿದ್ದ ಆಸ್ತಿಪಾಸ್ತಿಗಳೆಲ್ಲ ಏನಾದುವು ? ಇದು ಕಾಡುತ್ತಿರುವ ಪ್ರಶ್ನೆ. ಉಪಲೋಕಾಯುಕ್ತ ಆಡಿ ವಿಚಾರದಲ್ಲಿ

ಸರಕಾರ, ವಿಧಾನಸಭೆಯ ಸ್ಪೀಕರ್ ವರ್ತನೆ ಜನರಲ್ಲಿ ಸಂದೇಹ ಉಂಟುಮಾಡಿದೆ. ಆಡಿಯವರು ದೋಷಮುಕ್ತ ಎಂದು ಒಮ್ಮೆ ಹೇಳಿದರೆ, ಇನ್ನೊಮ್ಮೆ ಆರೋಪಗಳು ದೃಢಪಟ್ಟಿವೆ ಎಂದು ಮಾತು ಕೇಳಿಬರುತ್ತಿದೆ. ಈತನ ವಿಚಾರ ಒಂದು ಕಡೆ ಕಾಂಗ್ರೆಸ್–ಭಾಜಪ ರಾಜಕೀಯವಾಗಿ, ಮುಖ್ಯಮಂತ್ರಿ ಸಿದ್ದರಾಮಯ್ಯ ಮತ್ತು ಸ್ಪೀಕರ್ ಕಾಗೋಡು ತಿಮ್ಮಪ್ಪ ನಡುವೆ ಮುಸುಕಿನ ಗುದ್ದಾಟವಾಗಿಬಿಟ್ಟಿದೆ. ಕಾಗೋಡು ಸಚಿವಾಕಾಂಕ್ಷಿಯಾಗಿದ್ದರು ಎನ್ನುವುದು ರಹಸ್ಯವೇನಲ್ಲ. ಒಟ್ಟಿನಲ್ಲಿ ಈ ಎಲ್ಲ ಜೇಡರ ಬಲೆಯಲ್ಲಿ ಸೊರಗುತ್ತಿರುವುದು ಲೋಕಾಯುಕ್ತ ಸಂಸ್ಥೆ. ಭ್ರಷ್ಟಾಚಾರಿಗಳಿಗೆ ಜೈ ಅನ್ನೋಣವೆ ?

✶ ✶ ✶

ಸರ್ಕಾರದ ಹಣ ಪಡೆದು ಖಾಸಗಿ ವಲಯವು ತನ್ನ ಶ್ರೇಷ್ಠತೆಯನ್ನು ಸಾರಿಕೊಳ್ಳುವುದು ನಮ್ಮಲ್ಲಿ ನಡೆದು ಬಂದ ದಾರಿ. ಶಿಕ್ಷಣ ಸಂಸ್ಥೆಗಳು ಸರ್ಕಾರಿ ಅನುದಾನ ಪಡೆದು ಸುಸೂತ್ರವಾಗಿ ನಡೆಯುವುದು ಈ ಸಾಲಿಗೆ ಸೇರುತ್ತದಾದರೂ ಅಲ್ಲಿ ಸಾರ್ವಜನಿಕರ ಹಿತವೂ ಲಕ್ಷ್ಯದಲ್ಲಿರುತ್ತದೆ. ಕರ್ನಾಟಕ ಸರ್ಕಾರವು ಕಳೆದ ಮೂವತ್ತು ವರ್ಷಗಳಿಂದ ಖಾಸಗಿ ಪದವಿ ಶಿಕ್ಷಣ ಕಾಲೇಜುಗಳಿಗೆ ಅನುದಾನವನ್ನು ರದ್ದುಮಾಡಿ ತನ್ನ ಸಾಮಾಜಿಕ ಜವಾಬ್ದಾರಿಯಿಂದ ನುಸುಳಿಕೊಂಡಿದೆ. ಆದರೆ ರಾಜಕೀಯ ಪಕ್ಷಗಳು ತಮ್ಮ ವರ್ಚಸ್ಸನ್ನು ಹಿಗ್ಗಿಸಿಕೊಳ್ಳಲು ಸರ್ಕಾರದ ಹಣವನ್ನು ಪಡೆದುಕೊಳ್ಳುವುದಕ್ಕೆ ಹಲವು ಮಾರ್ಗಗಳಿವೆ. ಹಿಂದೆ ಕಾಂಗ್ರೆಸ್ ಮಹಾಧಿವೇಶನ ನಡೆಯುವಾಗ ಜೊತೆ ಜೊತೆಯಲ್ಲಿ ವಸ್ತುಪ್ರದರ್ಶನವೊಂದನ್ನು ಏರ್ಪಡಿಸಲಾಗುತ್ತಿತ್ತು. ಈಗ ಅಂತಹ ಅಧಿವೇಶನಗಳನ್ನು ಆ ಪಕ್ಷ ಕೈಬಿಟ್ಟಿದೆಯಾದ್ದರಿಂದ ವಸ್ತುಪ್ರದರ್ಶನದ ಬದಲು ಕೇವಲ ವ್ಯಕ್ತಿಪ್ರದರ್ಶನ ನಡೆಯುತ್ತದೆ ! ವಸ್ತುಪ್ರದರ್ಶನದಲ್ಲಿ ಸಾರ್ವಜನಿಕ ಉದ್ದಿಮೆಗಳು, ಸಂಶೋಧನಾ ಸಂಸ್ಥೆಗಳು, ಸರ್ಕಾರದ ವಿಭಾಗಗಳು (ಕೃಷಿ, ಆರೋಗ್ಯ, ತೋಟಗಾರಿಕೆ, ಇತ್ಯಾದಿ) ಮುಂತಾಗಿ ಅನೇಕ ಶಾಖೆಗಳು ತಮ್ಮ ತಮ್ಮ ಮಳಿಗೆಗಳನ್ನು ಹೊಂದಿರುತ್ತಿದ್ದವು. ಖಾಸಗಿ ಮಳಿಗೆಗಳೂ ಇರುತ್ತಿದ್ದವು. ಮೈಸೂರಿನ ದಸರಾ ವಸ್ತುಪ್ರದರ್ಶನ ಇದಕ್ಕೊಂದು ಮಾದರಿಯಾಗಿ ಉಳಿದಿದೆ. ಬುದ್ಧಿವಂತ ಪ್ರಭಾವೀ ರಾಜಕಾರಣಿಗಳು ಈಗಲೂ ತಮ್ಮ, ತಮ್ಮ ಕುಟುಂಬದ ಮತ್ತು ಪಕ್ಷದ ಅಪಕ್ವ ಸಿದ್ಧಾಂತಗಳನ್ನು ಡಂಗೂರ ಸಾರಿ ಜನರಿಗೆ ಮುಟ್ಟಿಸಲು ಸರ್ಕಾರದ ಮಳಿಗೆಗಳನ್ನು ಹಾಕಿಸಿಕೊಂಡು ವೈಯಕ್ತಿಕ "ಸಾಧನೆ ಮತ್ತು ಸೇವೆ"ಗಳನ್ನು ಮುಕ್ತಕಂಠದಿಂದ ಹೊಗಳಿಕೊಳ್ಳುವುದು ಸಾಧ್ಯ. ಕೇಂದ್ರ ಸಚಿವ ಶ್ರೀ. ಅನಂತಕುಮಾರರು ಇತ್ತೀಚೆಗೆ ಬೆಂಗಳೂರಿನ ನ್ಯಾಷನಲ್ ಕಾಲೇಜ್ ಕ್ರೀಡಾಂಗಣದಲ್ಲಿ ಅಂಥದೊಂದು ಪ್ರದರ್ಶನ ಏರ್ಪಡಿಸಿ ತಮ್ಮ ಪತ್ನಿ ನಡೆಸುವ ಸ್ವಯಂಸೇವಾ ಸಂಸ್ಥೆಯ ಬಿರುದು–ಬಾವಲಿಗಳನ್ನು ಪ್ರಚಾರ ಮಾಡಿದರು. ಇಸ್ರೋ ಮುಂತಾದ ಸರ್ಕಾರಿ ಸಂಸ್ಥೆಗಳ ಮಳಿಗೆಗಳು ಮತ್ತು ಕೆಲವು ಖಾಸಗಿ ಮಾರಾಟಗಾರರು ಯೋಜಿಸಿಕೊಂಡಿದ್ದ ಮಳಿಗೆಗಳು ಮೂರು–ನಾಲ್ಕು ದಿನಗಳ ಇಡೀ ಸಂಭ್ರಮಕ್ಕೆ ಹಣಕಾಸು ಒದಗಿಸಿವೆ ಎಂದು ತೋರುತ್ತದೆ. ಸ್ವಂತದ ಹಣವೂ ಸ್ವಲ್ಪ ವೆಚ್ಚವಾಗಿರಬಹುದು. ಪ್ರದರ್ಶನದ ಜಾಹಿರಾತುಗಳಲ್ಲಿ ಮತ್ತು ಸಮಾರಂಭದಲ್ಲಿ ಸದರಿ ಸೇವಾಸಂಸ್ಥೆಯು ದಿನಂಪ್ರತಿ ೭೦೦೦ ಮಕ್ಕಳಿಗೆ ಬಿಸಿಯೂಟ ಒದಗಿಸುವ ವ್ಯವಸ್ಥೆ ಮಾಡುತ್ತಿರುವುದಾಗಿ ಹೇಳಿಕೊಂಡಿತ್ತು. ಆದರೆ ಜಗತ್ತಿಗೆಲ್ಲಾ ಗೊತ್ತಿರುವಂತೆ ಆ ಬಿಸಿಯೂಟಕ್ಕೆ ಸರ್ಕಾರವು ಈ ಸಂಸ್ಥೆಗೆ ಹಣ ನೀಡುತ್ತಿದೆ. ಒಂದು ಊಟಕ್ಕೆ ಆರು ರೂಪಾಯಿಯಂತೆಯೋ ಏನೋ ಅನುದಾನ ಪಡೆಯುವ ಸಂಸ್ಥೆಯು ಬಿಸಿಯೂಟವನ್ನು ಸ್ವತಃ ತಾನು ಆಯೋಜಿಸುತ್ತಿದೆಯೆಂದು ಹೇಳಿಕೊಳ್ಳುವುದು ಅಸಂಗತ. "ಸರ್ಕಾರದ ಅನುದಾನ ಪಡೆದು" ಎಂಬುದನ್ನು ಸೇರಿಸುವ ಸೌಜನ್ಯವು ಜಾಹಿರಾತುಗಳಲ್ಲಿ ಮತ್ತು ಹೇಳಿಕೆಗಳಲ್ಲಿ ಕಂಡುಬರಲಿಲ್ಲ. ನಮ್ಮ ಅನೇಕ ಖಾಸಗಿ ಸಂಸ್ಥೆಗಳು ಈ ಚಾಳಿಯನ್ನು ಬೆಳೆಸಿಕೊಂಡಿವೆ. "ಅಯ್ಯೋ ಎಂಥ ಮಹಾದಾನಿ, ಏನು ಶ್ರೇಷ್ಠ ಜನಸೇವೆ" ಎಂದು ಜನ ಮೂಕವಿಸ್ಮಿತರಾಗಿಬಿಡುತ್ತಾರೆ ಮತ್ತು ಆ ತೆರೆಯ ಹಿಂದೆ ಖಾಸಗಿ ವ್ಯಕ್ತಿಯು ಸಾರ್ವಜನಿಕ ಹಣದ ಒತ್ತಾಸೆಯಿಂದ ತನ್ನ ಮಾರಾಟ ಕಲೆಯನ್ನು ಬಳಸಿ ಜನರ ಕಣ್ಮಣಿಯಾಗಬಹುದು. ಚುನಾವಣೆಗಳಲ್ಲಿ ಅದರ ಪ್ರಯೋಜನವೂ ಉಂಟು. ಇತ್ತೀಚೆಗೆ ಮಾನ್ಯ ಅನಂತಕುಮಾರರ "ಹಿಂದಾಳತ್ವ"ದಲ್ಲಿ ಜರುಗಿದ ಮೇಳವು ಅವರ ಪಕ್ಷದ ಪ್ರಚಾರ ಸಾಧನವೂ ಆಗಿತ್ತು. ಬಹುಶಃ ಅವರ ಅಪಸಂಸ್ಕೃತಿಯ ಪ್ರದರ್ಶನವೂ ಆಯಿತೆನಿಸುತ್ತದೆ. ಅನಂತಕುಮಾರರ ಪತ್ನಿಯವರ ಹೆಸರಲ್ಲಿರುವ ಸದರಿ ಸೇವಾಸಂಸ್ಥೆಯು ಪ್ರದರ್ಶನದಲ್ಲಿ ಒಂದೆರಡು ಚಮತ್ಕಾರಗಳನ್ನು ಮಾಡಿತೋರಿಸಿತು : (ಅ) ಕೇಂದ್ರ ಸರ್ಕಾರದ ಹಲವು ಸಂಸ್ಥೆಗಳ ಹಿರಿಯ ಅಧಿಕಾರಿಗಳನ್ನು ಬರಮಾಡಿಕೊಂಡು ಸನ್ಮಾನಿಸುವುದು ಮತ್ತು ಅವರಿಂದ ಶ್ಲಾಘನೆಯ ಮಾತುಗಳನ್ನು ಹೇಳಿಸುವುದು, ಮತ್ತು (ಆ) ಕೇಂದ್ರದ ಗೃಹಮಂತ್ರಿ ಶ್ರೀ. ರಾಜನಾಥ ಸಿಂಗರನ್ನು ಕರೆಸಿ ಅವರಿಗೆ ಅದ್ಭುತ ಸ್ವಾಗತ ನೀಡುವುದು. ಸ್ವಾಗತ ಭಾಷಣ ಮಾಡಿದ ಯಾರೋ ಮಹನೀಯರು ಶ್ರೀ. ಸಿಂಗ್ ಅವರನ್ನು ಪರಿಚಯಿಸಿದ ಪರಿಯೇ ಮೋಜಿನದಾಗಿತ್ತು. "ನಮ್ಮ ದೇಶದ ಪ್ರಪ್ರಥಮ ಸೆಕ್ಯುಲರ್ ಗೃಹಮಂತ್ರಿ" ಇವರೆಂದು ಈ ಸ್ವಾಗತಕಾರ ಘೋಷಿಸಿಬಿಟ್ಟರು. ಅಲ್ಲಿದ್ದವರೊಬ್ಬರು ಪಕ್ಕದವರ ಕಿವಿಯಲ್ಲಿ ಉಸುರಿದರಂತೆ : "ನೋಡಿ, ಎಲ್. ಕೆ. ಅದ್ವಾನಿ ಅವರನ್ನು ಈತ ಬೇಕೆಂದೇ ಮರೆಯುತ್ತಿದ್ದಾನೆ. ಅಯೋಧ್ಯೆಯಲ್ಲಿ ಮಸೀದಿ ಉರುಳಿಸಿದ ವೀರ ಸೆಕ್ಯುಲರ್ ಅಲ್ಲವೇ ?" ಎಂದು. "ಮಾಯಾವತಿ ಸರ್ಕಾರಕ್ಕೆ ಬೆಂಬಲ ನೀಡಿದ್ದ ರಾಜನಾಥ ಸಿಂಗ್ ಸೆಕ್ಯುಲರ್ ಎಂಬುದರಲ್ಲಿ ಸಂಶಯವೇನಿದೆ ?" ಎಂದು ಅವರು ಉದ್ಗರಿಸಿದರಂತೆ. ಏನೇ ಇರಲಿ, ಸರ್ಕಾರದ ಹಣ ಪಡೆದು ಪಕ್ಷದ ಪ್ರಚಾರ ಮಾಡುವುದು ಹೇಗೆಂಬುದಕ್ಕೆ "ಮಾನ್ಯ ಅನಂತಕುಮಾರರ ಭರ್ಜರಿ ಶೋ" ಒಂದು ಮಾದರಿ ಉದಾಹರಣೆ ಎನ್ನಲಡ್ಡಿಯಿಲ್ಲ. ಪ್ರದರ್ಶನದ ಆರಂಭದಲ್ಲಿ ಸಾವಿರ ಕಂಠಗಳು ಒಟ್ಟಾಗಿ "ವಂದೇ ಮಾತರಂ" ಹಾಡಿದ್ದವೆಂದು ಸಹ ವರದಿಯಾಗಿತ್ತು. ಪ್ರದರ್ಶನವು ಸಂಯೋಜಕರಿಗೆ "ಸುಫಲ" ನೀಡಿದ್ದು ಖಚಿತ, ಆದರೆ "ಸುಮಧುರ ಭಾಷಿಣೀ" ಆಯಿತೋ ಇಲ್ಲವೋ ಸಂಶಯಾಸ್ಪದ.

✶ ✶ ✶

ಜನವರಿ ವಿಶೇಷ ಸಂಚಿಕೆಯಲ್ಲಿ "ಹೊಸತು" ಒಂದು ಸಂತಸ ವ್ಯಕ್ತಪಡಿಸಿತ್ತು, ಈ ವರ್ಷದ ಭಾರತೀಯ ವಿಜ್ಞಾನ ಮೇಳದಲ್ಲಿ ಅವೈಜ್ಞಾನಿಕ ಪ್ರಬಂಧಗಳಿಗೆ ಅವಕಾಶವಿರುವುದಿಲ್ಲ, ಎಂದು. "ಇಂಡಿಯನ್ ಸೈನ್ಸ್ ಕಾಂಗ್ರೆಸ್"ನ ಅಧ್ಯಕ್ಷರು ಮತ್ತು ಮೇಳವನ್ನು ಆಯೋಜಿಸಿದ್ದ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ, ಇಬ್ಬರೂ ಅಂತಹ ಆಶ್ವಾಸನೆ ನೀಡಿದ್ದರು. ಆದರೆ ಅವರಿಬ್ಬರ ಮಾತುಗಳನ್ನೂ ಹುಸಿಯಾಗಿಸಿದ ಇಬ್ಬರು "ಸಂಶೋಧಕರು" ಸಲ್ಲಿಸಿದ್ದ ಪ್ರಬಂಧಗಳು ಅಂಗೀಕೃತವಾಗಿದ್ದವು ಮತ್ತು ಅವು ಮಂಡಿಸಲ್ಪಟ್ಟವು. ತಮ್ಮ ನೇತೃತ್ವದಲ್ಲಿ ನಡೆಯುವ ಸಮ್ಮೇಳನದಲ್ಲಿ ಎಂತೆಂತಹ ಪ್ರಬಂಧಗಳು ಅಂಗೀಕರಿಸಲ್ಪಟ್ಟಿದ್ದುವೆಂಬುದು ಸ್ವತಃ ಸೈನ್ಸ್ ಕಾಂಗ್ರೆಸ್‌ನ ಅಧ್ಯಕ್ಷರಿಗೇ ತಿಳಿದಿರಲಿಲ್ಲ ! ಅವನ್ನು ಅಂಗೀಕರಿಸಿದ್ದ ಉಪವಿಭಾಗದ ಮೂರ್ಖ ಅಧ್ಯಕ್ಷ ಅವುಗಳ ಆಯ್ಕೆಯನ್ನು ಸಮರ್ಥಿಸಿಕೊಂಡನೆಂದು ವರದಿಯಾಯಿತು, ಆದರೆ ಮಹಾಧ್ಯಕ್ಷರು ಆತನಿಗೆ ಛೀಮಾರಿ ಹಾಕಿದರೆಂದೇನೂ ವರದಿಯಾಗಲಿಲ್ಲ. ಅಂದರೆ, ಅವರು ಒಂದು ರೀತಿ ಮೌನ ಸಮ್ಮತಿ ನೀಡಿದರೆಂದು ಭಾವಿಸಬೇಕು. ಅಥವಾ, ಆ ಅದ್ಭುತ ಸಂಶೋಧನಾ ಪ್ರಬಂಧಗಳನ್ನು ಮಂಡಿಸಿದ ಮಹಾನ್ ವಿಜ್ಞಾನಿಗಳು ನರೇಂದ್ರ ಮೋದಿ – ಅಮಿತ್ ಷಾ – ಮೋಹನ ಭಾಗವತ್ ಅವರ ನಿಕಟವರ್ತಿಗಳೆಂದು ತಿಳಿಯಬೇಕೇನೋ. ಇಂತಹ "ಅಮೋಘ" ವಿಜ್ಞಾನಿಗಳು ಭಾಗವಹಿಸುವ "ವಿಜ್ಞಾನಿಗಳ ಸಮಾವೇಶ"ವನ್ನು ಅಮೆರಿಕಾದಲ್ಲಿ ನೆಲೆಸಿರುವ ಭಾರತ ಸಂಜಾತ ನೊಬೆಲ್ ಪಾರಿತೋಷಕ ಪುರಸ್ಕೃತ ರಾಮಕೃಷ್ಣನ್ ಎಂಬ ವಿಜ್ಞಾನಿ "ಒಂದು ವಿಕೃತ ಸರ್ಕಸ್" ಎಂದು ಬಣ್ಣಿಸಿದ್ದು ಸಮಂಜಸವೇ ಇರಬೇಕು. ಬೇರೆಲ್ಲ ವಿಜ್ಞಾನಿಗಳು ಮಂಡಿಸಿದ ಪ್ರಬಂಧಗಳನ್ನು ಈ ಎರಡು–ಮೂರು ಬಾಲಿಶ ವಿಜ್ಞಾನಿಗಳ ಪ್ರಬಂಧಗಳು ಗೌಣವಾಗಿಸುವುದಿಲ್ಲವೆಂಬುದು ನಿಜ, ಆದರೆ ಈ ಅಪ್ರಬುದ್ಧ ಪ್ರಬಂಧಗಳಿಗೆ "ಸೈನ್ಸ್ ಕಾಂಗ್ರೆಸ್‌ನಲ್ಲಿ ಮಂಡಿತವಾದ ಪ್ರಬಂಧ" ಎಂಬ ಕೀರ್ತಿ ಇಲ್ಲವಾಗುವುದಿಲ್ಲ. ಅಲ್ಲಿ ಮಂಡಿತವಾದ್ದರಿಂದ ಇವೂ "ಸೈನ್ಸ್" ಇರಬೇಕೆಂಬ ಭ್ರಮೆಯೂ ಸಾಧ್ಯ. ಅಂಥವನ್ನು ಅಂಗೀಕರಿಸಿದ ಉಪವಿಭಾಗದ ಅಧ್ಯಕ್ಷನನ್ನು ಮಹಾಧ್ಯಕ್ಷರು ತರಾಟೆಗೆ ತೆಗೆದುಕೊಳ್ಳಬೇಕಾಗಿತ್ತು,

ಆದರೆ ನಮ್ಮ ದೇಶದ ಇಂದಿನ ರಾಜಕೀಯನಿಷ್ಠ ಬೌದ್ಧಿಕ ವಾತಾವರಣದಲ್ಲಿ ಅದು ಸಾಧ್ಯವಾಗಲಿಲ್ಲ ಎಂದು ಊಹಿಸಬಹುದಾಗಿದೆ. ಆ ಎರಡು "ಸಂಶೋಧನಾ" ಪ್ರಬಂಧಗಳ ಮೂಲಸಾರವನ್ನು ಪತ್ರಿಕೆಗಳು ವ್ಯಾಪಕವಾಗಿ ವರದಿ ಮಾಡಿವೆ, ಆದರೆ ವಿಜ್ಞಾನಿಗಳ ಮಂಡಲಿಯು ಅವೆರಡು ಪ್ರಬಂಧಗಳನ್ನೂ ಟೀಕಿಸಿ ನಿರಾಕರಿಸದಿದ್ದುದು ಒಂದು ದೊಡ್ಡ ವ್ಯಂಗ್ಯವೇ ಸರಿ. ಯಾವುದೇ ಟಿ.ವಿ. ವಾಹಿನಿಯ ಜ್ಯೋತಿಷಿಯೂ ಈವರೆಗೆ ಹೇಳಿಲ್ಲದ ಮಹತ್ತರ ಬೊಗಳೆಯನ್ನು ಈ "ವಿಜ್ಞಾನಿಗಳು" ವಿಶ್ವಕ್ಕೆ ಸಂಶೋಧನಾ ಫಲವೆಂದು ಸಾದರಪಡಿಸಿದರು. ಅವನ್ನು ಕೇಳಿದಾಗ ನಮ್ಮೂರಿನ ಬಸಮ್ಮನ ನೆನಪಾಯಿತು. "ಬಸವಣ್ಣನ ಕೊಂಬುಗಳ ಮಧ್ಯದಿಂದ ಶಿವಲಿಂಗವನ್ನು ದಿಟ್ಟಿಸಿ ನೋಡಿದರೆ ರೋಗವಾವುದೂ ನಿಮ್ಮ ಬಳಿ ಸುಳಿಯುವುದಿಲ್ಲ" ಎಂಬುದು ಆಕೆಯ ಸಂಶೋಧನೆಯಾಗಿತ್ತು. ಹಾಗೆಂದು ಮುಕ್ತವಾಗಿ ಉಚ್ಚರಿಸಿ ಹೇಳಲು ಆಕೆಗೆ ಭಾರತೀಯ ವಿಜ್ಞಾನ ಮೇಳದ ವೇದಿಕೆಯು ಎಂದೂ ಲಭ್ಯವಾಗಲಿಲ್ಲ, ಅಷ್ಟೆ. ಯೋಗಿ ರಾಮದೇವ ಅವರಿಗೆ ಕೂಡ ಈವರೆಗೆ ನಮ್ಮ ಪ್ರಕಾಂಡ ವಿಜ್ಞಾನಿಗಳ ದಿವ್ಯಜ್ಞಾನ ಲಭಿಸಿಲ್ಲವೆಂದರೆ ಅವರ ಕಾಣ್ಕೆ ಎಷ್ಟು ಪ್ರಶಸ್ತವಾಗಿರಬೇಕಲ್ಲವೆ! ಆದ್ದರಿಂದ ಅವೆರಡು ಸಂಶೋಧನೆಗಳು ಈ ಕೂಡಲೆ ಸ್ಟೀಫನ್ ಹಾಕಿಂಗ್‌ನ ಗಮನಕ್ಕೆ ತರಲು ಯೋಗ್ಯವಾಗಿವೆ. ಬ್ಲ್ಯಾಕ್ ಹೋಲ್‌ನಲ್ಲೂ ಇವೇ ಪರಿಣಾಮಗಳು ನಿಶ್ಚಿತವೆಂದು ಆತ ಹೇಳಿಯಾರು! ಅವನ್ನು ಪರಿಚಯಿಸಿಕೊಂಡು ಪ್ರಜ್ಞಾವಂತರಾಗೋಣ, ನೀತಿವಂತರಾಗೋಣ: (ಅ) ಹುಲಿಯ ಚರ್ಮದ ಮೇಲೆ ಕುಳಿತವರಿಗೆ ಕಾಮ ಪ್ರಚೋದನೆಯು ಕ್ಷೀಣಿಸುತ್ತದೆ, ಮತ್ತು (ಆ) ಶಂಖ ಊದುತ್ತಿದ್ದರೆ ಕೂದಲು ಕಪ್ಪಾಗಿ ಉಳಿಯುತ್ತವೆ.

ಹುಲಿಯ ಚರ್ಮದ ಬದಲು ಹುಲಿಯ ಮೇಲೆ ಕೂತುಬಿಟ್ಟರೆ ಯಾವ ಪ್ರಚೋದನೆಯೂ ಇರುವುದಿಲ್ಲವೆಂಬುದು ಮುಂದಿನ ಸಂಶೋಧನೆಯ ಹಾದಿ! ಉಪಾಧ್ಯಾಯರೆಲ್ಲಾ ಶಂಖ ಊದುತ್ತಲೇ ಇದ್ದಾರೆ, ಆದರೆ ಅವರ ಕೂದಲು ನೆರೆದಿರುವುದು ಅನುಭವ ಸತ್ಯ. ಸಂಶೋಧಕರು ಇದನ್ನು ಗಮನಿಸಲಿಲ್ಲ ಏಕೆ? ಸಾಮಾನ್ಯವಾಗಿ ಕೃಷ್ಣಾಜಿನವನ್ನು ಧ್ಯಾನಕ್ಕೆ ಸೂಕ್ತ ಆಸನವೆನ್ನುತ್ತಾರೆ, ಈ ಸಂಶೋಧಕರೇಕೆ ಹುಲಿಗೆ ಮಾರುಹೋದರು? ಮೊದಲೇ ಹುಲಿಗಳ ಸಂಖ್ಯೆ ಕಡಿಮೆಯಾಗುತ್ತಿದೆ ಎಂದು ಹೇಳುತ್ತಿದ್ದಾರೆ, ಇನ್ನು ಈ ಸಂಶೋಧನೆಯಿಂದ ಹುಲಿಯ ವಂಶ ನಿರ್ನಾಮವಾಗಿ ಹೋಗುತ್ತದೆ. ಅಥವಾ, ಅಂತಹ ಅನಾಹುತವೇನೂ ಇಲ್ಲವೇನೋ. ಏಕೆಂದರೆ ಕಾಮದಿಂದ ದೂರವಾಗಿ ನಿರಾಸಕ್ತರಾಗಿರಬೇಕೆಂಬ ವಾಂಛೆ ಯಾರನ್ನೂ ಆವರಿಸಿಲ್ಲ. ರಾಮಚಂದ್ರಾಪುರದಲ್ಲಿ ಅದೇ ಕಾರಣದಿಂದ ಹುಲಿಯ ಚರ್ಮವನ್ನು ರಾಘವೇಶ್ವರ ಸ್ವಾಮಿಗಳು ಬಹಿಷ್ಕರಿಸಿದ್ದಾರೆಂಬ ಊಹಾಪೋಹ ಮೊನ್ನೆ ಮೊನ್ನೆ ಹೊಸನಗರದಲ್ಲಿ ಪ್ರಚಲಿತವಾಗಿತ್ತು. 'ಶಂಖ' ಎಂಬುದಕ್ಕೆ ಸಂಸ್ಕೃತದಲ್ಲಿ ಬೇರೆಯೂ ಅರ್ಥಗಳಿವೆ. ಗುದಸ್ಥಾನಕ್ಕೂ ಅದೇ ಹೆಸರಿದೆ. ಅದನ್ನು ಊದಬೇಕೋ ಅಥವಾ ಸಮುದ್ರತೀರದಲ್ಲಿ ಮಾರಾಟಕ್ಕಿರುವ ಶಂಖ ಊದಬೇಕೋ? ಹುಲಿ ಚರ್ಮ ಮತ್ತು ಶಂಖದ ಸಂಶೋಧನೆಗೆ ಸಂವಾದಿಯಾಗಿ ನಮ್ಮ ಪರಂಪರಾಗತ ವೈದ್ಯಕೀಯದಲ್ಲಿ ಹೇಳಲಾಗಿರುವ ಒಂದು ಸಿದ್ಧೌಷಧಿಯನ್ನು ಹೆಸರಿಸಬಹುದು.

೧೧ನೆಯ ಶತಮಾನದಲ್ಲಿ ಚಾವುಂಡರಾಯನು "ಲೋಕೋಪಕಾರಂ" ಎಂಬ ಕೃತಿಯನ್ನು ರಚಿಸಿದ್ದ. ಅದನ್ನು "ವಿಶ್ವಕೋಶದಂತಿರುವ ಕನ್ನಡ ಗ್ರಂಥ" ಎಂದು ಕೆಲವರು ಬಣ್ಣಿಸಿದ್ದಾರೆ. ವಿಜ್ಞಾನದ ಹೆಸರಲ್ಲಿ ಅನೇಕ ಅವೈಜ್ಞಾನಿಕ ಅಂಶಗಳನ್ನು ಈ ಗ್ರಂಥದಲ್ಲಿ ಕಾಣುತ್ತೇವೆ. ಗರ್ಭನಿರೋಧವನ್ನು ಕುರಿತಾದ ಒಂದು ಭಾಗದಲ್ಲಿ ಲೇಖಕನ ಅಮೋಘ ಸಲಹೆ ಹೀಗಿದೆ:

*ಸಮನಿಸೆ ಪುಷ್ಯಾರ್ಕಂ ಕನ*
*ಕಮೂಲಮಂ ಕೊಂಡು ಕಟ್ಟಿ ಕಟಿಯೊಳ್*
*ಪುರುಷಂ।*
*ರಮಿಯಿಸಿದಂದಾಕೆಗೆ ಗ*
*ರ್ಭಮಾಗದೇನೆಂದು ಪೇಳ್ವೆ*
*ನಿದರುನ್ನತಿಯಂ॥* (೯.೧೮೦)

ಇದರ ಮೇಲೆ ಕರ್ತೃವೇ ಟೀಕೆಯನ್ನು ಬರೆದಿದ್ದಾನೆ. ಅದು ಹೀಗಿದೆ:

*ಆದಿತ್ಯವಾರಂ ಪುಷ್ಯ ನಕ್ಷತ್ರಂ ಕೂಡಿದಲ್ಲಿ*
*ಪುರುಷಂ*
*ಮದ್ದುಗುಣಿಕೆಯ ಬೇರಂ ತಂದು ಉಡಿಯಲ್ಲಿ*
*ಕಟ್ಟಿಕೊಂಡು*
*ಸ್ತ್ರೀಯರಂ (ರಮಿಸೆ) ಸಂಯೋಗಂ ಮಾಡಲ್*
*ಗರ್ಭಮಾಗದು.*

ಕರ್ತೃವು ಯಾವ ಪ್ರಯೋಗವನ್ನೂ ಮಾಡದೆ ಉಚ್ಚರಿಸಿರುವ ವೈದ್ಯಕೀಯ ಇದು. ಜೇಬಿನಲ್ಲಿ ಗರ್ಭನಿರೋಧಕ ಗುಳಿಗೆಯನ್ನು ಇಟ್ಟುಕೊಂಡು ಮೈಥುನದಲ್ಲಿ ತೊಡಗಿದರೆ ಗರ್ಭವಾಗುವುದಿಲ್ಲ ಎಂದು ಹೇಳಿದಷ್ಟೇ ಮೂರ್ಖತನದ ಹೇಳಿಕೆ ಇದು. ವೈಜ್ಞಾನಿಕ ಪದ್ಧತಿ, ಕಾರ್ಯ-ಕಾರಣ ಭಾವ, ಔಷಧಿಯಲ್ಲಿ ಸೇರಬೇಕಾದ ದ್ರವ್ಯಗಳು ಹಾಗೂ ಅವುಗಳ ಗುಣಗಳು ಮುಂತಾದ ವಿಷಯಗಳಿಗೆ ಆದ್ಯತೆಯನ್ನು ಕಿಂಚಿತ್ತೂ ನೀಡದ ಪದ್ಧತಿ ಇದು.

ನಮ್ಮ ಶ್ರೇಷ್ಠ ವೈದ್ಯಕೀಯ ಗ್ರಂಥವಾದ ಚರಕಸಂಹಿತೆಯು ಪ್ರಯೋಗಕ್ಕೆ ಆದ್ಯತೆ ನೀಡಿತ್ತು. ಪ್ರಾಚೀನ ರಸಾಯನಶಾಸ್ತ್ರ ಗ್ರಂಥಗಳೂ ಹಾಗೆಯೇ ಮಾಡಿವೆ. ಆದರೆ ವಿಜ್ಞಾನ ಮೇಳದ ಇಬ್ಬರು ಪ್ರಭೃತಿಗಳೂ ಪ್ರಯೋಗದ ಗೋಜಿಗೆ ಹೋಗಿಲ್ಲ. ಅವರು "ಲೋಕೋಪಕಾರ"ದ ಸಂಪ್ರದಾಯಕ್ಕೆ ಶರಣಾಗಿದ್ದಾರೆ. ಹತ್ತು ದಿನ ಈ ಸಂಶೋಧಕನು ಹುಲಿಯ ಚರ್ಮದ ಮೇಲೆ ಕೂತು ತನ್ನ ಕಾಮಸಂವೇದನೆಯನ್ನು ಪರೀಕ್ಷಿಸಿಕೊಳ್ಳಬಹುದಿತ್ತು. ಶಂಖದ ಸಂಶೋಧನಾ ಚತುರನು ಬೊಕ್ಕತಲೆಯವನಿರಬೇಕು, ಆದ್ದರಿಂದ ಪ್ರಯೋಗಶೀಲನಾಗಿ ಶಂಖದ ಪ್ರಯೋಜನ ಅವನಿಗೆ ಲಭ್ಯವಾಗಿಲ್ಲ. ಗಂಭೀರವಾಗಿ ಅವಲೋಕಿಸಿದರೆ ಇಂತಹ ಪ್ರಯೋಗ ಮತ್ತು ಅದರ ವಿಧಾನದ ಅರಿವು ಸುಲಭವಾಗಿ ದಕ್ಕುತ್ತದೆ. ಲೋನಾವ್ಲಾದ ಕೈವಲ್ಯ ಧಾಮದ ಪ್ರಯೋಗಾಲಯಕ್ಕಾಗಲಿ ಹರದ್ವಾರದ ರಾಮದೇವ್ ಯೋಗಶಾಲೆಗಾಗಲಿ ಹೋಗಿ, ತಿಳಿದವರಿಂದ ಪ್ರಯೋಗ ವಿಧಾನವನ್ನು ಕರಗತ ಮಾಡಿಕೊಳ್ಳಬಹುದು. ರಾಮದೇವ್ ಸ್ವತಃ ಪ್ರಯೋಗಶಾಲೆಯಲ್ಲಿರುವ ಸಾಧನಗಳನ್ನು ಮುಟ್ಟುವುದಿಲ್ಲ, ಆದರೆ ಅಲ್ಲಿಯ ಪರಿಣತೆ ಶರ್ಲಿ ಟೆಲಿಸ್ ಅವನ್ನು ಹೇರಳವಾಗಿ ಬಳಸುತ್ತಾರೆ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಪ್ರಯೋಗ ವಿಧಾನ ಹೀಗಿರುತ್ತದೆ: ಊಹಾಪ್ರತಿಜ್ಞೆ (ಹೈಪಾಥಿಸಿಸ್) "ಶಂಖ ಊದಿದರೆ ಕೂದಲೆಲ್ಲಾ ಕಪ್ಪಾಗಿ ಉಳಿಯುತ್ತವೆ" ಎಂದಿದೆಯೆನ್ನಿ. ನಾವು ಮಾಡಬೇಕಾದ್ದಿಷ್ಟೆ: ಇಪ್ಪತ್ತು ಮಂದಿ ಯುವಕ ಯುವತಿಯರನ್ನು ಕಲೆಹಾಕಿ ಅವರಿಗೆಲ್ಲಾ ಕೂದಲು ಪೂರ್ತಿ ಕಪ್ಪಾಗಿಲ್ಲವೆಂದು ಸಿದ್ಧಪಡಿಸಿಕೊಳ್ಳಿ, ಬೇರೆ ಇನ್ನಿಪ್ಪತ್ತು ಮಂದಿಯನ್ನು ಆಯ್ಕೆಮಾಡಿಕೊಳ್ಳಿ. ಅವರಿಗೂ ಕೂದಲು ಪೂರ್ತಿ ಕಪ್ಪಾಗಿಲ್ಲವೆಂದು ಖಚಿತಪಡಿಸಿಕೊಳ್ಳಿ. ಈ ಇಪ್ಪತ್ತು ಮಂದಿಯನ್ನು 'ಕಂಟ್ರೋಲ್ ಗ್ರೂಪ್' ಎನ್ನುತ್ತಾರೆ. ಮೊದಲ ಇಪ್ಪತ್ತು ಮಂದಿ ಪ್ರಯೋಗಕ್ಕೆ ಒಡ್ಡಿಕೊಳ್ಳಲು ಬಂದಿರುವ 'ಗಿನಿಪಿಗ್ಸ್' ಎನ್ನೋಣ. ಎರಡು ಗುಂಪುಗಳೂ ಏಕತ್ರ ಮತ್ತು ಏಕಕಾಲದಲ್ಲಿ ಇರುತ್ತಾರೆ. ಅವರೆಲ್ಲರ ವಾಸಸ್ಥಾನ, ವಾತಾವರಣ, ಆಟ-ಊಟ, ಬಟ್ಟೆ-ಬರೆ, ಕೂದಲು ಉಜ್ಜಿಕೊಳ್ಳುವ ಮತ್ತು ಬಾಚಿಕೊಳ್ಳುವ ರೀತಿ-ನೀತಿಗಳು, ಎಲ್ಲಾ ಏಕಪ್ರಕಾರವಾಗಿರುತ್ತವೆ. ಅಷ್ಟೂ ಮಂದಿ ಕೊನೇಪಕ್ಷ ೬೦ ದಿನಗಳ ಕಾಲ ನೀವು ಹೇಳಿದಂತೆ ಮಾಡುತ್ತಿರುತ್ತಾರೆ, ಕದ್ದು-ಮುಚ್ಚಿ ಬೇರೇನನ್ನೂ ಮಾಡುವುದಿಲ್ಲ. ಎರಡು ಗುಂಪುಗಳಲ್ಲೂ ಯುವಕ-ಯುವತಿಯರು ಸಮಸಂಖ್ಯೆಯಲ್ಲಿರುವಂತೆ ನೋಡಿಕೊಳ್ಳಿ.

ಮುಂದಿನ ಭಾಗವು ನಿಜವಾದ ಪ್ರಯೋಗ. 'ಗಿನಿಪಿಗ್ಸ್' ದಿನಕ್ಕೆ ಮೂರು ಅವಧಿಗಳಲ್ಲಿ ಶಂಖ ಊದಲಿ, ಒಂದೊಂದು ಅವಧಿಯಲ್ಲೂ ಅರ್ಧ ಗಂಟೆ ಇರಲಿ. 'ಕಂಟ್ರೋಲ್ ಗ್ರೂಪ್'ನವರು ಶಂಖವನ್ನು ಸರ್ವಥಾ ಮುಟ್ಟುವುದಿಲ್ಲ ಮತ್ತು ಮುಟ್ಟದೆಯೇ ಊದಲು ಪ್ರಯತ್ನಿಸುವುದಿಲ್ಲ. ಪ್ರಯೋಗಾರಂಭದ ದಿನ 'ಗಿನಿಪಿಗ್ಸ್' ತಲೆಗಳಲ್ಲಿ ನಾಲ್ಕೈದು ಬಿಳಿ ಕೂದಲಿದ್ದರೆ ಸಾಕು; ಅಂತೆಯೇ 'ಕಂಟ್ರೋಲ್ ಗ್ರೂಪ್'ನಲ್ಲಿ ಸಹ. ಅರವತ್ತು ದಿನಗಳ ಬಳಿಕ ಎರಡೂ ಗುಂಪುಗಳ ತಲೆಗಳಲ್ಲಿ ಬಿಳಿ-ಕರಿ ಕೂದಲುಗಳ ಸಂಖ್ಯೆಯನ್ನು ಸರಿಯಾಗಿ ಎಣಿಸಿ ದಾಖಲಿಸಿಕೊಳ್ಳಿ. ಶಂಖದ ಪ್ರಭಾವ ಮತ್ತು ಪ್ರಭಾವದ ಅಭಾವ ಎರಡೂ ತಿಳಿಯುತ್ತದೆ. ಆಮೇಲೆ ಸಂಖ್ಯಾಶಾಸ್ತ್ರ ವಿಧಾನದ ಪ್ರಕಾರ ನಿಮ್ಮ ಎಲ್ಲ ಸಂಖ್ಯೆಗಳನ್ನೂ ವಿಶ್ಲೇಷಣೆಗೆ ಗುರಿಮಾಡಿ. ಆಮೇಲೆ ಶಂಖದ ಪ್ರಭಾವ

ಏನೆಂಬುದನ್ನು ನಿಷ್ಪಕ್ಷಪಾತವಾಗಿ ಪ್ರಬಂಧರೂಪದಲ್ಲಿ ವಿಜ್ಞಾನ ಸಮ್ಮೇಳನದಲ್ಲಿ ಮಂಡಿಸಿ. ಮಂಡಿಸಲು ಯೋಗ್ಯವಾದ ತೀರ್ಮಾನ ಲಭಿಸಿಲ್ಲದಿದ್ದರೆ ಸಮ್ಮೇಳನಕ್ಕೆ ಹೋಗಿ ಬಾಲಿಶ ಮಾತುಗಳನ್ನಾಡುವುದು ಬೇಡ.

– ಮೈಸೂರಿನ ಭಾರತೀಯ ವಿಜ್ಞಾನ ಕಾಂಗ್ರೆಸ್‌ನಲ್ಲಿ ಮಂಡಿಸಲಾದ ಹುಲಿಚರ್ಮ ಮತ್ತು ಶಂಖ ಕುರಿತಾದ ಪ್ರಬಂಧಗಳು ಈ ಪ್ರಯೋಗ ಶಿಸ್ತಿನ ಫಲವಾಗಿ ಮೂಡಿರಲಿಲ್ಲ. ಆದ್ದರಿಂದ ಅವು "ಬಸಮ್ಮನ ಸಂಶೋಧನೆ"ಗಿಂತಲೂ ಬೇರೆಯಲ್ಲ. ವಿಜ್ಞಾನಕ್ಕೂ ಮೌಢ್ಯಕ್ಕೂ ಮೂಲಭೂತ ವ್ಯತ್ಯಾಸ ತಿಳಿಯದಿದ್ದಾಗ ಸಂಶೋಧನೆಯು "ಸ್ಲಂ–ಶೋಧನೆ" ಆಗಿಬಿಡುತ್ತದೆ. ಮೈಸೂರಿನಲ್ಲಿ ಸಮಾವೇಶಗೊಂಡಿದ್ದ ವಿಜ್ಞಾನಿಗಳು ಈ ಎರಡು ಸಂಶೋಧನೆಗಳ ಮೌಲ್ಯಮಾಪನ ಮಾಡಿ ಅಂತಹ ತೀರ್ಮಾನಕ್ಕೆ ಬಂದಿರುತ್ತಾರೆ. ಕಳೆದ ವರ್ಷದ ಕಾಂಗ್ರೆಸ್‌ನಲ್ಲಿ ಮಾನ್ಯ ಮೋದಿಯವರು ಗಣಪತಿಯ ತಲೆಯ ಬಗ್ಗೆ ಅನನ್ಯವಾದ ವಿಶ್ಲೇಷಣೆ ನೀಡಿ ವಿಶ್ವವಿಖ್ಯಾತರಾದರು. ಈ ವರ್ಷ ಬೇರೆ ಕ್ಷೇತ್ರಗಳಲ್ಲಿ ಹೇಗೂ ಖ್ಯಾತಿ ಪಡೆಯುತ್ತಿದ್ದಾರಾದ್ದರಿಂದ ರಾವಣನ ಹತ್ತು ತಲೆಗಳನ್ನು ಕುರಿತ ಅವರ ಸಂಶೋಧನಾ ಪಟುತ್ವವನ್ನು ತೋರ್ಪಡಿಸಲಿಲ್ಲ ಎಂದು ಭಾವಿಸೋಣ.

✶ ✶ ✶

ಹುಲಿಚರ್ಮ ಮತ್ತು ಶಂಖ ಊದುವಿಕೆಯ ಸಂಶೋಧನಾ ಮಾರ್ಗವನ್ನು ಇತಿಹಾಸದ ಕ್ಷೇತ್ರಕ್ಕೆ ವಿಸ್ತರಿಸುವ ಅಪಖ್ಯಾತಿಗೆ ನಮ್ಮ ದೇಶದಲ್ಲಿ ನೂರಾರು ಮಂದಿ ಭಾಜನರಾಗಿದ್ದಾರೆ. ಅವರಿಗೆ ರಾಮಾಯಣ – ಮಹಾಭಾರತಗಳು ಕಾವ್ಯಗಳಲ್ಲ, ಅವು ಇತಿಹಾಸದ ಪಠ್ಯಗ್ರಂಥಗಳು. ಅಭಿಜ್ಞಾನ ಶಾಕುಂತಲ ನಾಟಕವನ್ನು ಇದೇ ರೀತಿಯಲ್ಲಿ ವ್ಯಾಖ್ಯಾನಿಸ ಹೊರಟರೆ ಕಣ್ವಾಶ್ರಮವನ್ನು ಗುರುತಿಸಿ, ಅಲ್ಲಿ ಶಕುಂತಲೆಯು ಪ್ರೇಮಪ್ರಮಾದಕ್ಕೆ ಸಿಲುಕಿದ ಸ್ಥಳವನ್ನು ಸಂಶೋಧಿಸಿ ಅಲ್ಲೊಂದು ಶಾಶ್ವತ ಸ್ಮಾರಕವನ್ನು ನಿರ್ಮಿಸಬಹುದು. ಭಾಗವತ ಪುರಾಣಕ್ಕೆ ಇನ್ನೂ ಇತಿಹಾಸದ ಹಣೆಪಟ್ಟಿ ಕಟ್ಟಿಲ್ಲದಿರುವುದರಿಂದ ಅದನ್ನು ಬರೆದವನೆನ್ನಲಾದ ವ್ಯಾಸನು ಮರುಗುತ್ತಿರಬೇಕು. ನಮ್ಮ ದೇಶದಲ್ಲಿ ಹತ್ತಾರು ವ್ಯಾಸರಿದ್ದಾರೆ, ಆದರೆ ಕೆಲವು ವಿದ್ವಾಂಸರು ಎಲ್ಲರನ್ನೂ ಒಬ್ಬನೇ ವ್ಯಾಸನೆಂದು ಹೇಳುತ್ತಾ ಬಂದಿದ್ದಾರೆ. ಋಗ್ವೇದವನ್ನು ಅಂದವಾಗಿ ಜೋಡಿಸಿಟ್ಟವನು ವ್ಯಾಸ, ಮಹಾಭಾರತ ಬರೆದವನು ವ್ಯಾಸ, ಪತಂಜಲಿಯ ಯೋಗಸೂತ್ರಗಳಿಗೆ ಭಾಷ್ಯ ಬರೆದವನು ವ್ಯಾಸ, ಹತ್ತು–ಹದಿನೆಂಟು ಪುರಾಣ ಮತ್ತು ಉಪಪುರಾಣಗಳನ್ನು ಬರೆದವನು ವ್ಯಾಸ, ಆ ಪುಣ್ಯಾತ್ಮ ಇನ್ನೂ ಏನೇನನ್ನು ಬರೆದನೋ ತಿಳಿಯದು. ಹಾಗೆ ನೋಡಿದರೆ ಪತಂಜಲಿಯ ಬಹುಶ್ರುತತ್ವ ಸಹ ಅಗಾಧವೇ. ಏಕೆಂದರೆ, ಅವನು ಪಾಣಿನಿಯ ಅಷ್ಟಾಧ್ಯಾಯಿಗೆ ಮಹಾಭಾಷ್ಯ ಬರೆದ, ಯೋಗಶಾಸ್ತ್ರ ಗ್ರಂಥ ರಚಿಸಿ ಮನಸ್ಸಿನ ಬಾಧೆಗಳನ್ನು ತುಂಡರಿಸಿ, ವೈದ್ಯಕೀಯ ಗ್ರಂಥ ರಚಿಸಿ ಶರೀರದ ಅಸೌಖ್ಯಗಳನ್ನು ದೂರ ಮಾಡಿದ! ಮೂಲತಃ ಇಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಗ್ರಂಥಗಳೆಲ್ಲಾ ಒಂದೇ ಶತಮಾನಕ್ಕೆ ಸೇರಿಲ್ಲ. ಸಮಸ್ಯೆ ಏನೆಂದರೆ ಋಗ್ವೇದವು ಕ್ರಿ. ಪೂ. ೧೬೦೦ಕ್ಕೆ ಸೇರಿದೆ, ಮಹಾಭಾರತ ಹಲವು ಶತಮಾನಗಳಲ್ಲಿ ರಚಿಸಲ್ಪಟ್ಟಿದೆ, ಪತಂಜಲಿ ಬಹುಶಃ ಕ್ರಿ. ಪೂ. ಮೂರನೆಯ ಶತಮಾನದವನು, ಪುರಾಣಗಳು ಕ್ರಿ. ಶ. ಏಳನೆಯ ಶತಮಾನದಿಂದ ಹನ್ನೆರಡನೆಯ ಶತಮಾನದವರೆಗೂ ರಚಿತಗೊಂಡವು. ಅಂದರೆ ಮಹಾನುಭಾವ ವ್ಯಾಸ ಕಡೇಪಕ್ಷ ೨೬೦೦ ವರ್ಷಗಳ ದೀರ್ಘ ಆಯುಸ್ಸು ಹೊಂದಿದ್ದ! ಸಾಹಿತ್ಯ ಮತ್ತು ಪುರಾಣಗಳನ್ನು ಇತಿಹಾಸವೆಂಬಂತೆ ಗ್ರಹಿಸಿ ವ್ಯಾಖ್ಯಾನಿಸುವುದು ಶುದ್ಧ ಶುಂಠತನವೆಂಬುದು ಇದರಿಂದಲೇ ತಿಳಿಯುತ್ತದೆ. ಆದ್ದರಿಂದಲೇ ಇದು ಹುಲಿಚರ್ಮ–ಶಂಖ ಸಂಬಂಧೀ ಸಂಶೋಧನೆಗಳ ಮಾದರಿಯದೆಂದು ತಿಳಿಯಬೇಕಾಗಿದೆ. ಅನೈತಿಹಾಸಿಕ ದೃಷ್ಟಿಯ ಪರಾಕಾಷ್ಠೆ ಇದು.



## ಅಸ್ತಂಗತ

ಖಾಲಿ ಬೆಟ್ಟಗಳ
ಕಣ್ಣೀರಿಗೆ
ಕೆಂಪು ಬಳಿದು
ಸೂರ್ಯ ಅಸ್ತಂಗತ

ಶೋಭಾ ಪ್ರಮೋದ್
ಮನ್‌ಗಾಂವ್
ಮಹಾರಾಷ್ಟ್ರ

ಅಮೇರಿಕಾದ ಸಖ್ಯದಿಂದ ಶ್ರೀಮಂತಿಕೆಯಲ್ಲಿ ಮುಳುಗಿರುವ ಅಪ್ರತಿಭ ವಿದ್ವಾಂಸ ಮತ್ತು ರಾಜಕಾರಣಿ ಎಂ. ಸುಬ್ರಹ್ಮಣ್ಯಸ್ವಾಮಿ ಶಂಖ ಸಂಶೋಧನೆಗೆ ಸಮನಾದ ಸಂಶೋಧನೆಯನ್ನು ವಾಲ್ಮೀಕಿ ರಾಮಾಯಣದ ಸಂದರ್ಭದಲ್ಲಿ ಮಾಡಲು ಉಪಕ್ರಮಿಸಿದ್ದಾರೆ. ಅದರಿಂದ ಯಾವ ರಾಜಕೀಯ ಲಾಭ ಮತ್ತು ಸ್ಥಾನ ಹಾಗೂ ಅಧಿಕಾರ ಪಡೆಯ ಬಯಸಿದ್ದಾರೆಂಬುದನ್ನು ಊಹಿಸಿಕೊಳ್ಳಬಹುದು. ಜನವರಿ ೨೦೧೬ರಲ್ಲಿ ಅವರ ಈ ಸಂಶೋಧನೆಯ ಒಂದು ಯತ್ನ ದೆಹಲಿಯಲ್ಲಿ ನಡೆಯಿತು. ದೆಹಲಿ ವಿಶ್ವವಿದ್ಯಾಲಯದ ಆವರಣದಲ್ಲಿ ಎರಡು ದಿನಗಳ ವಿಚಾರಗೋಷ್ಠಿಯೊಂದನ್ನು ನಡೆಸಿ ರಾಮಾಯಣದಲ್ಲಿ ಇತಿಹಾಸದ ಅಂಶಗಳನ್ನು ಗುರುತಿಸುವ ಗೋಷ್ಠಿ ಇದಾಗಿತ್ತು. ವಿಶ್ವವಿದ್ಯಾನಿಲಯದ ಉಪಕುಲಪತಿಗಳ ಹೇಳಿಕೆಯಂತೆ ಈ ಗೋಷ್ಠಿಯು ವಿಶ್ವವಿದ್ಯಾನಿಲಯದ ಯಾವ ವಿಭಾಗವೂ ಆಯೋಜಿಸಿದ್ದಲ್ಲ. ಸುಬ್ರಹ್ಮಣ್ಯಸ್ವಾಮಿ ವಿಶ್ವವಿದ್ಯಾಲಯದ ಆವರಣದಲ್ಲಿ ಒಂದು ಸಭಾಂಗಣವನ್ನು ಬಾಡಿಗೆಗೆ ಪಡೆದು ಗೋಷ್ಠಿ ನಡೆಸಿದರು. ಅದನ್ನು ವಿರೋಧಿಸುವುದಾಗಲಿ, ಅದಕ್ಕೆ ಪ್ರತಿಭಟನೆಯನ್ನು ಸಂಘಟಿಸುವುದಾಗಲಿ ಅನಗತ್ಯವಾಗಿತ್ತು; ಆದರೆ ಕೆಲವು ವಿದ್ಯಾರ್ಥಿಗಳು ಅದನ್ನು ವಿರೋಧಿಸಿ ಪ್ರತಿಭಟನೆ ಸಲ್ಲಿಸಿದರು.

ಸುಬ್ರಹ್ಮಣ್ಯಸ್ವಾಮಿ ಪ್ರತಿಕ್ರಿಯೆ ಅತ್ಯಂತ ಪ್ರಶ್ನಾರ್ಹವಾಗಿತ್ತು. ಅವರ ಹೇಳಿಕೆಯ ಸಾರ ಇದು : ನಮ್ಮ ದೇಶದ ಜನರಿಗೆ ಮಾರ್ಕ್ಸ್‌ವಾದ ಬೇಕಿಲ್ಲ, ಕಮ್ಯೂನಿಸಂ ಬೇಕಿಲ್ಲ; ಅವರಿಗೆ ರಾಮಾಯಣ ಬೇಕು. ಅದೇ ನಮ್ಮ ಹಿಂದು ಸಂಸ್ಕೃತಿ. ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದಲ್ಲಿ ಅವರು ಮಾರ್ಕ್ಸ್‌ವಾದ ಚರ್ಚಿಸಿ ಪ್ರಚಾರ ಮಾಡಬಹುದು, ನಾನೇಕೆ ಇಲ್ಲಿ ರಾಮಾಯಣ ಚರ್ಚಿಸಕೂಡದು ?

ರಾಮಾಯಣವನ್ನು ಯಾರು ಚರ್ಚಿಸಿದರೂ ಯಾರ ಆಕ್ಷೇಪವೂ ಸರಿಯಲ್ಲ. ಆದರೆ ಎರಡು ಅಂಶಗಳು ಮುಖ್ಯ : ಚರ್ಚೆಯು ಬೌದ್ಧಿಕವಾಗಿ ಮೌಲಿಕವಾಗಿರಬೇಕು ಮತ್ತು ಇತಿಹಾಸದ ಶಿಸ್ತನ್ನು ಮೀರದೆ ಚರ್ಚೆ ನಡೆಯಬೇಕು. ಅಂದರೆ, ಭಾವೋದ್ರೇಕವಿಲ್ಲದೆ ಮತ್ತು ಅಯೋಧ್ಯೆಯಲ್ಲಿ ರಾಮಮಂದಿರ ಕಟ್ಟಲು ಉಪೋದ್ಘಾತವೆಂಬಂತೆ ಗೋಷ್ಠಿ ನಡೆಯಬಾರದು. ರಾಮಾಯಣ ಗ್ರಂಥದ ಪರಾಮರ್ಶೆ ನಡೆಯಲಿ, ಐತಿಹಾಸಿಕ ದಾಖಲೆಗಳೊಡನೆ ತೂಗಿ ನೋಡಲಿ, ಉತ್ಖನನ ಶಾಸ್ತ್ರದ ಪುರಾವೆಗಳನ್ನು ವಿಶ್ಲೇಷಿಸಲಿ, ಬೇರೆ ಬೇರೆ ದೇಶಗಳಲ್ಲಿ ರಾಮಾಯಣದ ಛಾಯೆಯನ್ನು ಗ್ರಹಿಸಲಿ, ನಮ್ಮ ದೇಶದಲ್ಲಿ ರಾಮಾಯಣದ ವಿವಿಧ ರೂಪಗಳನ್ನು ಅರ್ಥೈಸಿಕೊಳ್ಳಲಿ, ಇಂದಿಗೆ ಅದರ ಮೌಲ್ಯ ಪ್ರಜ್ಞೆಯನ್ನು ಅನ್ವಯಿಸಲಿ. ಇದಕ್ಕೆಲ್ಲಾ ಯಾವ ಅಡೆತಡೆಯೂ ಕೂಡದು. ಆದರೆ ಸುಬ್ರಹ್ಮಣ್ಯಸ್ವಾಮಿಯವರ ಉದ್ದೇಶ ಅದಲ್ಲವಾದರೆ ಏನು ಹೇಳಬೇಕು ? ಜೆಎನ್‌ಯುನಲ್ಲಿ ಮಾರ್ಕ್ಸ್‌ವಾದವನ್ನೂ ಚರ್ಚಿಸಬೇಕು, ಕೀನ್ಸ್ ವಾದವನ್ನೂ ಅಭ್ಯಾಸ ಮಾಡಬೇಕು, ಅಂಬೇಡ್ಕರ್–ಲೋಹಿಯಾ–ಗೊಲ್ವಾಲ್ಕರ್ ವಾದಗಳನ್ನೂ ಪರಿಚಯಿಸಿಕೊಳ್ಳಬೇಕು. ಅಷ್ಟೇ ಏಕೆ, ಅಲ್ಲಿ ಚಾಣಕ್ಯ, ಪ್ಲೇಟೋ, ರೂಸೋ ಸಹ ಪ್ರಸ್ತುತ. ಕಡೆಗೆ ಹಿಟ್ಲರ್‌ನ ಆತ್ಮಕತೆಯನ್ನೂ ವಿಶ್ಲೇಷಿಸಬೇಕು.

ನಮ್ಮ ದೇಶದಲ್ಲಿ ವ್ಯಾಸ, ಪತಂಜಲಿ, ಮುಂತಾದವರ ಬಗ್ಗೆ ಅನೈತಿಹಾಸಿಕ ಕಲ್ಪನೆಗಳಿವೆ. ಆ ಕಲ್ಪನೆಗಳನ್ನು ತೆಗಳಬೇಕಾಗಿಲ್ಲ, ಆದರೆ ಅವನ್ನು ಮಾನ್ಯ ಮಾಡುವಂತೆಯೂ ಇಲ್ಲ. ಮಾನವಶಾಸ್ತ್ರ, ಇತಿಹಾಸ, ಸಮಾಜಶಾಸ್ತ್ರ ಮುಂತಾದ ಶಿಸ್ತುಗಳಲ್ಲಿ ಅಧ್ಯಯನದ ವಿಧಾನವೊಂದಿದೆ. ಅದನ್ನು ತುಚ್ಛೀಕರಿಸಿ ಯಾವ ಸಂಶೋಧನೆಯನ್ನೂ ಮಾಡಲಾಗದು. ಸುಬ್ರಹ್ಮಣ್ಯ ಸ್ವಾಮಿ ಅವರದು ಬೌದ್ಧಿಕೇತರ ಆಸಕ್ತಿಯಾದ್ದರಿಂದ ಅವರ ಸಂಸ್ಕೃತಿ ಚಿಂತನೆಯು ವಿಕೃತರೂಪ ತಾಳುತ್ತದೆ. ವಿರೋಧವಿರುವುದು ಅದಕ್ಕೆ, ಅಷ್ಟೇ. ■




## ಮೌಢ್ಯತೆಯಿಂದ ವೈಚಾರಿಕತೆಯೆಡೆಗೆ

ಭಾರತದಲ್ಲೆಲ್ಲಾ ೨೬.೧೧.೨೦೧೫ರಂದು ಸಂವಿಧಾನ ಸ್ವೀಕಾರ ದಿನವೆಂದು ಅರ್ಥಪೂರ್ಣವಾಗಿ ಆಚರಿಸಿದ ಎರಡೇ ದಿನ, ಅಂದರೆ ಶನಿವಾರ ಮಹಾರಾಷ್ಟ್ರದ "ಶನಿ ಶಿಂಗ್ನಾಪುರ" ಎಂಬ ಧಾರ್ಮಿಕ ಕ್ಷೇತ್ರದಲ್ಲಿ ಶನಿದೇವರ ದೇವಸ್ಥಾನಕ್ಕೆ ಮಹಿಳೆಯರಿಗೆ ಪ್ರವೇಶವಿಲ್ಲದಿದ್ದರೂ ಸಾಹಸಿ ಮಹಿಳೆಯೊಬ್ಬರು ಭದ್ರತಾ ಸಿಬ್ಬಂದಿಯನ್ನು ಲೆಕ್ಕಿಸದೆ ಪ್ರವೇಶಿಸಿದ್ದು ಪ್ರಜಾಪ್ರಭುತ್ವವನ್ನೊಪ್ಪಿಕೊಂಡ ಎಲ್ಲ ಭಾರತೀಯರು ಹೆಮ್ಮೆಪಡುವ ವಿಷಯವೇ. ಆದರೆ ಅಲ್ಲಿ ಆಗಿರುವುದೇ ಬೇರೆ. ದೇವರನ್ನು ಹಾಲಿನಿಂದ ಅಭಿಷೇಕ ಮಾಡಿ ದೇವಾಲಯವನ್ನು ಶುಚಿಗೊಳಿಸಿದ್ದು, ಕರ್ತವ್ಯ ಲೋಪಕ್ಕಾಗಿ ಏಳು ಭದ್ರತಾ ಸಿಬ್ಬಂದಿಯನ್ನು ಅಮಾನತ್ತು ಮಾಡಿದ್ದು, ಗ್ರಾಮಸ್ಥರೆಲ್ಲ ಸೇರಿ ಗ್ರಾಮದಲ್ಲಿ 'ಬಂದ್' ಆಚರಿಸಿದ್ದನ್ನು ನೋಡಿದರೆ ನಿಜಕ್ಕೂ ಇಲ್ಲಿ ಸಂವಿಧಾನದ ಆಶಯ ಈಡೇರಿದೆಯಾ ಎಂಬ ಪ್ರಶ್ನೆ ಮೂಡುತ್ತದೆ.

ಪುರುಷ ಮತ್ತು ಮಹಿಳೆಯರಲ್ಲಿ ಪುರುಷ ಮೇಲು, ಮಹಿಳೆ ಕೀಳು ಎಂಬ ಮೌಢ್ಯತೆಗೆ ಏನೆನ್ನಬೇಕು ? ಮಹಿಳೆಗೆ ಪ್ರವೇಶವಿಲ್ಲದ ಕೆಲವು ದೇವಸ್ಥಾನಗಳು ಈ ನಾಡಿನಲ್ಲಿವೆ. ಅಷ್ಟೇ ಅಲ್ಲ, ಈ ವ್ಯವಸ್ಥೆಯನ್ನು ಸಮರ್ಥಿಸಿಕೊಳ್ಳುವವರೂ ಇದ್ದಾರೆ. ಒಬ್ಬ ಮಹಿಳೆ ದೇವಸ್ಥಾನ ಪ್ರವೇಶಿಸಿದರೆ ಅಲ್ಲಿರುವ ದೇವಸ್ಥಾನ ಅಪವಿತ್ರವಾಗುತ್ತದೆ, ದೇವರು ತನ್ನ ಪಾವಿತ್ರ್ಯತೆ ಕಳೆದುಕೊಳ್ಳುತ್ತಾನೆ ಎಂಬ ಮೌಢ್ಯ ವಾದವಿದೆ. ದೇವರೇ ಸೃಷ್ಟಿಸಿದ ಮಹಿಳೆ ದೇವರ ಹತ್ತಿರ ಹೋದಾಗ ಅದೇ ದೇವರು ಮತ್ತು ದೇವಸ್ಥಾನ ಅಪವಿತ್ರವಾಗಿಬಿಡುತ್ತದೆ ಎಂದು ವಾದಿಸಿದರೆ ದೇವರನ್ನೇ ಅಪವಿತ್ರ ಮಾಡಿಬಿಡುವ ಶಕ್ತಿ ಮಹಿಳೆಗೆ ಇದೆ ಎಂದಾಯ್ತು. ಹಾಗಾದರೆ ದೇವರಿಗಿಂತ ಮಹಿಳೆಯೇ ಶಕ್ತಿವಂತಳು ಮತ್ತು ದೊಡ್ಡವಳೆಂದಾಯಿತಲ್ಲ ? ಇದೆಂಥ ವಾದ ? ಇದೆಷ್ಟು ಸರಿ ? ಕೇವಲ ದೇವಸ್ಥಾನದಲ್ಲಿನ ದೇವರ ಮೂರ್ತಿಯಲ್ಲಷ್ಟೇ ದೇವರಿಲ್ಲ, ಆತ ಸಕಲ ಜೀವರಾಶಿಗಳಲ್ಲಿ ಮತ್ತು ಇಡೀ ಬ್ರಹ್ಮಾಂಡದ ಅಣುಅಣುವಿನಲ್ಲಿಯೂ ಇದ್ದಾನೆ. ಸಕಲಜೀವಿಗಳಲ್ಲಿರುವ ಜೀವಾತ್ಮಗಳಲ್ಲಿ ಪರಮಾತ್ಮನ ಅಂಶವಿರುವುದರಿಂದ ಸಕಲಜೀವಿಗಳಿಗೂ ಲೇಸ ಬಯಸುವ ಭಾವ ನಮ್ಮದಾಗಬೇಕು. ದೇವಾಲಯಗಳಲ್ಲಿ ಪ್ರವೇಶ ನಿರ್ಬಂಧ, ಅಸ್ಪೃಶ್ಯತೆ ಆಚರಣೆ, ಬಹಿಷ್ಕಾರಗಳಂಥ ಮೌಢ್ಯಾಚರಣೆಗಳನ್ನು ಇನ್ನಾದರೂ ಕೈಬಿಟ್ಟು ಸಮಾನತೆ ಮತ್ತು ಮಾನವೀಯತೆಯಿಂದ ಎಲ್ಲರೂ ನಡೆದುಕೊಳ್ಳುವಂತಾಗಲಿ. ಆಗ ಸಂವಿಧಾನದ ಆಶಯದಂತೆ ಎಲ್ಲ ಬಗೆಯ ಸಮಾನತೆಯನ್ನು ಸಾಧಿಸಬಹುದು.

*ಕಲಬುರಗಿ* **_ವೆಂಕಟೇಶ ಕೆ. ಜನಾದ್ರಿ_**

## ಟಿಪ್ಪು ಸುಲ್ತಾನ್

ಟಿಪ್ಪು ಸುಲ್ತಾನನ ಬಗ್ಗೆ ವಾದ–ವಿವಾದಗಳು ಈವರೆಗೂ ಬಂದು ಪರಿಸ್ಥಿತಿ ಈಗ ಸ್ವಲ್ಪ ತಣ್ಣಗಾಗಿದೆ. ಟಿಪ್ಪು ಸುಲ್ತಾನನನ್ನು ಕೆಲವರು ರಾಷ್ಟ್ರಪ್ರೇಮಿ, ಸ್ವಾತಂತ್ರ್ಯ ಹೋರಾಟಗಾರನೆಂದು, ಇನ್ನು ಕೆಲವರು ಅವನನ್ನು ದೇಶದ್ರೋಹಿ, ಸ್ವಾಮಿದ್ರೋಹಿ ಮತ್ತು ಮತಾಂಧ ಎಂದು ಹೀಯಾಳಿಸುತ್ತಾರೆ.

ಈ ಕುರಿತು ನಾನು ಇತಿಹಾಸಕಾರನಾಗಿ ಟಿಪ್ಪು ಸುಲ್ತಾನನನ್ನು ಮೂರು ದೃಷ್ಟಿಕೋನಗಳಿಂದ




ನೋಡಬಯಸುತ್ತೇನೆ. ಮೊದಲನೆಯದು, ಒಬ್ಬ ಸೇನಾನಿಯಾಗಿ ಮತ್ತು ಸೈನಿಕನಾಗಿ. ಎರಡನೆಯದು, ಅವನನ್ನು ಒಬ್ಬ ರಾಜನನ್ನಾಗಿ ಮತ್ತು ರಾಜಕೀಯ ಮುತ್ಸದ್ದಿಯಾಗಿ. ಮೂರನೆಯದು, ಒಬ್ಬ ಮತಾಂಧನಾಗಿ.

ಅವನೊಬ್ಬ ಅಪ್ರತಿಮ ಸೇನಾನಿ. ಸೇನೆಯ ಸಂಚಾಲಕನಾಗಿ ಭಾರತದಲ್ಲೇ ಪ್ರಪ್ರಥಮವಾಗಿ, ವಿಜಯನಗರ ಸಾಮ್ರಾಜ್ಯದ ನಂತರ ಅತಿಹೆಚ್ಚು ಪ್ರದೇಶಗಳನ್ನು ಮೈಸೂರು ರಾಜ್ಯದ ಅಧೀನಕ್ಕೆ ತಂದನು. ಇದು ಐತಿಹಾಸಿಕ ಸತ್ಯ.

ಅವನನ್ನು ರಾಜನಾಗಿ ಮತ್ತು ರಾಜಕೀಯ ಮುತ್ಸದ್ದಿಯನ್ನಾಗಿ ನೋಡಬೇಕು. ಈ ಬಗ್ಗೆ ಟಿಪ್ಪು ಆಗಲೀ, ಅವರ ತಂದೆ ಹೈದರಾಲಿಯಾಗಲೀ ಎಂದೂ ತಾವು ಸ್ವತಂತ್ರ ರಾಜರೆಂದು ಘೋಷಿಸಿಲ್ಲ. ಅವರು ಮೈಸೂರು ಒಡೆಯರ ಹೆಸರಿನಲ್ಲೇ ರಾಜ್ಯವನ್ನಾಳಿದರು. ಈ ಸಮಯದಲ್ಲಿ ಒಡೆಯರ ಬಗ್ಗೆ ಎರಡು ಮಾತನ್ನು ಹೇಳಬೇಕಾಗುತ್ತದೆ. ಅದೆಂದರೆ, ೩೦ ಅಥವಾ ೩೫ ಜನ ಒಡೆಯರಲ್ಲಿ ಒಬ್ಬಿಬ್ಬರನ್ನು ಬಿಟ್ಟರೆ ಬೇರೆ ಯಾರೂ ಪಾಳೆಗಾರಿಕೆ ಮನಃಸ್ಥಿತಿಯಿಂದ ಹೊರಬರಲಿಲ್ಲ. ಇದರ ಉಪಯೋಗ ಪಡೆದು ಹೈದರಾಲಿ ಮತ್ತು ಟಿಪ್ಪು ಇಬ್ಬರೂ ಆಡಳಿತವನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡು ರಾಜ್ಯವನ್ನು ನಡೆಸಿದರು. ಈ ಸಂದರ್ಭದಲ್ಲಿ ಅವರು ದಿನನಿತ್ಯದ ಆಡಳಿತವನ್ನು ಅಪ್ರಯೋಜಕ ಎನ್ನುವುದಕ್ಕಿಂತ ವಿಶ್ವಾಸಘಾತುಕರಾಗಿದ್ದ ದಿವಾನ್ ಪೂರ್ಣಯ್ಯನವರಿಗೆ ವಹಿಸಿದರು ಮತ್ತು ಮೀರ್ ಸಾದಿಕ್‌ಗೆ ಸೈನ್ಯದ ಉಸ್ತುವಾರಿ ವಹಿಸಿದರು. ಒಬ್ಬ ರಾಜನು ಒಬ್ಬ ವ್ಯಕ್ತಿಯನ್ನು ಅಳೆಯುವ ಅಥವಾ ದೂರದೃಷ್ಟಿಯಿಂದ ನೋಡುವ ಕ್ರಿಯೆಯಲ್ಲಿ ಎಡವಿದನೆಂದೇ ಹೇಳಬೇಕು.

ಟಿಪ್ಪು ಕೊಡವ ಮತ್ತು ಮಲಬಾರ್ ಪ್ರದೇಶ ಹಾಗೂ ಕರಾವಳಿ ತೀರವನ್ನು ಆಕ್ರಮಿಸಿದಾಗ ಅಲ್ಲಿಯ ಜನರ ಬಹುಪತಿತ್ವ ಅಥವಾ ಮಾತೃಪ್ರಧಾನ ಎನ್ನುವ ಅಶ್ಲೀಲ ಸಂಪ್ರದಾಯವನ್ನು ವಿರೋಧಿಸಿದ. ಜೊತೆಗೆ, ಅದನ್ನು ಇಸ್ಲಾಂ ದೃಷ್ಟಿಯ ಮೂಲಕ ವಿಶ್ಲೇಷಿಸಿದ. ಇದಕ್ಕೆ ಒಳಪಡದವರನ್ನು ಶಿಕ್ಷೆಗೆ ಗುರಿಪಡಿಸಿದ. ಇದು ಅವನು ಎಸಗಿದ ಮಹಾನ್ ತಪ್ಪು. ಒಬ್ಬ ರಾಜನಾದವನು ಎಂದೂ ಜನರ ವೈಯಕ್ತಿಕ ಆಚರಣೆಗಳಲ್ಲಿ ಮೂಗು ತೂರಿಸಬಾರದು. ಇದಕ್ಕೋಸ್ಕರವೇ ಅವನನ್ನು ಅಂದು ಮತ್ತು ಇಂದೂ ಸಹ ಕೊಡವ ಜನಾಂಗ ದ್ವೇಷಿಸುವುದು. ಈ ಕಾರಣಕ್ಕೋಸ್ಕರವೇ ಕೊಡವರು ಕೊನೆಯ ತನಕ ಬ್ರಿಟಿಷರಿಗೆ ನಿಷ್ಠಾವಂತರಾಗಿದ್ದದ್ದು. ಇಲ್ಲಿ ಟಿಪ್ಪುವಿನ ವೈಫಲ್ಯತೆ ಎದ್ದು ಕಾಣುತ್ತದೆ.

ಅಂತಿಮವಾಗಿ, ರಾಜಕೀಯವಾಗಿ ಸೂಕ್ಷ್ಮಮತಿಗಳಾದ ಬ್ರಿಟಿಷರು ಈ ಜನಾಂಗಗಳನ್ನು ಮತ್ತು ದಿವಾನ್ ಪೂರ್ಣಯ್ಯನವರನ್ನು ತಮ್ಮ ಪರವಾಗಿ ಉಪಯೋಗಿಸಿಕೊಂಡು, ಹಿಂದುತ್ವವನ್ನು ಎತ್ತಿಹಿಡಿದ ಮರಾಠರನ್ನು, ಟಿಪ್ಪುವಿನ ಧರ್ಮವನ್ನೇ ಪಾಲಿಸಿದ ಇಸ್ಲಾಂ ಧರ್ಮದ ನಿಜಾಮರನ್ನು ಮತ್ತು ಒಡೆಯರನ್ನು ತಮ್ಮ ಕಡೆ ಸೆಳೆದು ಟಿಪ್ಪುವನ್ನು ಸೋಲಿಸಿದರು. ಇದಕ್ಕೆ ಕೈಜೋಡಿಸಿದ ಮರಾಠರಿಗೆ, ದಿವಾನರಿಗೆ, ಒಡೆಯರಿಗೆ, ನಿಜಾಮರಿಗೆ, ದೇಶದ ಸಮಗ್ರತೆಯ ಬಗ್ಗೆ ಕಲ್ಪನೆಯೇ ಇರಲಿಲ್ಲ. ಆಗಿನ ಕಾಲದಲ್ಲಿ ಇತಿಹಾಸಕಾರನಾದ ಸಲೀಲ್ ಅಲಿಯವರ ವಿಶ್ಲೇಷಣೆಯ ಪ್ರಕಾರ ಸಾಮಾನ್ಯ ಜನರಿಗೆ ಸ್ವಾತಂತ್ರ್ಯ, ದೇಶಭಕ್ತಿ ಮತ್ತು ರಾಷ್ಟ್ರೀಯತೆಗಳೆಂಬ ಕಲ್ಪನೆಗಳು ಅಪರಿಚಿತವಾಗಿದ್ದವು. ಅಂದಿನ ಜನರಿಗೆ ಬೇಕಾಗಿದ್ದದ್ದು ಖಾಸಗಿ ಭದ್ರತೆ. ಸ್ವಾತಂತ್ರ್ಯ, ದೇಶಭಕ್ತಿ ಮತ್ತು ರಾಷ್ಟ್ರೀಯತೆ ಪಾಶ್ಚಾತ್ಯ ಮತ್ತು ಇಂಗ್ಲಿಷ್ ಭಾಷೆಯ ಒಡನಾಟದಿಂದ ಉತ್ಪತ್ತಿಯಾದ ಅಂಶಗಳು. ಅಂದಿನ ಕಾಲದ ಯಾವ ರಾಜನಿಗೂ, ರಾಣಿಗೂ ತನ್ನ ಸಿಂಹಾಸನ ಮತ್ತು ತನ್ನ ಆಸ್ತಿ ಹಾಗೂ

ರಾಜ್ಯಗಳನ್ನು ಬಿಟ್ಟರೆ ಸಮಗ್ರ ರಾಷ್ಟ್ರದ ಬಗ್ಗೆ ಕಲ್ಪನೆಯೇ ಇರಲಿಲ್ಲ.

*ಬೆಂಗಳೂರು* **ಬಿ. ಎಸ್. ಜಯಚಂದ್ರ**

## ಮಕ್ಕಳಲ್ಲಿ ಮಧುಮೇಹ ರೋಗ

ತಮ್ಮ ಮಗನಿಗೆ ಮುಂದೆ ಮೆಡಿಕಲ್ ವಿಭಾಗದಲ್ಲಿ ಸೀಟು ದೊರೆಯಲಿ ಎಂಬ ಅದಮ್ಯ ಛಲದೊಂದಿಗೆ ಮಿಶ್ರಾ ದಂಪತಿ ಹದಿನಾರು ವರ್ಷದ ಮಗ ರಮಾನಂದನಿಗೆ ಪಿ.ಯು.ಸಿ. ಪರೀಕ್ಷೆಯಲ್ಲಿ ಉನ್ನತ ದರ್ಜೆಯಲ್ಲೇ ಅಂಕ ಪಡೆಯಲು ಒತ್ತಡ ಹಾಕುತ್ತಿದ್ದರು. ಹಗಲು ರಾತ್ರಿಯ ಓದಿನೊಂದಿಗೆ ರಜಾ ದಿನಗಳಲ್ಲೂ ವಿಶೇಷ ಟ್ಯೂಷನ್ ಪಡೆಯುತ್ತಿದ್ದ ರಮಾನಂದ, ಇದ್ದಕ್ಕಿದ್ದಂತೆ ತೂಕ ಕಳೆದುಕೊಳ್ಳತೊಡಗಿದ. ವಿಪರೀತ ಬಾಯಾರಿಕೆ, ಪದೇ ಪದೇ ಮೂತ್ರ ವಿಸರ್ಜನೆ. ಪರೀಕ್ಷೆ ಸಮೀಪಿಸುತ್ತಿದ್ದಂತೆ ಆತ ಓದಿನಲ್ಲೂ ಆಸಕ್ತಿ ಕಳೆದುಕೊಳ್ಳತೊಡಗಿದ. ದೃಷ್ಟಿಯೂ ಮಂಜಾದಂತೆನಿಸಿದಾಗ ಗಾಬರಿಗೊಂಡ ಮಿಶ್ರಾ ದಂಪತಿಗಳು ಆತನನ್ನು ಖಾಸಗಿ ಆಸ್ಪತ್ರೆಯೊಂದರಲ್ಲಿ ತಪಾಸಣೆಗೊಳಪಡಿಸಿದರು. ರಕ್ತದ ಪರೀಕ್ಷೆಗೊಳಪಡಿಸಿದಾಗ ಆತನ ರಕ್ತದಲ್ಲಿ ಸಕ್ಕರೆಯ ಪ್ರಮಾಣವು ೩೫೦ ಎಮ್‌ಜಿ/ಡೆಲಿ ಇದ್ದು, ಆತ ಜೀವನಪರ್ಯಂತ ಇನ್‌ಸುಲಿನ್ ಶಾಟ್ ತೆಗೆದುಕೊಳ್ಳಬೇಕೆಂಬ ಕರ್ಣಕಠೋರ ವಿಷಯ ತಿಳಿದಾಗ ಆ ದಂಪತಿಗಳು ದಂಗಾಗಿಹೋದರು. ಹೌದು, ರಮಾನಂದನೀಗ ಮೊದಲನೆಯ ವರ್ಗದ ಮಧುಮೇಹ ರೋಗಿ. ಪಿ.ಯು.ಸಿ.ಯ ಅತಿ ಹೆಚ್ಚಿನ ಅಂಕ ಪಡೆಯಬೇಕಾದ ಒತ್ತಡ, ಆತಂಕಗಳು ಆತನನ್ನು ಮಧುಮೇಹಿಯನ್ನಾಗಿ ಮಾಡಿದವು.

ಭಾರತದಲ್ಲಿ ರಮಾನಂದನನಂತಹ ಹದಿಹರೆಯದ ಮಧುಮೇಹಿಗಳ ಸಂಖ್ಯೆಯು ಆತಂಕ ಹೆಚ್ಚಿಸುವಷ್ಟು ಪ್ರಮಾಣದಲ್ಲಿ ಬೆಳೆಯುತ್ತಿದೆ. ಪರೀಕ್ಷೆಯಲ್ಲಿ ಹೆಚ್ಚಿನ ಅಂಕ ಗಳಿಸಲು ಒತ್ತಡ, ಜೊತೆಗೆ ಅಧಿಕ ಕಂಪ್ಯೂಟರ್ ಬಳಕೆ, ದೀರ್ಘ ದೂರದರ್ಶನದ ವೀಕ್ಷಣೆ, ಸಮಯ ಉಳಿತಾಯಕ್ಕಾಗಿಯೇ ತಯಾರಿಸಿ ಸಿದ್ಧಪಡಿಸಿದ ಆಹಾರ ಸೇವನೆ ಹಾಗೂ ಚಟುವಟಿಕೆರಹಿತ ಜೀವನ–ಇಂತಹ ವಾತಾವರಣದಲ್ಲಿ ಬೆಳೆಯುತ್ತಿರುವ ಯುವಪೀಳಿಗೆಯು ಮಧುಮೇಹಿಗಳಾಗಿ ಪರಿವರ್ತನೆಗೊಂಡು ಬದುಕನ್ನು ಬರ್ಬರಗೊಳಿಸಿಕೊಳ್ಳುತ್ತಿರುವುದು ತುಂಬ ವಿಷಾದನೀಯ. ಮಕ್ಕಳ ದಿನಾಚರಣೆಯೊಂದಿಗೆ ಮಧುಮೇಹಿಗಳ ದಿನಾಚರಣೆಯೂ ನಡೆಯುವ ನವೆಂಬರ್ ೧೪ರಂದು ಮಕ್ಕಳು ತಮ್ಮ ಜೀವನಶೈಲಿಯನ್ನು ಬದಲಿಸಿಕೊಂಡು ಮಧುಮೇಹ ರೋಗದಿಂದ ದೂರವಿರುವ ಸಾಧ್ಯತೆಗಳನ್ನು ಪರಿಶೀಲಿಸಲು ಇದು ಸಕಾಲ.

ನಾವು ತಿನ್ನುವ ಆಹಾರವು ಜೀರ್ಣಗೊಂಡು ರಕ್ತಕಣಗಳಿಗೆ ನೀಡುವ ಶಕ್ತಿಯಾದ ಗ್ಲೂಕೋಸ್ ಆಗಿ ಪರಿವರ್ತನೆಗೊಳ್ಳುತ್ತದೆ. ನಮ್ಮ ಉದರದಲ್ಲಿರುವ ಸ್ವಾದು ಗ್ರಂಥಿ ಅಥವಾ ಮೇದೋಜೀರಕ ಗ್ರಂಥಿ (ಪ್ಯಾಂಕ್ರಿಯಾಸ್) ಇನ್ಸುಲಿನ್ ಎನ್ನುವ ನಿರ್ನಾಳ ರಸವನ್ನು ಸೂಸುತ್ತಿರುತ್ತದೆ. ಈ ನಿರ್ನಾಳ ರಸವು ರಕ್ತಪ್ರವಾಹದಲ್ಲಿರುವ ಗ್ಲೂಕೋಸ್‌ಅನ್ನು ರಕ್ತಕಣಗಳಿಗೆ ಸೇರಿಸುವ ಕೀಲಿಯಂತೆ ಕೆಲಸ ಮಾಡುತ್ತದೆ. ಯಾವುದೇ ಕಾರಣಗಳಿಂದ ಸ್ವಾದುಗ್ರಂಥಿಯಿಂದ ಇನ್ಸುಲಿನ್ ಒಸರದಿದ್ದರೆ ಅಥವಾ ಬಹಳ ಕಡಿಮೆ ಸ್ರಾವವಿದ್ದಲ್ಲಿ ಅಥವಾ ಈ ಇನ್ಸುಲಿನ್ ತನ್ನಲ್ಲಿರುವ ಬೀಟ ಕಣವನ್ನು ಕುಗ್ಗಿಸಿಕೊಂಡು ರಕ್ತಕಣಗಳಿಗೆ ಗ್ಲೂಕೋಸನ್ನು ಸೇರಿಸಲು ವಿಫಲವಾದಲ್ಲಿ ರಕ್ತಕಣಗಳ ಶಕ್ತಿಯು ಕುಗ್ಗುತ್ತದೆ. ಅಲ್ಲದೆ ರಕ್ತನಾಳಗಳೊಳಗಿರುವ ರಕ್ತದಲ್ಲಿ ಸಕ್ಕರೆಯ ಪ್ರಮಾಣವು ಏರುತ್ತಾ ಹೋಗುತ್ತದೆ. ಈ ಪ್ರಮಾಣವು ಯಾವುದೇ ಸಂದರ್ಭದಲ್ಲಿ ೧೪೦ ಎಮ್‌ಜಿ / ಡೆಲಿಗಿಂತ ಹೆಚ್ಚಾದಲ್ಲಿ ಆ ವ್ಯಕ್ತಿಯನ್ನು ಮಧುಮೇಹಿ ಎನ್ನಲಾಗುತ್ತದೆ. ಮೊದಲನೆಯ ವರ್ಗದಲ್ಲಿ ಬಾಹ್ಯವಾಗಿ ಇನ್ಸುಲಿನ್‌ಅನ್ನು ನೀಡಿ ಸಕ್ಕರೆಯ ಪ್ರಮಾಣವನ್ನು ನಿಯಂತ್ರಿಸಲಾಗುತ್ತದೆ. ಎರಡನೆಯ ವರ್ಗದಲ್ಲಿ (ಟೈಪ್ – ೨) ಆರಂಭಿಕ ಹಂತದಲ್ಲಿ ಮಾತ್ರೆಗಳ ಸಹಾಯದಿಂದ ರಕ್ತದಲ್ಲಿ ಸಕ್ಕರೆಯ ಪ್ರಮಾಣವನ್ನು ತಗ್ಗಿಸಲಾಗುತ್ತದೆ.

ರಕ್ತದಲ್ಲಿ ಸಕ್ಕರೆಯ ಪ್ರಮಾಣವನ್ನು ನಿಯಂತ್ರಿಸದಿದ್ದರೆ ಅದು ದೈಹಿಕವಾಗಿ ಅನೇಕ ಬಾಧೆಗಳಿಗೆ ಕಾರಣವಾಗಬಲ್ಲುದು. ಕುರುಡಾಗುವಿಕೆ, ಕಿಡ್ನಿ ವೈಫಲ್ಯ, ಹೃದಯಾಘಾತ, ಪಾರ್ಶ್ವವಾಯುವೇ ಅಲ್ಲದೆ ಗ್ಯಾಂಗ್ರಿನ್ ಕಾಯಿಲೆಗೆ ತುತ್ತಾಗಿ ಅಂಗಛೇದನಕ್ಕೂ ಗುರಿಯಾಗಬೇಕಾಗುತ್ತದೆ. ಇದಕ್ಕಾಗಿ ಮಧುಮೇಹಿಯು ನಿಯಮಿತವಾಗಿ ರಕ್ತಪರೀಕ್ಷೆಗೊಳಪಟ್ಟು ವೈದ್ಯರ ಸಲಹೆಯ ಮೇರೆಗೆ ಇನ್ಸುಲಿನ್ ಶಾಟ್ ತೆಗೆದುಕೊಳ್ಳಬೇಕಾಗುತ್ತದೆ.

ಮಕ್ಕಳಲ್ಲಿ ಮಧುಮೇಹ ರೋಗವು ದೈಹಿಕ ತೊಂದರೆಗಳೊಂದಿಗೆ ಮಾನಸಿಕವಾಗಿಯೂ ಆಘಾತವನ್ನು ನೀಡುತ್ತದೆ. ಯಾವುದೇ ಮಕ್ಕಳು ಅಥವಾ ಅವರ ಪೋಷಕರಿಗೆ, ತಮ್ಮ ಮಕ್ಕಳಿಗೆ ಮಧುರೋಗವು ಹಿಡಿದಿದೆ ಎಂಬ ವಾಸ್ತವಾಂಶವನ್ನು ನಂಬಲೂ ಆಗದಂತಾಗಿ, ಕೊನೆಗೆ ಆ ಕಟು ಸತ್ಯವನ್ನು ಅರಗಿಸಿಕೊಂಡಾಗ ಬದುಕು ಭಯಾನಕವಾಗಿ ಕಾಣುತ್ತದೆ. ಅದೆಷ್ಟೋ ವರ್ಷ ಸುಖವಾಗಿ ಬಾಳಿ ಜೀವನದ ರಸಸ್ವಾದವನ್ನು ಎಳೆ ಎಳೆಯಾಗಿ ಅನುಭವಿಸಬೇಕಾದ ತನ್ನ ಮಗುವು ಇನ್ನುಮುಂದೆ ಜೀವನದುದ್ದಕ್ಕೂ ಪ್ರತಿದಿನ ಕನಿಷ್ಠ ಎರಡು ಬಾರಿ ಸೂಜಿ ಚುಚ್ಚಿಸಿಕೊಳ್ಳಬೇಕು ಎನ್ನುವ ನಗ್ನಸತ್ಯದ ಅರಿವು ಅವರನ್ನು ವಿಹ್ವಲರನ್ನಾಗಿ ಮಾಡುತ್ತದೆ.

ವಂಶಪಾರಂಪರ್ಯವಾಗಿ ಬರುವ ಕಾರಣಗಳನ್ನು ಹೊರತುಪಡಿಸಿದರೆ ಮಕ್ಕಳು ಎಳವೆಯಲ್ಲೇ ಮಧುಮೇಹಕ್ಕೀಡಾಗುವುದನ್ನು ಬಹುಮಟ್ಟಿಗೆ ತಪ್ಪಿಸಬಹುದು. ಅತಿಯಾಗಿ ಚಿಂತೆ ಮಾಡದಿರುವಿಕೆ, ದಿನಕ್ಕೊಂದು ಘಂಟೆಯಾದರೂ ಬಯಲಿನಲ್ಲಿ ಆಟ, ಕರಿದ ಜಿಡ್ಡಿನ ತಿಂಡಿಗಳಿಗಿಂತ ಸತ್ವಭರಿತ ಹಣ್ಣು, ತರಕಾರಿ ಹಾಗೂ ಸೊಪ್ಪಿನ ಆಹಾರ ಸೇವನೆ, ದೇಹದ ತೂಕವನ್ನು ನಿಯಂತ್ರಣದಲ್ಲಿರಿಸುವಿಕೆ, ಕಡಿಮೆ ಕ್ಯಾಲೊರಿ ಮತ್ತು ಹೆಚ್ಚಿನ ಫೈಬರ್ ಆಹಾರದ ಬಳಕೆ, ಸಹಪಾಠಿಗಳು ಮತ್ತು ಮನೆಯವರೊಂದಿಗೆ ಸಂತೋಷದ ಬದುಕು ಇವು ಮಧುಮೇಹ ರೋಗವನ್ನು ದೂರವಿಡುತ್ತವೆ. ಕೇವಲ ಎರಡು ಕಿಲೋಮೀಟರ್ ದೂರದ ಶಾಲೆಗೆ ಬಸ್‌ನ ಪ್ರಯಾಣಕ್ಕಿಂತ ನಡೆದೇ ಹೋಗುವುದರಿಂದ ದೇಹವು ಕ್ರಿಯಾಶೀಲವಾಗಿರುತ್ತದೆ. ಕಂಪ್ಯೂಟರ್‌ನ ಆಟಕ್ಕಿಂತ ಮರಕೋತಿ ಆಟ, ಹಿಡಿಯಾಟದಂತಹ ಉತ್ಸಾಹದಾಯಕ ಕ್ರೀಡೆಗಳು ಮನಸ್ಸಿಗೂ ದೇಹಕ್ಕೂ ಹೆಚ್ಚು ಮುದ ನೀಡುತ್ತವೆ. ಕಂಪ್ಯೂಟರ್ ಮತ್ತಿತರ ಆಟಗಳಿಂದಾಗುವ ದುಃಸ್ವಪ್ನದ ನಿದ್ರೆಗಿಂತ ಸಮವಯಸ್ಕ ಮಕ್ಕಳೊಂದಿಗೆ ಬಯಲಿನಲ್ಲಿ ಆಡಿದ ಆಟವು ದೇಹಕ್ಕೆ ರಾತ್ರಿ ವೇಳೆ ವಿಶ್ರಾಂತಿ ಮತ್ತು ನಿದ್ರೆಗೆ ಅವಕಾಶ ಮಾಡಿಕೊಡುತ್ತದೆ.

ಒಟ್ಟಿನಲ್ಲಿ, ದೇಶದ ಸಂಪತ್ತಾದ ಇಂದಿನ ಮಕ್ಕಳು ಆಧುನಿಕ ಥಳಕು–ಮೆರುಗಿಗೆ ಮರುಳಾಗಿ ತಮ್ಮ ಮುಂದಿನ ಬದುಕನ್ನು ಮಧುಮೇಹದಿಂದ ಬರ್ಬರಗೊಳಿಸಿಕೊಳ್ಳುವ ಬದಲು ಒತ್ತಡರಹಿತ ಕ್ರಿಯಾಶೀಲ ದಿನಚರಿಗೆ ಒತ್ತುಕೊಟ್ಟು ಸುಂದರ ಭವಿತವ್ಯಕ್ಕೆ ಬುನಾದಿ ಹಾಕಿಕೊಳ್ಳುವುದು ಲೇಸು.

ಮೂರ್ನಾಡು **ಕಿಗ್ಗಾಲು ಎಸ್. ಗಿರೀಶ್**

ಕಾವ್ಯಲೋಕ

## ಬೆ ಳ ಕೆ



ಬೆಳಕೆ ನಿನ್ನನ್ನು ಬಾ ಎಂದು ಕರೆಯುವಾಸೆ
ನಗುತಾ ನವ ಬೆಳಕ ಚೆಲ್ಲುವೆ ಎಂಬ ಹಿರಿದಾಸೆ
ಬತ್ತುತ್ತಿರುವ ಭಾವನೆಗಳ ಬೆಸೆಯುವೆ ಎಂಬ ಭಾವದಾಸೆ
ಅಳಿಯುತ್ತಿರುವ ಸಂಸ್ಕೃತಿಯನ್ನು ಉಳಿಸುವೆ ಎಂಬ ನಾಡಿನ ಆಸೆ
ಭೂ ಒಡಲ ತೂಕದ ಹೆಣ್ಣನವ ಕಾಯುವೆ ಎಂಬ ಕರುಳಿನ ಆಸೆ
ನಶಿಸುತ್ತಿರುವ ಸತ್ವದ ಸಂಬಂಧಗಳನು ಬೆಸೆಯುವೆ ಎಂಬ ಮನದಾಸೆ
ಅತ್ತು ಕರೆಯುತ್ತಿರುವ ಮುಗ್ಧ ಮನಗಳಿಗೆ ನೆರವಾಗುವೆ ಎಂಬ ನೆರಳಿನಾಸೆ
ಹೆಡೆ ಹೊತ್ತು ಹೊರಳಾಡುವವರ ಹೊಟ್ಟೆಗೆ ತುತ್ತಾಗುವೆ ಎಂಬ ಹಸಿವಿನ ಆಸೆ
ನೊಂದ ಹೃದಯಗಳಿಗೆ ಧೈರ್ಯದ ದಾರಿಯಾಗುವೆ ಎಂಬ ಬದುಕಿನ ಆಸೆ
ಕತ್ತಲೆಯ ಕಂಡ ಕಂಗಳಿಗೆ ನಂದಾದೀಪವಾಗುವೆ ಎಂಬ ಬೆಳಕಿನ ಆಸೆ

**ಕಲಾವತಿ ಬೈಚಬಾಳ (ಪ್ರಾಧ್ಯಾಪಕಿ)**
ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಜ್ಞಾನಶಕ್ತಿ ಆವರಣ, ತೊರವಿ, ವಿಜಯಪುರ

**ಎಚ್. ಎಸ್. ಜೈಕುಮಾರ್**

ಕೇಂದ್ರ ಸರ್ಕಾರವು ಈಗಾಗಲೇ ಶಿಕ್ಷಣಕ್ಕಾಗಿ ಮೀಸಲಿಡಲಾದ ಆಯವ್ಯಯದಲ್ಲಿ ಈ ವರ್ಷ ರೂ. ೪೦೦೦ ಕೋಟಿಯನ್ನು ಕಡಿತ ಮಾಡಿದೆ. ಅಲ್ಲದೇ, ಈ ವರ್ಷದ ಕೊನೆಯ ಹೊತ್ತಿಗೆ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ರೂಪಿಸಲು ಕಸರತ್ತು ಮಾಡುತ್ತಿದೆ. ಇದಕ್ಕಾಗಿ ದೇಶಾದ್ಯಂತ ಗ್ರಾಮ ಪಂಚಾಯಿತಿ ಮಟ್ಟದಿಂದ ರಾಷ್ಟ್ರಮಟ್ಟದವರೆಗೆ ಚರ್ಚೆ ಸಂವಾದಗಳನ್ನು ನಡೆಸುತ್ತಿದೆಯಾದರೂ ಇದು ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ನಿಟ್ಟಿನಲ್ಲಿ ನಡೆಯುತ್ತಿಲ್ಲ. ಸರ್ಕಾರವು ಶಿಕ್ಷಣವನ್ನು ಮಾರುಕಟ್ಟೆ ಶಕ್ತಿಗಳ ಕೈಗೊಪ್ಪಿಸುವ ನಿಟ್ಟಿನಲ್ಲಿ ಹಾಗೂ ಕೇಸರೀಕರಣ ಗೊಳಿಸುವ ಹಾದಿಯಲ್ಲಿಯೇ ಹೆಚ್ಚೆಚ್ಚು ಕ್ರಿಯಾಶೀಲವಾಗಿರುವುದು ಆತಂಕಪಡುವ ವಿಚಾರ.



# ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಉನ್ನತ ಶಿಕ್ಷಣ ಪರಭಾರೆ !

ದೇಶದ ಅಭಿವೃದ್ಧಿ ಮತ್ತು ಸಮಾಜ ಬದಲಾವಣೆಯಲ್ಲಿ ಶಿಕ್ಷಣವು ಅತ್ಯಂತ ಪ್ರಮುಖ ಪಾತ್ರ ವಹಿಸುತ್ತದೆ. ವ್ಯಕ್ತಿಗಳಲ್ಲಿ ಶಿಕ್ಷಣವು ವಿಶ್ಲೇಷಣಾ ಶಕ್ತಿಯನ್ನು ಬೆಳೆಸುತ್ತದೆ. ಈ ಕಾರಣದಿಂದಾಗಿಯೇ ಉನ್ನತ ಶಿಕ್ಷಣ ಕೇಂದ್ರಗಳಾದ ವಿಶ್ವವಿದ್ಯಾಲಯಗಳು ಮತ್ತು ಕಾಲೇಜುಗಳು ನುರಿತ ಕೆಲಸಗಾರರು, ಡಾಕ್ಟರುಗಳು, ಇಂಜಿನಿಯರುಗಳು, ಶಿಕ್ಷಣ ತಜ್ಞರು, ರಾಜಕಾರಣಿಗಳು, ಇತ್ಯಾದಿಗಳನ್ನು ಮಾತ್ರ ಉತ್ಪಾದಿಸುವ ಕೇಂದ್ರಗಳಾಗಿರದೆ ವೈಚಾರಿಕ ಆಲೋಚನೆಯುಳ್ಳ ಮನುಷ್ಯರನ್ನು ತರಬೇತು ಗೊಳಿಸುವ ಕೇಂದ್ರಗಳಾಗಿಯೂ ಆಗಬೇಕು. ಇಂತಹ ಕೇಂದ್ರಗಳಲ್ಲಿಯೇ ಜನರು ಆಡಳಿತ ನೀತಿಗಳನ್ನು ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸತೊಡಗುವುದು. ಆದರೆ, ಇತ್ತೀಚಿನ ದಿನಗಳಲ್ಲಿ ಉನ್ನತ ಶಿಕ್ಷಣದ ಮೇಲೆ ದಾಳಿ ಮಾಡಲಾಗುತ್ತಿದೆ. ಶಿಕ್ಷಣವೆಂದರೆ ಕೇವಲ ತರಬೇತಿ ನೀಡುವುದಕ್ಕೆ ಮಾತ್ರವೇ ಸೀಮಿತವಾಗಿದೆ ಮತ್ತು ಈ ಉನ್ನತ ಶಿಕ್ಷಣ ಕೇಂದ್ರಗಳು ಕೇವಲ ಮಾನವ ದೈಹಿಕ ಕೌಶಲ್ಯಗಳ ತರಬೇತಿ ನೀಡುವ ಕೇಂದ್ರಗಳೆಂದು ಪರಿಗಣಿಸಲಾಗಿದೆ. ಜಾಗತೀಕರಣ ಯುಗದಲ್ಲಿ, ಶಿಕ್ಷಣ ಕುರಿತ ಸಾಮಾಜಿಕ ಪರಿಕಲ್ಪನೆ ಕೂಡ ಬದಲಾಗುತ್ತಿದೆ. ಹಿಂದೊಮ್ಮೆ ಸಮಾಜ ಬದಲಾವಣೆ ಮತ್ತು ಶೋಷಣೆಯಿಂದ ಮಾನವ ವಿಮೋಚನೆಗಳಿಗೆ ಸಾಧನವಾಗಿದ್ದ ಶಿಕ್ಷಣವನ್ನು ಇಂದು ಲಾಭಗಳಿಸುವ ವಾಣಿಜ್ಯ ಸರಕೆಂದು ಪರಿಗಣಿಸಲಾಗುತ್ತಿದೆ. ಹಿಂದೆ ಸರ್ಕಾರದ ಜವಾಬ್ದಾರಿಯಾಗಿದ್ದ ಶಿಕ್ಷಣವು ಇಂದು ಮಾರುಕಟ್ಟೆಯ ಸರಕಾಗುತ್ತಿದೆ. ಇವೆಲ್ಲವೂ ದಿಢೀರ್ ಎಂದು ಸಂಭವಿಸದೆ ಆಳುವ ವರ್ಗಗಳಿಂದ ಇಚ್ಛಾಪೂರ್ವಕವಾಗಿ ನಡೆಯುತ್ತಿದೆ.

ಇದೆಲ್ಲ ೧೯೮೬ರ ಹೊಸ ಶೈಕ್ಷಣಿಕ ನೀತಿಯೊಂದಿಗೆ ಆರಂಭಗೊಂಡು, ತದನಂತರದಲ್ಲಿ ಖಾಸಗಿ ಶೈಕ್ಷಣಿಕ ಸಂಸ್ಥೆಗಳೂ ನಾಯಿಕೊಡೆಗಳಂತೆ ಹರಡಿ ವಿದ್ಯಾರ್ಥಿಗಳನ್ನು ಲೂಟಿ ಮಾಡುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಇತ್ತೀಚಿನ ದಿನಗಳಲ್ಲಿ ಜಾರಿಗೊಳಿಸಲಾಗುತ್ತಿರುವ ತೀವ್ರತರದ ಉದಾರೀಕರಣ ನೀತಿಗಳ ಹಿನ್ನೆಲೆಯಲ್ಲಿ ಶೈಕ್ಷಣಿಕ ರಂಗದಲ್ಲಿ ವಿದೇಶಿ ಸಂಸ್ಥೆಗಳನ್ನು ಭಾಗಿಯಾಗಿಸುವ ಕುರಿತು ಚರ್ಚಿಸಲಾಗುತ್ತಿದೆ. ಏಕೆಂದರೆ, ಇದರಲ್ಲಿ ಬಂಡವಾಳದ ಅಪಾರ ಸಾಮರ್ಥ್ಯ ಹುದುಗಿರುವುದು ಲಾಭಕೋರರ ಕಣ್ತೆರೆಸಿದೆ.

೧೯೯೨ರಲ್ಲಿ ಭಾರತ ಸರ್ಕಾರವು ವಿಶ್ವ ವಾಣಿಜ್ಯ ಸಂಸ್ಥೆ (ಡಬ್ಲ್ಯೂಟಿಒ) ಒಪ್ಪಂದಕ್ಕೆ ಸಹಿ ಹಾಕುವ ಮೂಲಕ ದೇಶದ ಕೈಗಾರಿಕೆ, ಕೃಷಿ ಮತ್ತು ವಾಣಿಜ್ಯ ರಂಗವು ಪೂರ್ಣ ಖಾಸಗೀಕರಣಕ್ಕೆ ತೆರೆದುಕೊಂಡಿದ್ದರ ಫಲವಾಗಿ ಲಕ್ಷಗಟ್ಟಲೆ ರೈತರ ಆತ್ಮಹತ್ಯೆ, ಸಣ್ಣ ಮತ್ತು ಕರಕುಶಲ ಕೈಗಾರಿಕೆಗಳ ನಿರ್ನಾಮ ಆಗುತ್ತಿರುವುದನ್ನು ಕಾಣುತ್ತಿದ್ದೇವೆ. ಇದೀಗ ದೇಶದ ಉನ್ನತ ಶಿಕ್ಷಣವನ್ನೂ ಸಹ ಡಬ್ಲ್ಯೂಟಿಒ ಒಪ್ಪಂದದ ಅಡಿಗೆ ಒಪ್ಪಿಸಿ ಒಪ್ಪಂದಕ್ಕೆ ಸಹಿ ಹಾಕಲು ಪ್ರಯತ್ನಗಳು ನಡೆದಿವೆ.

೨೦೦೫ರಲ್ಲಿಯೇ ಕತಾರ್ ದೇಶದ ದೋಹಾದಲ್ಲಿ

ಜರುಗಿದ 'ದೋಹಾ ಸುತ್ತಿನ ವಾಣಿಜ್ಯ ಮಾತುಕತೆ'ಗಳಲ್ಲಿ ಉನ್ನತ ಶಿಕ್ಷಣವನ್ನು ಮಾರುಕಟ್ಟೆಗೆ ತೆರೆಯಲು ಭಾರತ ಒಪ್ಪಿಗೆ ನೀಡಿತ್ತು. ಆದರೆ ಡಬ್ಲ್ಯೂಟಿಒ ಸಂಸ್ಥೆಯ ೧೬೦ ಸದಸ್ಯ ದೇಶಗಳ ನಡುವೆ ಸಮಾನ ಒಪ್ಪಿಗೆ ಸಿಗದ ಕಾರಣ ಅದು ನಿಂತುಹೋಗಿತ್ತು. ಇದೀಗ ಹತ್ತು ವರ್ಷಗಳ ನಂತರ ಇದನ್ನು ಅಂತಿಮಗೊಳಿಸಲು ಈಗ ತಯಾರಿ ನಡೆಯುತ್ತಿದೆ. ಇದು ಶಿಕ್ಷಣವು ಸರ್ಕಾರದ ಸುಪರ್ದಿನಲ್ಲಿದ್ದು ಪ್ರತಿಯೊಬ್ಬರಿಗೂ ಸುಲಭವಾಗಿ ಕೈಗೆಟುವಂತಿರಬೇಕೆಂದು ಬಯಸುವ ಎಲ್ಲರೂ ಆತಂಕಪಡುವ ವಿಷಯವೇ ಸರಿ.

ಕೃಷಿ ಮತ್ತು ಕೈಗಾರಿಕಾ ರಂಗದಲ್ಲಿ ಡಬ್ಲ್ಯೂಟಿಒ ಒಪ್ಪಂದಕ್ಕೆ ಸಹಿ ಹಾಕಿದ ನಂತರ ಬಹುರಾಷ್ಟ್ರೀಯ ಕಂಪನಿಗಳು ದೊಡ್ಡ ಮಟ್ಟದಲ್ಲಿ ನಮ್ಮ ದೇಶದ ಮಾರುಕಟ್ಟೆಯೊಳಗೆ ತಮ್ಮ ಅಗ್ಗದ ಉತ್ಪನ್ನಗಳನ್ನು ತಂದು ರಾಶಿ ಹಾಕಿದವು. ವಿದೇಶಿ ಉತ್ಪನ್ನಗಳೊಂದಿಗೆ ಸ್ಪರ್ಧೆ ಒಡ್ಡಲಾಗದೆ ನಮ್ಮ ಕೃಷಿಕರು, ಸಣ್ಣ ಕೈಗಾರಿಕೆಗಳು ನಾಶಗೊಂಡರೆ ದೇಶೀಯ ದೊಡ್ಡ ಬಂಡವಾಳಗಾರರು ಬಹುರಾಷ್ಟ್ರೀಯ ಕಂಪನಿಗಳೊಂದಿಗೆ ಶಾಮೀಲಾಗಿ ಇನ್ನಷ್ಟು ಲಾಭ ಮಾಡಿಕೊಳ್ಳುವಲ್ಲಿ ಸಫಲಗೊಂಡಿವೆ. ಶಿಕ್ಷಣವನ್ನು ಗ್ಯಾಟ್ಸ್ ಅಡಿಗೆ ತಂದಲ್ಲಿ ಶಿಕ್ಷಣವೂ ಒಂದು ದುಬಾರಿ ಸರಕಾಗುತ್ತದೆ.

ಆರೋಗ್ಯ ರಂಗದ ನಂತರ ಶೈಕ್ಷಣಿಕ ಉದ್ಯಮವು ವಿಶ್ವದಲ್ಲಿ ಎರಡನೇ ಅತಿದೊಡ್ಡ ರಂಗವಾಗಿದ್ದು, ಸುಮಾರು ರೂ. ೧೪೦ ಲಕ್ಷ ಕೋಟಿ ವಹಿವಾಟು ಉಳ್ಳ ಸಾಮರ್ಥ್ಯ ಹೊಂದಿದೆ. ಜಗತ್ತಿನಾದ್ಯಂತ ಸುಮಾರು ೧೫ ಕೋಟಿ ವಿದ್ಯಾರ್ಥಿಗಳು ಉನ್ನತ ಶಿಕ್ಷಣ ವ್ಯಾಸಂಗ ಮಾಡುತ್ತಲಿದ್ದು, ಈ ರಂಗವು ವಾರ್ಷಿಕ ಶೇ. ೬ ದರದಲ್ಲಿ ಬೆಳೆಯುತ್ತಿದೆ. ಸುಮಾರು ೩೫ ಲಕ್ಷ ಮಂದಿ ಇದರಲ್ಲಿ ಕೆಲಸ ಮಾಡುತ್ತಿದ್ದು, ರೂ. ೨೧,೦೦,೦೦೦ ಕೋಟಿಯಷ್ಟು ಮೊತ್ತದ ಮಾರುಕಟ್ಟೆ ಹೊಂದಿದೆ. ವಿಶ್ವದಲ್ಲೇ ಭಾರತ ೩ನೇ ಅತಿ ದೊಡ್ಡ ಶೈಕ್ಷಣಿಕ ವ್ಯವಸ್ಥೆ ಹೊಂದಿದೆ. ಭಾರತದ ಉನ್ನತ ಶಿಕ್ಷಣ ರಂಗದಲ್ಲಿ ೧೫-೨೪ರ ವಯೋಮಾನದ ಸುಮಾರು ೨.೩೪ ಕೋಟಿ ಆಕಾಂಕ್ಷಿ ವಿದ್ಯಾರ್ಥಿಗಳಿದ್ದು, ವಾರ್ಷಿಕ ಸುಮಾರು ರೂ. ೧,೦೫,೦೦೦ ಕೋಟಿ ಮೊತ್ತದ ಮಾರುಕಟ್ಟೆ ಹೊಂದಿದೆ. ಇತರೆ ರಂಗಗಳಲ್ಲಿ ಯಜಮಾನಿಕೆ ಹೊಂದಿರುವಂತೆಯೇ ಅಮೇರಿಕಾ ನಾಯಕತ್ವದಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಶೈಕ್ಷಣಿಕ ರಂಗದಲ್ಲಿ ಯಜಮಾನಿಕೆ ಹೊಂದಲು ಹವಣಿಸುತ್ತಿವೆ. ಇದಕ್ಕಾಗಿ ಡಬ್ಲ್ಯೂಟಿಒ ಸಂಸ್ಥೆಯನ್ನು ಸಾಧನವನ್ನಾಗಿ ಬಳಸಿಕೊಳ್ಳುತ್ತಿವೆ.

ಡಬ್ಲ್ಯೂಟಿಒ ಒಪ್ಪಂದದಲ್ಲಿ ಮೂರು ರೀತಿಯಿವೆ : ೧. ವಾಣಿಜ್ಯ ಮತ್ತು ಸುಂಕಗಳ ಸಾಮಾನ್ಯ ಒಪ್ಪಂದ (ಗ್ಯಾಟ್ ೧೯೯೪). ಇದರಲ್ಲಿ ಕೃಷಿ ಕುರಿತ ಒಪ್ಪಂದವೂ ಸೇರಿದೆ.

೨. ವಾಣಿಜ್ಯ ಸಂಬಂಧಿ ಬೌದ್ಧಿಕ ಆಸ್ತಿ ಹಕ್ಕುಗಳ ಒಪ್ಪಂದ (ಟ್ರಿಪ್ಸ್) ಮತ್ತು

೩. ಸೇವಾ ವಲಯದಲ್ಲಿ ವ್ಯಾಪಾರ ಕುರಿತ ಸಾಮಾನ್ಯ ಒಪ್ಪಂದ (ಗ್ಯಾಟ್ಸ್ - ಜನರಲ್ ಅಗ್ರಿಮೆಂಟ್ ಆನ್ ಟ್ರೇಡ್ ಇನ್ ಸರ್ವೀಸಸ್)

ಈಗ ಶಿಕ್ಷಣವನ್ನು ಗ್ಯಾಟ್ಸ್ ಅಡಿಗೆ ತರುತ್ತಲಿರುವುದು ಮೂರನೇ ರೀತಿಯ ಒಪ್ಪಂದದಲ್ಲಿ. ದುರಂತವೆಂದರೆ, ಗ್ಯಾಟ್ಸ್ ಅಡಿಯಲ್ಲಿ ಮನೋರಂಜನಾ ಸೇವೆಗಳು, ಕ್ಲಬ್‌ಗಳು ಮತ್ತು ನೈಟ್ ಪಬ್‌ಗಳನ್ನು ನಿಯಂತ್ರಿಸುವ ಅದೇ ನಿಯಮಾವಳಿಗಳು ಶಿಕ್ಷಣವನ್ನು ಸಹ ನಿಯಂತ್ರಿಸುತ್ತವೆ. ಇದು ದೇಶಾಭಿವೃದ್ಧಿ ಮತ್ತು ಮಾನವಾಭಿವೃದ್ಧಿಯ ಪಾತ್ರದಿಂದ ಶಿಕ್ಷಣವನ್ನು ಕಿತ್ತೊಗೆದು ಅದನ್ನು ಕೇವಲ ಮಾರುಕಟ್ಟೆಯ ಲಾಭೋದ್ದೇಶಕ್ಕಾಗಿ ಗ್ಯಾಟ್ಸ್ ಅಡಿಯಲ್ಲಿ ತಂದಿರುವುದನ್ನು ಸ್ಪಷ್ಟಪಡಿಸುತ್ತದೆ.

ಗ್ಯಾಟ್ಸ್ ಒಪ್ಪಂದದಲ್ಲಿ ಶಿಕ್ಷಣವನ್ನು ಐದು ಉಪ ವಲಯಗಳಾಗಿ ವಿಭಜಿಸಲಾಗಿದೆ : ೧. ಪ್ರಾಥಮಿಕ ಶಿಕ್ಷಣ ೨. ಮಾಧ್ಯಮಿಕ ಶಿಕ್ಷಣ ೩. ಉನ್ನತ ಶಿಕ್ಷಣ ೪. ವಯಸ್ಕರ ಶಿಕ್ಷಣ ಮತ್ತು ೫. ಇತರ ಶಿಕ್ಷಣ.

ಪ್ರಸ್ತುತ ಭಾರತ ಸರ್ಕಾರವು ಉನ್ನತ ಶಿಕ್ಷಣವನ್ನು ಮಾರುಕಟ್ಟೆಗೆ ತೆರೆಯುವ ಸಲುವಾಗಿ ಗ್ಯಾಟ್ಸ್ ಒಪ್ಪಂದಕ್ಕೆ ಸಹಿ ಹಾಕಲು ಒಪ್ಪಿಗೆ ನೀಡಿದೆ.

ಸತತವಾಗಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಸರ್ಕಾರಗಳು ಈ ಬದ್ಧತೆಯನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ಕೆಲಸ ಮಾಡುತ್ತಾ ಬಂದಿವೆ. ಸರ್ಕಾರದ ಹಲವು ಸಮಿತಿಗಳು ಸರ್ಕಾರದಲ್ಲಿ ಅನುದಾನ ಕೊರತೆಯಿರುವುದರಿಂದ ಶಿಕ್ಷಣ ರಂಗದಲ್ಲಿ ಬಂಡವಾಳ ಹೂಡಲು ವಿದೇಶಿ ಸಂಸ್ಥೆಗಳನ್ನು ಆಹ್ವಾನಿಸಬೇಕೆಂದು ಪ್ರತಿಪಾದಿಸಿವೆ. ವಾಸ್ತವವಾಗಿ ಸರ್ಕಾರವು ಶಿಕ್ಷಣ ಒದಗಿಸುವ ತನ್ನ ಜವಾಬ್ದಾರಿಯಿಂದ ಹಿಂದೆ ಸರಿಯುತ್ತಿದ್ದು ಖಾಸಗಿ ಸಂಸ್ಥೆಗಳನ್ನು ಪ್ರೋತ್ಸಾಹಿಸುತ್ತಿದೆ. ಪ್ರಸ್ತುತ ಕೇಂದ್ರ ಸರ್ಕಾರವು ಉನ್ನತ ಶಿಕ್ಷಣದ ಮೇಲೆ ಜಿಡಿಪಿಯಲ್ಲಿ ಕೇವಲ ಶೇ. ೧.೦ರಷ್ಟು ಮಾತ್ರವೇ ವ್ಯಯಿಸುತ್ತಿದೆಯಷ್ಟೇ.

ಭಾರತ ಸರ್ಕಾರ ಶಿಕ್ಷಣ ರಂಗದಲ್ಲಿ ಶೇ. ೧೦೦ರಷ್ಟು ವಿದೇಶಿ ನೇರ ಬಂಡವಾಳಕ್ಕೆ ಅವಕಾಶ ಕಲ್ಪಿಸಿದೆ. ಕಳೆದ ೧೪ ವರ್ಷಗಳಲ್ಲಿ ರೂ. ೪,೯೬೧ ಕೋಟಿ ವಿದೇಶಿ ಬಂಡವಾಳ ಈ ರಂಗದಲ್ಲಿ ಹರಿದು ಬಂದಿದೆ. ಇದಲ್ಲದೇ ಪರೋಕ್ಷ ಜಂಟಿ ಸಹಭಾಗಿತ್ವ ಮತ್ತು ಶೈಕ್ಷಣಿಕ ಸಹಭಾಗಿತ್ವಗಳ ಮೂಲಕ ವಿದೇಶಿ ವಿ.ವಿ.ಗಳು ದೊಡ್ಡ ಪ್ರಮಾಣದಲ್ಲಿ ನಮ್ಮ ಶಿಕ್ಷಣ ರಂಗವನ್ನು ಪ್ರವೇಶಿಸಿವೆ. ಸುಮಾರು ೬೩೧ ವಿದೇಶಿ ಶಿಕ್ಷಣ ಸಂಸ್ಥೆಗಳು ಭಾರತದಲ್ಲಿ ಕಾರ್ಯನಿರ್ವಹಿಸುತ್ತಿವೆ. ಇವುಗಳ ಪೈಕಿ ಸುಮಾರು ೪೪೦ ಸಂಸ್ಥೆಗಳು ತಮ್ಮ ದೇಶಗಳಿಂದಲೇ ಆಪರೇಟ್ ಮಾಡುತ್ತಿವೆ. ೫ ಮಾತ್ರವೇ ಸ್ವಂತ ಕ್ಯಾಂಪಸ್‌ಅನ್ನು ಭಾರತದಲ್ಲಿ ತೆರೆದಿವೆ, ಉಳಿದ ಸಂಸ್ಥೆಗಳು ಸ್ಥಳೀಯ ಸಂಸ್ಥೆಗಳೊಂದಿಗೆ ಕಾರ್ಯಕ್ರಮ ಆಧಾರಿತ ಜಂಟಿ ಸಹಭಾಗಿತ್ವ ಹೊಂದಿವೆ.

ಈ ತಡೆಗೋಡೆಗಳನ್ನು ನಿವಾರಿಸಲು ಹಿಂದಿನ ಯುಪಿಎ ಸರ್ಕಾರವು ಉನ್ನತ ಶಿಕ್ಷಣ ಮತ್ತು ಸಂಶೋಧನಾ ಮಸೂದೆ ಒಳಗೊಂಡಂತೆ ಉನ್ನತ ಶಿಕ್ಷಣದ ಮೇಲೆಯೇ ಸುಮಾರು ೬ ಮಸೂದೆಗಳನ್ನು ಜಾರಿಗೆ ತರಲು ಯತ್ನಿಸಿತ್ತು. ಇವೆಲ್ಲವೂ ಯುಜಿಸಿ, ಎಂಸಿಐ, ಎಐಸಿಟಿಇ, ಎನ್‌ಸಿಟಿಇ, ಬಿಸಿಐ ಇತ್ಯಾದಿ ಸ್ವಾಯತ್ತ ಹೊಂದಿರುವ ಶೈಕ್ಷಣಿಕ ಪ್ರಾಧಿಕಾರಗಳನ್ನು ರದ್ದುಗೊಳಿಸುವುದನ್ನು ಪ್ರತಿಪಾದಿಸಿದ್ದವು. ಇವೆಲ್ಲವೂ ಕಠಿಣ ನಿಯಂತ್ರಣ ವ್ಯವಸ್ಥೆಯ ಅಡೆತಡೆಗಳನ್ನು ನಿವಾರಿಸಿ ವಿದೇಶಿ ಬಂಡವಾಳ ಹೂಡಿಕೆದಾರರಿಗೆ ಅನುಕೂಲಕರ ಸನ್ನಿವೇಶ ನಿರ್ಮಿಸುವ ಉದ್ದೇಶ ಹೊಂದಿದ್ದವು. ಆದರೆ ರಾಜ್ಯಸಭೆಯಲ್ಲಿ ಇವೆಲ್ಲ ಮಸೂದೆಗಳು ಅಂಗೀಕಾರವಾಗದ್ದರಿಂದ ಯುಪಿಎ-೨ರ ಪ್ರಯತ್ನ ಯಶಸ್ವಿಯಾಗಲಿಲ್ಲ. ಆದರೂ ಸರ್ಕಾರವು ಸಂಸತ್ತನ್ನು ಬದಿಗಿರಿಸಿ ಹಿಂಬಾಗಿಲಿನಿಂದ ಇದೇ ಉದ್ದೇಶಗಳಿಗಾಗಿ ಹಲವು ಕ್ರಮಗಳನ್ನು ಕೈಗೊಂಡಿದ್ದು ಅವೆಲ್ಲವೂ ರಾಷ್ಟ್ರೀಯ ಉಚ್ಚತರ ಶಿಕ್ಷ ಅಭಿಯಾನ್ (ರೂಸಾ) ದಡಿ ಚಾಲನೆಯಲ್ಲಿವೆ.




ರೂಸಾ ಅಭಿಯಾನದ ಉದ್ದೇಶವು ಉನ್ನತ ಶಿಕ್ಷಣದಲ್ಲಿಯ ಸಂರಚನೆಯನ್ನು ಪೂರ್ಣ ಬದಲು ಮಾಡುವುದಾಗಿದ್ದು, ಯುಜಿಸಿಯನ್ನು ಮೂಲೆಗುಂಪು ಮಾಡಿ ಸಾರ್ವಜನಿಕ-ಖಾಸಗಿ ಸಹಭಾಗಿತ್ವವನ್ನು ಉತ್ತೇಜಿಸುವುದಾಗಿದೆ. ಅಕಾಡೆಮಿಕ್ ಸುಧಾರಣೆಗಳನ್ನು ಜಾರಿಗೆ ತರುವ ಮೂಲಕ ವಿದೇಶಿ ಸಂಸ್ಥೆಗಳಿಗೆ ಸಮಾನ ನೆಲೆ ಮತ್ತು ಅವಕಾಶಗಳನ್ನು ಒದಗಿಸುವಲ್ಲಿ 'ಆಯ್ಕೆ ಆಧಾರಿತ ಕ್ರೆಡಿಟ್ ವ್ಯವಸ್ಥೆಯು' ಪ್ರಮುಖ ಸಾಧನವಾಗಿದೆ. ಕಡಿಮೆ ಶಿಕ್ಷಕ-ವಿದ್ಯಾರ್ಥಿ ಸಂಖ್ಯೆ ಮತ್ತು ದುರ್ಬಲ ಮೂಲ ಸೌಲಭ್ಯ ಹೊಂದಿರುವ ಭಾರತದ ಉನ್ನತ ಶಿಕ್ಷಣವು ಈ ಸುಧಾರಣೆಗಳೊಂದಿಗೆ ಕಲಿಕಾ ಪ್ರಕ್ರಿಯೆಯ ಬೋಧನಾ ಗುಣಮಟ್ಟ ಮತ್ತಷ್ಟು ಕುಸಿಯುತ್ತದೆ. ಶಿಕ್ಷಕ-ವಿದ್ಯಾರ್ಥಿಗಳ ನಡುವೆ ತರಗತಿಯಲ್ಲಿನ ಅಂತರ್-ಸಂವಹನ ಇನ್ನಷ್ಟು ಕಡಿಮೆಯಾಗುತ್ತದೆ. ಇದರಿಂದ ವಿದ್ಯಾರ್ಥಿಗಳು ವಿಷಯ ಕುರಿತು

ಆಳವಾದ ತಿಳುವಳಿಕೆ ಹೊಂದುವುದು ಇನ್ನಷ್ಟು ದುಸ್ತರವಾಗುತ್ತದೆ ಮತ್ತು ಅವರಲ್ಲಿ ವೈಚಾರಿಕ ಆಲೋಚನೆ ತುಂಬುವುದು ಕಷ್ಟವಾಗುತ್ತದೆ. ಇದರ ಬದಲಿಗೆ ಮಾರುಕಟ್ಟೆ-ಪೂರಕ ಕೋರ್ಸ್‌ಗಳಿಗೆ ಒತ್ತು ನೀಡುವುದರಿಂದ ವಿಷಯ ಪರಿಣತರಲ್ಲದ ವಿದ್ಯಾರ್ಥಿಗಳಿಗೆ ಕಳಪೆ ಕೆಲಸಗಳು ಮಾತ್ರವೇ ದಕ್ಕುತ್ತವೆ. ಕೋರ್ಸ್‌ಗಳು ಕೂಡ ಆಗಾಗ್ಗೆ ಮಾರುಕಟ್ಟೆಯನ್ನು ಅವಲಂಬಿಸಿ ಬದಲಾಗುವುದರಿಂದ ಶಾಶ್ವತ ಮೂಲ ಸೌಲಭ್ಯವಾಗಲೀ ನುರಿತ ಶಿಕ್ಷಕರಾಗಲೀ ಅವಶ್ಯವಿರುವುದಿಲ್ಲ.

**ಗ್ಯಾಟ್ಸ್ ಒಪ್ಪಂದದ ಪರಿಣಾಮಗಳು:**

✷ ವಿದೇಶಿ ವಿಶ್ವವಿದ್ಯಾನಿಲಯಗಳು ಇಲ್ಲಿ ವಿ.ವಿ.ಗಳು ಮತ್ತು ಕಾಲೇಜುಗಳನ್ನು ಸ್ಥಾಪಿಸಿ ಅಪಾರ ಪ್ರಮಾಣದಲ್ಲಿ ಲಾಭ ಪಡೆಯಲು ಯತ್ನಿಸುತ್ತವೆ. ಇದಕ್ಕೆ ಸ್ಪರ್ಧೆ ಒಡ್ಡಲು ದೇಶೀಯ ವಿ.ವಿ.ಗಳು ಸಹ ಗುಣಮಟ್ಟ ಎತ್ತರಿಸುವ ನೆಪದಲ್ಲಿ ಶುಲ್ಕ ಹೆಚ್ಚಿಸುತ್ತವೆ. ಇದರಿಂದ ಉಳ್ಳವರಷ್ಟೇ ಉನ್ನತ ಶಿಕ್ಷಣ ಪಡೆಯಲು ಸಾಧ್ಯವಿದ್ದು, ಸಾಮಾನ್ಯರಿಗೆ ಉನ್ನತ ಶಿಕ್ಷಣ ಮರೀಚಿಕೆಯಾಗುತ್ತದೆ.

✷ ಗ್ಯಾಟ್ಸ್ ಯುಗದಲ್ಲಿ ಮೆರಿಟ್ ಮತ್ತು ಸಾಮಾಜಿಕ ನ್ಯಾಯ ಎರಡಕ್ಕೂ ಪೆಟ್ಟು ಬೀಳುತ್ತದೆ. ಮೀಸಲಾತಿ ಎಂಬುದಕ್ಕೆ ಯಾವುದೇ ಬೆಲೆಯಿಲ್ಲದೆ ಸರ್ಕಾರಿ ಕಾಗದವಾಗುತ್ತದೆ.

✷ ಉನ್ನತ ಶಿಕ್ಷಣ ರಂಗವನ್ನು ನಿಯಂತ್ರಿಸಲು ಕೆಲಮಟ್ಟಿನ ಅಧಿಕಾರ ಹೊಂದಿರುವ ಹಲವಾರು ಸ್ವಾಯತ್ತ ಸಂಸ್ಥೆಗಳು ನಮ್ಮ ದೇಶದಲ್ಲಿವೆ. ಅವುಗಳಲ್ಲಿ ಪ್ರಮುಖವೆಂದರೆ ಯುಜಿಸಿ, ಎಐಸಿಟಿಇ, ಎನ್‌ಸಿಟಿಇ, ಬಿಸಿಐ ಹಾಗೂ ಉನ್ನತ ಶಿಕ್ಷಣ ಸಂಶೋಧನೆಯ ರಾಷ್ಟ್ರೀಯ ಆಯೋಗ (ಎನ್‌ಸಿಎಚ್‌ಇಆರ್) ಪ್ರಾಧಿಕಾರಗಳು. ಗ್ಯಾಟ್ಸ್ ಒಪ್ಪಂದಕ್ಕೆ ಸಹಿ ಹಾಕಿದ ನಂತರ ಇಂತಹ ಸ್ವಾಯತ್ತ ಪ್ರಾಧಿಕಾರಗಳನ್ನು ರದ್ದುಪಡಿಸಲಾಗುತ್ತದೆ.

✷ ಅಲ್ಲದೇ ಕೇಂದ್ರ ಮತ್ತು ರಾಜ್ಯಗಳ ಸಂಸತ್ತು / ವಿಧಾನಸಭೆಗಳ ಪ್ರಾತಿನಿಧ್ಯ, ಹೊಣೆಗಾರಿಕೆ ಮತ್ತು ಉತ್ತರದಾಯಿತ್ವಗಳು ಇನ್ನಿಲ್ಲವಾಗುತ್ತವೆ. ಇವುಗಳ ಜಾಗದಲ್ಲಿ ವಿಶ್ವ ವಾಣಿಜ್ಯ ಸಂಸ್ಥೆ ವಾಣಿಜ್ಯ ನೀತಿ ಸಮೀಕ್ಷಾ ವ್ಯವಸ್ಥೆಯು (ಟಿಪಿಆರ್‌ಎಮ್) ರೂಪಿಸುವ ನಿಯಮಗಳನ್ನು ಚಾಚೂತಪ್ಪದೆ ಜಾರಿಗೆ ತರಬೇಕಾಗುತ್ತದೆ. ಉದಾಹರಣೆಗೆ ಯುಜಿಸಿ ನಿಯಮಾವಳಿ ಬದಲಿಗೆ ಟಿಪಿಆರ್‌ಎಮ್ ರೂಪಿಸುವ ಮಾರುಕಟ್ಟೆಗೆ ಪೂರಕವಾದ ನಿಯಮಗಳನ್ನೇ ಜಾರಿಗೊಳಿಸಬೇಕಾಗುತ್ತದೆ.

✷ ಶಿಕ್ಷಣ ವ್ಯವಸ್ಥೆಗೇ ಪೆಟ್ಟು: ಅರ್ಹ ಶಿಕ್ಷಕರು ಅವಶ್ಯವೆಂದು ವಿದೇಶೀ ಶಿಕ್ಷಣ ಸಂಸ್ಥೆಗಳು ವಿದೇಶದಿಂದ ಇಲ್ಲಿಗೆ ಬೋಧಕರನ್ನು ಕರೆತರಲು ಅವಕಾಶ ವಾಗುತ್ತದೆ. ಇದರಿಂದ ಒಂದೆಡೆ ಇಲ್ಲಿಯೇ ದೊರೆಯುವ ಬೋಧಕರನ್ನು ಇನ್ನಷ್ಟು ಸಜ್ಜುಗೊಳಿಸಿ ಬಳಸಿಕೊಳ್ಳದೇ ದೊಡ್ಡ ಸಂಖ್ಯೆಯ ಮಾನವ ಸಂಪನ್ಮೂಲ ಬಳಕೆಯಾಗದೇ ವ್ಯಯವಾಗುತ್ತದೆ.

✷ ಗ್ಯಾಟ್ಸ್ ಒಡಂಬಡಿಕೆಯಿಂದ ಇಡೀ ಶಿಕ್ಷಣ ವ್ಯವಸ್ಥೆಯೇ ಮಾರುಕಟ್ಟೆ ಪೂರಕ ರೂಪ ಪಡೆಯುತ್ತದೆ. ಶಿಕ್ಷಣದ ಹಕ್ಕಿಗೆ ಅವಕಾಶವೇ ಇರುವುದಿಲ್ಲ. ಪಠ್ಯಕ್ರಮ, ಸಾಮಾಜಿಕ ಜವಾಬ್ದಾರಿ, ಇತ್ಯಾದಿಗಳೆಲ್ಲವೂ ರಾಷ್ಟ್ರೀಯ ಶಿಕ್ಷಣ ನೀತಿಯ ಚೌಕಟ್ಟಿನಿಂದ ಹೊರದೂಡಲ್ಪಟ್ಟು ವಿದೇಶಿ ಸಂಸ್ಥೆಗಳ ಕೈಯಲ್ಲಿ ಬಂಧಿಯಾಗುತ್ತವೆ.

✷ ಬಲಿಷ್ಠ ದೇಶಗಳ ವಿ.ವಿ.ಗಳು ಮತ್ತು ಅಧ್ಯಾಪಕರು ಮಾರುಕಟ್ಟೆಯಲ್ಲಿ ಮೇಲುಗೈ ಸಾಧಿಸುವ ಮೂಲಕ ದೇಶೀಯ ವಿ.ವಿ.ಗಳು ಮತ್ತು ಅಧ್ಯಾಪಕರು ಸೋತು ಉನ್ನತ ಶಿಕ್ಷಣ ಬಹುಸಂಖ್ಯಾತರಿಗೆ ಕೇವಲ ಕನಸಾಗುತ್ತದಷ್ಟೇ.

ಕೇಂದ್ರ ಸರ್ಕಾರವು ಈಗಾಗಲೇ ಶಿಕ್ಷಣಕ್ಕಾಗಿ ಮೀಸಲಿಡಲಾದ ಆಯವ್ಯಯದಲ್ಲಿ ಈ ವರ್ಷ ರೂ. ೪೦೦೦ ಕೋಟಿಯನ್ನು ಕಡಿತ ಮಾಡಿದೆ. ಅಲ್ಲದೇ, ಈ ವರ್ಷದ ಕೊನೆಯ ಹೊತ್ತಿಗೆ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ರೂಪಿಸಲು ಕಸರತ್ತು ಮಾಡುತ್ತಿದೆ. ಇದಕ್ಕಾಗಿ ದೇಶಾದ್ಯಂತ ಗ್ರಾಮ ಪಂಚಾಯಿತಿ ಮಟ್ಟದಿಂದ ರಾಷ್ಟ್ರಮಟ್ಟದವರೆಗೆ ಚರ್ಚೆ ಸಂವಾದಗಳನ್ನು ನಡೆಸುತ್ತಿದೆಯಾದರೂ ಇದು ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸುವ ನಿಟ್ಟಿನಲ್ಲಿ ನಡೆಯುತ್ತಿಲ್ಲ. ಸರ್ಕಾರವು ಶಿಕ್ಷಣವನ್ನು ಮಾರುಕಟ್ಟೆ ಶಕ್ತಿಗಳ ಕೈಗೊಪ್ಪಿಸುವ ನಿಟ್ಟಿನಲ್ಲಿ ಹಾಗೂ ಕೇಸರೀಕರಣಗೊಳಿಸುವ ಹಾದಿಯಲ್ಲಿಯೇ ಹೆಚ್ಚೆಚ್ಚು ಕ್ರಿಯಾಶೀಲವಾಗಿರುವುದು ಆತಂಕಪಡುವ ವಿಚಾರ.

ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂಬಂಧಗಳ ಆಧಾರದಲ್ಲಿ ದೇಶಗಳ ನಡುವೆ ಜ್ಞಾನ ವಿನಿಮಯ ಮತ್ತು ಜ್ಞಾನ ಹರಡಲು ವಿದೇಶಿ ವಿಶ್ವವಿದ್ಯಾಲಯಗಳು ಭಾರತಕ್ಕೆ ಬರುವುದನ್ನು ನಾವು ತಾತ್ವಿಕವಾಗಿ ವಿರೋಧಿಸಬೇಕಿಲ್ಲ. ಮಾನವಾಭಿವೃದ್ಧಿಗಾಗಿ ಜ್ಞಾನ ಮತ್ತು ಶಿಕ್ಷಣರಂಗದಲ್ಲಿ ಉತ್ತಮ ಸಹಕಾರ ದೇಶಗಳ ನಡುವೆ ಅವಶ್ಯವಿದೆ. ಆದರೆ, ಡಬ್ಲ್ಯುಟಿಒ ಒಪ್ಪಂದಗಳ ಅಡಿಯಲ್ಲಿ ವಿದೇಶಿ ವಿಶ್ವವಿದ್ಯಾಲಯಗಳು ಕೇವಲ ಲಾಭ ಮಾಡುವ ಉದ್ದೇಶದಿಂದ ಮಾತ್ರವೇ ಬರುತ್ತಿವೆ. ಇದು ಭಾರತದ ಉನ್ನತ ಶಿಕ್ಷಣವನ್ನು ಮತ್ತಷ್ಟು ಬಿಕ್ಕಟ್ಟಿಗೆ ತಳ್ಳುತ್ತದೆ. ಉನ್ನತ ಶಿಕ್ಷಣಕ್ಕಾಗಿ ಸಾರ್ವಜನಿಕ ವೆಚ್ಚ ಮಾಡುತ್ತಿರುವ ದೇಶಗಳ ಪಟ್ಟಿಯಲ್ಲಿ ಭಾರತದ ಸ್ಥಾನ ಹಲವಾರು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗಿಂತ ಕೆಳಮಟ್ಟದಲ್ಲಿದೆ. ಭಾರತವು ಪ್ರತಿ ವಿದ್ಯಾರ್ಥಿಗೆ ರೂ. ೨೮,೪೨೦ನ್ನು ವೆಚ್ಚ ಮಾಡಿದರೆ, ಮಲೇಷಿಯಾ (ರೂ. ೮,೨೫,೩೦೦) ಬ್ರೆಜಿಲ್ (ರೂ. ೨,೭೯,೦೨೦), ಇಂಡೋನೇಷಿಯಾ (ರೂ. ೪೬,೬೨೦) ಮತ್ತು ಫಿಲಿಪೈನ್ಸ್ (ರೂ. ೪೫,೭೫೦) ವೆಚ್ಚ ಮಾಡುತ್ತಿವೆ. ನಮ್ಮ ಉನ್ನತ ಶಿಕ್ಷಣ ವ್ಯವಸ್ಥೆಯು ಹೆಚ್ಚು ವ್ಯಾಪಾರೀಕರಣಗೊಂಡಿದೆ. ಸಿಐಐ-ಡೆಲಾಯಟ್ ಎಐಸಿಹೆಚ್‌ಇ ೨೦೧೫ರ ವರದಿ ಪ್ರಕಾರ, ದೇಶದ ಶೇ. ೬೪ರಷ್ಟು ಉನ್ನತ ಶಿಕ್ಷಣ ಸಂಸ್ಥೆಗಳು ಖಾಸಗಿಯವು. ಈ ಹಿನ್ನೆಲೆಯಲ್ಲಿ ಬಹುರಾಷ್ಟ್ರೀಯ ಕಂಪನಿಗಳನ್ನು ಓಲೈಸಲು ಜನ-ವಿರೋಧಿ ಅಜೆಂಡಾವನ್ನು ನೈರೋಬಿಯಲ್ಲಿ ಅಪ್ಪಿಕೊಂಡಲ್ಲಿ ಭಾರತದ ಉನ್ನತ ಶಿಕ್ಷಣ ವ್ಯವಸ್ಥೆಗೆ ಭಾರಿ ಅಪಾಯ ಬಂದೆರಗಲಿದೆ.

ಈ ಹಿನ್ನೆಲೆಯಲ್ಲಿ, ಶಿಕ್ಷಣ ವ್ಯವಸ್ಥೆಯನ್ನು ಸಮಾನ ಶಿಕ್ಷಣ, ಸರ್ವರಿಗೂ ಶಿಕ್ಷಣ, ಸಮಾನ ಶಾಲಾ ವ್ಯವಸ್ಥೆ ಇತ್ಯಾದಿ ಜನಪರ ನೆಲೆಯಲ್ಲಿ ರೂಪಿಸ ಬಯಸುವ ಸಂವಿಧಾನದ ಆಶಯಗಳನ್ನು ಬಲಿಕೊಡಹೊರಟಿರುವ ಗ್ಯಾಟ್ಸ್ ಒಪ್ಪಂದಕ್ಕೆ ಭಾರತ ಸರ್ಕಾರ ಸಹಿ ಹಾಕದಂತೆ ಶಿಕ್ಷಣದ ಹಕ್ಕಿನ ಚಳುವಳಿಯಲ್ಲಿ ತೊಡಗಿರುವ ಎಲ್ಲರೂ, ವಿದ್ಯಾರ್ಥಿ ಚಳುವಳಿ ಮತ್ತು ಜನಪರ ಸಂಘಟನೆಗಳು ಬಲಿಷ್ಠ ಚಳುವಳಿ ಮೂಲಕ ಭಾರತ ಸರ್ಕಾರವನ್ನು ತಡೆಯಬೇಕಿದೆ.


**ಎಚ್. ಎಸ್. ಜೈಕುಮಾರ್**

ಭಾರತ ಜ್ಞಾನ-ವಿಜ್ಞಾನ ಸಮಿತಿ, ಭಾರತೀಯ ವಿಜ್ಞಾನ ಮಂದಿರದ ಆವರಣ, ಬೆಂಗಳೂರು - ೫೬೦ ೦೧೨

# ಕ್ಷ - ಕಿರಣ

- ಸಾನ್ವಿ ಪಿ.







ಇರಾನ್_ ದಿಗ್ಬಂಧನ ರದ್ದು

ವಿಶ್ವಸಂಸ್ಥೆ

ಇರಾನ್ ದೇಶಕ್ಕೆ ಇಷ್ಟುದ್ದದ ಸ್ವಾತಂತ್ರ್ಯ ಕೊಟ್ಟಿದ್ದೇನೆ




ಸಂದರ್ಶಕರು
ಡಾ॥ ಬಿ. ಎಸ್. ಶೈಲಜಾ
ಪ್ರೊ॥ ಸಂಪಿಗೆ ತೋಂಟದಾರ್ಯ
ಡಾ॥ ಸಿದ್ದನಗೌಡ ಪಾಟೀಲ
ಶ್ರೀ ಎ. ಆರ್. ಉಡುಪ



## ಪದ್ಮಶ್ರೀ ಎ. ಎಸ್. ಕಿರಣಕುಮಾರ

# ನಮ್ಮ ನೆಲದ ಹೆಮ್ಮೆಯ ವಿಜ್ಞಾನಿ

ಭಾರತೀಯ ಅಂತರಿಕ್ಷ ಸಂಶೋಧನಾ ಸಂಸ್ಥೆ 'ಇಸ್ರೋ' ಇಂದು ವಿಶ್ವದ ಗಮನಸೆಳೆವ ಮಹತ್ವದ ಸಾಧನೆಗಳನ್ನು ಮಾಡಿದೆ. ಇಂಥ ಜಾಗತಿಕ ಮನ್ನಣೆ ಪಡೆದ ಇಸ್ರೋದ ಇಂದಿನ ಅಧ್ಯಕ್ಷರು ನಮ್ಮವರೇ, ಅಂದರೆ ಕನ್ನಡಿಗರಾದ ಶ್ರೀ ಎ. ಎಸ್. ಕಿರಣಕುಮಾರ ಅವರು. ಭಾರತ ಸರಕಾರದ ಅಂತರಿಕ್ಷ ಇಲಾಖೆಯ ಕಾರ್ಯದರ್ಶಿ, ಅಂತರಿಕ್ಷ ಆಯೋಗದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀಯುತರು ಹಾಸನ ಜಿಲ್ಲೆಯ ಆಲೂರಿನಲ್ಲಿ ೧೯೫೨ರ ಅಕ್ಟೋಬರ್ ೨೨ರಂದು ಜನಿಸಿ ತಮ್ಮ ಪ್ರಾಥಮಿಕ, ಮಾಧ್ಯಮಿಕ ಶಾಲಾ ಶಿಕ್ಷಣವನ್ನು ಹಾಸನದ ಸರಕಾರಿ, ಕನ್ನಡ ಮಾಧ್ಯಮ ಶಾಲೆಗಳಲ್ಲಿಯೇ ಪೂರೈಸಿದವರು. ಇಂಥ ಅಪ್ಪಟ ಕನ್ನಡದ ಪ್ರತಿಭೆ ಇಂದು ವಿಶ್ವದ ಮಹತ್ವದ ಅಂತರಿಕ್ಷ ಕ್ಷೇತ್ರದ ಸಂಸ್ಥೆಗಳಲ್ಲೊಂದಾದ ಇಸ್ರೋದ ನಾಯಕತ್ವ ವಹಿಸಿ ಮಹತ್ತರ ಸಾಧನೆಗೈಯ್ಯುತ್ತಿದ್ದಾರೆ.

೧೯೭೫ರಿಂದ ಆರಂಭವಾದ ತಮ್ಮ ವೈಜ್ಞಾನಿಕ ವೃತ್ತಿಜೀವನದಲ್ಲಿ ಶ್ರೀ ಕಿರಣಕುಮಾರ ಅವರು ಸುಮಾರು ೫೦ಕ್ಕೂ ಹೆಚ್ಚು ಎಲೆಕ್ಟ್ರಾನಿಕ್ ಕ್ಯಾಮರಾ ಹಾಗೂ ಇತರ ದೃಕ್ - ವಿದ್ಯುತ್ ಸಂವೇದಕಗಳ ಅಭಿವೃದ್ಧಿಗೆ ಅಪಾರವಾದ ಕೊಡುಗೆ ನೀಡಿದ್ದಾರೆ. ಅವುಗಳು ಭಾಸ್ಕರ ಉಪಗ್ರಹ ಸರಣಿ ಆದಿಯಾಗಿ ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅನೇಕ ಉಪಗ್ರಹಗಳಲ್ಲಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿವೆ. ಭಾರತದ ಮೊದಲ ನೌಕೆಯಾದ ಚಂದ್ರಯಾನ-೧ ಕಾರ್ಯಕ್ರಮಕ್ಕೆ ಹಾಗೂ ಇತ್ತೀಚೆಗೆ ಅಪಾರ ಯಶಸ್ಸು ಕಂಡಿರುವ ಮಂಗಳ ಕಕ್ಷಾ ಅಭಿಯಾನಕ್ಕೆ ಕಿರಣಕುಮಾರ ಅವರ ಕೊಡುಗೆ ಮಹತ್ವದ್ದಾಗಿದೆ. ಇಸ್ರೋ ಸಂಸ್ಥೆ ಕೇವಲ ಉಪಗ್ರಹಗಳ ಉಡಾವಣೆಯ ಕಾರ್ಯ ನಿರ್ವಹಿಸುತ್ತದೆ ಎಂಬ ಭಾವನೆ ಸಾರ್ವಜನಿಕರಲ್ಲಿದೆ. ಆದರೆ ಇಸ್ರೋದ ಉಪಗ್ರಹಗಳು ಇಂದು ಸಾಮಾನ್ಯ ಜನರ ಬದುಕಿಗೆ ಹೇಗೆ ಪೂರಕವಾಗಿವೆ ಎನ್ನುವುದನ್ನು ಕಿರಣಕುಮಾರ ಅವರು ಮನದಟ್ಟು ಮಾಡುತ್ತಾರೆ. ಇಸ್ರೋ ಉಡಾವಣೆ ಮಾಡಿದ ಉಪಗ್ರಹ ಗಳಿಂದ ಭೂಮಿಯ ಮೇಲ್ಮೈ, ಭೂಮಿಯಾಳದ ನೀರು, ಅರಣ್ಯ, ವಾತಾವರಣ ವಿಶ್ಲೇಷಣೆ, ಪ್ರವಾಹ ಮುನ್ಸೂಚನೆ, ಹವಾಮಾನ ವಿವರಣೆ ಮಾತ್ರವಲ್ಲ ದೂರಸಂವಹನ ಹೀಗೆ ಎಲ್ಲ ಕ್ಷೇತ್ರಗಳಿಗೂ ಸಂಬಂಧಿಸಿದ ನಿರ್ವಹಣೆ ಮತ್ತು ಮಾಹಿತಿಯನ್ನು ಈಗ ಪಡೆಯಲಾಗುತ್ತಿದೆ. ಸರಕಾರದ ಸುಮಾರು ೫೦ ಇಲಾಖೆಗಳು ಇಸ್ರೋದ ನೆರವು ಪಡೆಯುತ್ತಿವೆ. ಸಾರ್ವಜನಿಕರು ತಮಗರಿಯದೇ ಇಸ್ರೋ ಸಂಸ್ಥೆಯ ಸಂಶೋಧನೆ ಮತ್ತು ಕಾರ್ಯಕ್ರಮಗಳ ಫಲಾನುಭವಿ ಗಳಾಗಿದ್ದಾರೆ. ರೈತ ಒಂದು ಕೊಳವೆ ಭಾವಿ ಹಾಕಬೇಕಾದರೂ ಭೂಮಿಯ ಎಷ್ಟು ಆಳದಲ್ಲಿ ಎಷ್ಟು ನೀರಿದೆ ಎಂಬುದನ್ನು ನಿಖರವಾಗಿ ಹೇಳುವಷ್ಟು , ಸಮುದ್ರದ ಯಾವ ಭಾಗದಲ್ಲಿ ಎಷ್ಟು ನೀರಿದೆ, ಎಲ್ಲಿ ಎಷ್ಟು ಪ್ರಮಾಣದಲ್ಲಿ ಮೀನು ಸಿಗುತ್ತದೆ ಎಂಬ ಮಾಹಿತಿ ಕೊಡುವಷ್ಟು ತಂತ್ರಜ್ಞಾನವನ್ನು ಇಸ್ರೋ ಅಭಿವೃದ್ಧಿಪಡಿಸಿದೆ. ಅರಣ್ಯದ ಸ್ಥಿತಿಗತಿ, ರಸ್ತೆ ನಿರ್ಮಾಣ ಮಾತ್ರವಲ್ಲ ಕೃಷಿ ಅಭಿವೃದ್ಧಿಗೆ ಈ ತಂತ್ರಜ್ಞಾನವನ್ನು ಬಳಸಬಹುದು, ಭೂಮಿಯ ಅಂಗುಲ ಅಂಗುಲ ಮಾಹಿತಿಯನ್ನು ನಾವು ಕೊಡುತ್ತೇವೆ ಎಂದು ಹೆಮ್ಮೆಯಿಂದ ಹೇಳುತ್ತಾರೆ ಶ್ರೀ ಕಿರಣಕುಮಾರ. ಸರಕಾರಗಳು, ಸಾರ್ವಜನಿಕರು, ಸಂಘ ಸಂಸ್ಥೆಗಳು, ಇಸ್ರೋ ವಿಜ್ಞಾನಿಗಳ ಸಂಶೋಧನೆ, ಪರಿಶ್ರಮದ ಫಲವನ್ನು ಪಡೆಯಬೇಕೆಂಬ ಕಳಕಳಿ ಹೊಂದಿದ್ದಾರೆ. ಈಗಾಗಲೇ ಇಸ್ರೋ ಭಾರತ ಮಾತ್ರವಲ್ಲ ಹಲವಾರು ದೇಶಗಳಿಗೆ ಸೂಕ್ತ ಮಾಹಿತಿಗಳನ್ನು ಒದಗಿಸುವ ಮೂಲಕ ಪ್ರಮುಖ ಸಂಸ್ಥೆಯಾಗಿ ಬೆಳೆದಿದೆ ಎಂದು ಹೆಮ್ಮೆಯಿಂದ ಹೇಳುತ್ತಾರೆ. ಸರಳ, ಸೌಮ್ಯ ಸ್ವಭಾವದ ನಮ್ಮ ದೇಶದ ಹೆಮ್ಮೆಯ ವಿಜ್ಞಾನಿಗಳಲ್ಲೊಬ್ಬರಾದ ಶ್ರೀ ಕಿರಣಕುಮಾರ ಅವರ ಸಂದರ್ಶನವನ್ನು 'ಹೊಸತು' ಓದುಗರಿಗಾಗಿ ಡಾ॥ ಬಿ. ಎಸ್. ಶೈಲಜಾ, ಪ್ರೊ ॥ ಸಂಪಿಗೆ ತೋಂಟದಾರ್ಯ, ಡಾ॥ ಸಿದ್ದನಗೌಡ ಪಾಟೀಲ, ಶ್ರೀ ಎ. ಆರ್. ಉಡುಪ ನಡೆಸಿಕೊಟ್ಟಿದ್ದಾರೆ.



***ಎಡದಿಂದ ಡಾ॥ ಸಿದ್ದನಗೌಡ ಪಾಟೀಲ, ಡಾ॥ ಶೈಲಜಾ, ಡಾ॥ ಕಿರಣಕುಮಾರ, ಡಾ॥ ತೋಂಟದಾರ್ಯ ಮತ್ತು ಶ್ರೀ ಎ. ಆರ್. ಉಡುಪ***

**ಹೊಸತು :** ಸರ್, ನಮಗೆ ತುಂಬ ಅಭಿಮಾನದ ವಿಷಯ : ನೀವು ಕರ್ನಾಟಕದ ಗ್ರಾಮೀಣ ಭಾಗದಿಂದ ಬಂದವರು. ಇಸ್ರೋದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡು, ಅನೇಕ ಅಸಾಧಾರಣ ಯೋಜನೆಗಳಲ್ಲಿ ತೊಡಗಿದ್ದೀರಿ. ಇವುಗಳಲ್ಲಿ ಯಶಸ್ವಿಯಾಗುತ್ತಿದ್ದೀರಿ. ನಿಮಗೆ 'ಹೊಸತು' ಬಳಗದ ಪರವಾಗಿ ಅಭಿನಂದನೆಗಳು.

ಸರ್, ನಮ್ಮ ಮೊದಲ ಪ್ರಶ್ನೆ ನಿಮ್ಮ ಬಾಲ್ಯ ಹಾಗೂ ಪ್ರಾಥಮಿಕ ವಿದ್ಯಾಭ್ಯಾಸದ ಕುರಿತು ಹೇಳಿ. ನೀವು ಪ್ರಾಥಮಿಕ ವಿದ್ಯಾಭ್ಯಾಸವನ್ನು ಯಾವ ಮಾಧ್ಯಮದಲ್ಲಿ ಓದಿದ್ದೀರಿ ?

**ಕಿರಣ ಕುಮಾರ :** ನನ್ನ ಬಾಲ್ಯದ ದಿನಗಳನ್ನು ನಾನು ಹಾಸನ ಮತ್ತು ಗ್ರಾಮೀಣ ಪ್ರದೇಶದಲ್ಲಿ ಕಳೆದಿದ್ದೇನೆ. ಹಾಸನದಲ್ಲಿಯೇ ಶಿಶುವಿಹಾರ, ಸರಕಾರಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿಯೇ ಓದಿದ್ದೇನೆ. ಹೈಸ್ಕೂಲ್ ಮತ್ತು ಪದವಿಪೂರ್ವ ವಿದ್ಯಾಭ್ಯಾಸವನ್ನೂ ಹಾಸನದಲ್ಲಿಯೇ ಮಾಡಿ, ಬಿ.ಎಸ್ಸಿ. (ಆನರ್ಸ್) ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿನ ನ್ಯಾಶನಲ್ ಕಾಲೇಜಿಗೆ ಸೇರಿದೆ. ನಂತರ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಎಂ.ಎಸ್ಸಿ. ಹಾಗೂ ಭಾರತೀಯ ವಿಜ್ಞಾನ ಮಂದಿರದಲ್ಲಿ ಎಂ.ಟೆಕ್. ಓದಿದೆ.

**ಹೊ. :** ನೀವು ಇಸ್ರೋನ ಆಯ್ಕೆ ಮಾಡಿಕೊಂಡದ್ದು ಹೇಗೆ ?

**ಕಿರಣ :** ನಾನು ಬೆಂಗಳೂರಿನ ತಾತಾ ಸಂಸ್ಥೆಯಲ್ಲಿ ಭೌತಿಕ ಎಂಜಿನಿಯರಿಂಗ್ ವಿಷಯದಲ್ಲಿ ಎಂ.ಟೆಕ್. ಮಾಡಿದೆ. ಆಗ ಸ್ಕೂಲ್ ಆಫ್ ಆಟೋಮೇಶನ್‌ನಲ್ಲಿ ಪ್ರೊ॥ ದೀಕ್ಷಿತ್ ಅವರ ಮಾರ್ಗದರ್ಶನದಲ್ಲಿ ಪಿಕ್ಚರ್ ಪ್ರೊಸ್ಸೆಸಿಂಗ್ ಎಂಬ ಪ್ರಾಜೆಕ್ಟ್ ಮಾಡ್ದೆ. ಪಿಕ್ಚರ್ ಪ್ರೊಸ್ಸೆಸಿಂಗ್‌ನಲ್ಲಿ ಏನ್ಮಾಡ್ತೀವಿ ಅಂದ್ರೆ ಫಿಲ್ಮ್‌ನ ಸ್ಕ್ಯಾನ್ ಮಾಡಿ ಅದನ್ನು ಎಲೆಕ್ಟ್ರಿಕಲ್ ಸಿಗ್ನಲ್‌ಗೆ ಪರಿವರ್ತಿಸಿ, ಅದನ್ನು ಡಿಜಿಟಲ್‌ಗೆ ಪರಿವರ್ತಿಸಿ ಅದರಲ್ಲಿ ಪ್ರೊಸಸ್ ಮಾಡಿ ಮತ್ತೆ ಇನ್ನೊಂದು ಫಿಲ್ಮ್‌ಗೆ ಅದನ್ನು ಬರಿಯೋದು. ಎಲ್ಲಿ ಇಮೇಜ್ ಚೆನ್ನಾಗಿ ಕಾಣ್ದೆ ಇರುತ್ತೋ ಅಲ್ಲಿ ಕಾಂಟ್ರಾಸ್ಟ್ ಇಂಪ್ರೂವ್ ಮಾಡಿ ಚೆನ್ನಾಗಿ ಕಾಣ್ಸೋ ಹಾಗೆ ಮಾಡಬೇಕು. ಆ ಥರಾ ಒಂದು ಪ್ರಾಜೆಕ್ಟ್ ಮಾಡಿದ್ವಿ. ಆಗ ನಾನಿನ್ನೂ ಕೋರ್ಸ್ ಮಾಡ್ತಾ ಇರುವಾಗ್ಲೇನೇ ಇಸ್ರೋದಿಂದ ಒಂದು ಅಡ್ವರ್‌ಟೈಸ್‌ಮೆಂಟ್ ಬಂತು. ಅದು ಸ್ಪೇಸ್ ಅಪ್ಲಿಕೇಶನ್ ಸೆಂಟರ್ ಅಹಮದಾಬಾದ್‌ನಲ್ಲಿ ರಿಸರ್ಚ್ ಅಸೋಸಿಯೇಟ್‌ಗೆ ಜಾಗ ಖಾಲಿ ಇದೆ ಅಂತ. ನಾನು ಅಪ್ಲೈ ಮಾಡ್ದೆ, ಸಂದರ್ಶನ ಆಯ್ತು. ಆಮೇಲೆ ಆಯ್ಕೆ ಆಗಿರುವ ಬಗ್ಗೆ ಪತ್ರ ಬಂತು. ೧೯೭೫ರಲ್ಲಿ ಎಂ.ಟೆಕ್. ಮುಗಿಸಿ ಅಹಮದಾಬಾದ್‌ನ ಇಸ್ರೋದ ಸ್ಪೇಸ್ ಅಪ್ಲಿಕೇಶನ್ ಸೆಂಟರ್ ಸೇರಿದೆ. ಅಲ್ಲಿ ಮೊದಲನೇ ಪ್ರಾಜೆಕ್ಟ್‌ನಲ್ಲೇ ರಿಮೋಟ್ ಸೆನ್ಸಿಂಗ್ ಸೆಟ್‌ಲೈಟ್ ದೂರಸಂವೇದಿ ಉಪಗ್ರಹದಲ್ಲಿ ಕ್ಯಾಮರಾ ಸಿಸ್ಟಮ್ ಅಭಿವೃದ್ಧಿ ಮಾಡೋದಕ್ಕೆ ಅವಕಾಶ ಸಿಕ್ತು. ಇದು ಒಂದು ಅಂತರ್‌ಶಿಸ್ತೀಯ ಅಂದ್ರೆ ಇಂಟರ್‌ಡಿಸಿಪ್ಲೇನರಿ ಪ್ರಾಜೆಕ್ಟ್ ಆಗಿತ್ತು. ಇಸ್ರೋನಲ್ಲಿ ಮೊದಲಿನಿಂದಲೂ ಇಂಟರ್‌ಡಿಸಿಪ್ಲೇನರಿ ಚಟುವಟಿಕೆ ತುಂಬ ಜಾಸ್ತಿ. ಇದರಿಂದಾಗಿ ನನ್ನ ಭೌತಶಾಸ್ತ್ರದ ಹಿನ್ನೆಲೆ ಮತ್ತು ಭೌತಿಕ ಇಂಜಿನಿಯರಿಂಗ್ ಹಿನ್ನೆಲೆ ತುಂಬ ಸಹಾಯಕ್ಕೆ ಬಂದವು. ಇದರಿಂದಾಗಿ ವಿಜ್ಞಾನಿಗಳು ಹಾಗೂ ಇಂಜಿನಿಯರ್‌ಗಳ ಮಧ್ಯೆ ಅಂತರ ಕಡಿಮೆ ಮಾಡಿ ಅಂತರ್‌ಸಂಬಂಧ ಬೆಸೆಯಲು ಸಾಧ್ಯವಾಯಿತು. ಕಟಿಂಗ್ ಎಡ್ಜ್ ಟೆಕ್ನಾಲಜೀಸ್‌ನಲ್ಲಿ ಒಂದೇ ಒಂದು ವಿಷಯದಲ್ಲಿ ಜಾಸ್ತಿ ಪರಿಣತಿ ಹೊಂದಿರುವವರಿಗಿಂತ ಇಂಟರ್‌ಡಿಸಿಪ್ಲೇನರಿ ಜ್ಞಾನ ಇರುವವರಿಗೆ ಜಾಸ್ತಿ ಅವಕಾಶ ಇರುತ್ತೆ. ಅದರಿಂದಾಗಿ ಇಸ್ರೋನಲ್ಲಿ ಕೆಲಸ ಸಿಕ್ಕಾದ್ಮೇಲೆ ಮೇಲ್ ಹಂತಗಳಿಗೆ ಹೋಗಬಹುದು. ಹೆಚ್ಚಿನ ಇನ್‌ಸ್ಟ್ರುಮೆಂಟ್ಸ್‌ನೆಲ್ಲಾ ನಾವೇ ಮಾಡ್ಬೇಕು. ನಾನೀವಾಗ ಸುಮಾರು ಐವತ್ತು ಕ್ಯಾಮೆರಾ ಸಿಸ್ಟಮ್ಸ್ ಡೆವಲಪ್ ಮಾಡಿದ್ದೇನೆ. ಅವೆಲ್ಲ ಅಂತರಿಕ್ಷದಲ್ಲಿ ಚೆನ್ನಾಗಿ ಕೆಲಸ ಮಾಡಿವೆ.

**ಹೊ. :** ನಿಮ್ಮ ಬಹುಪಾಲು ಸರ್ವಿಸ್ ಎಲ್ಲ ಅಹಮದಾಬಾದ್‌ನಲ್ಲೇ ಆಯ್ತಾ ?

**ಕಿರಣ್ :** ಹೌದು. ಇಸ್ರೋದಲ್ಲಿ ಬೇರೆ ಬೇರೆ ಕಡೆ ವಿವಿಧ ಸೆಂಟರ್‌ಗಳಿವೆ. ನಾನು ಅಹಮದಾಬಾದ್‌ನ ಸ್ಪೇಸ್ ಅಪ್ಲಿಕೇಶನ್ ಸೆಂಟರ್‌ನಲ್ಲಿ ನಲವತ್ತು ವರ್ಷ ಕೆಲಸ ಮಾಡಿದೆ. ರಿಸರ್ಚ್ ಅಸೋಸಿಯೇಟಾಗಿ ಸೇರಿ ಡೈರೆಕ್ಟರ್ ಹುದ್ದೆಗೆ ಬರೋವರ್ಗೂ ಅಲ್ಲಿಯೇ ಕೆಲಸ ಮಾಡಿದೆ.

**ಹೊ. :** ಇಂದು ಇಸ್ರೋ ಸಂಸ್ಥೆ ಅಂತರರಾಷ್ಟ್ರೀಯ ವಲಯದಲ್ಲಿ ಒಳ್ಳೆ ಹೆಸರು ಮಾಡಿದೆ. ಇಸ್ರೋ ಕಾರ್ಯಗಳಿಗೆ ಮುಖ್ಯವಾಗಿ ಬೇಕಾಗಿರೋದು ಅಂದ್ರೆ ಅತ್ಯಾಧುನಿಕ ಉಪಕರಣಗಳು. ನಲವತ್ತು ವರ್ಷಗಳಿಂದ ಇಂಥ ಉಪಕರಣಗಳನ್ನು ತಯಾರಿಸುವ ಸವಾಲನ್ನು ನೀವು ಹೇಗೆ ಎದುರಿಸಿದಿರಿ ? ಹೇಗೆ ನೀವು ಅಂತರರಾಷ್ಟ್ರೀಯ ಮಟ್ಟದಲ್ಲಿ ಬೆಳಿಯೋಕೆ ಸಾಧ್ಯವಾಯಿತು ?

**ಕಿರಣ :** ಮುಖ್ಯವಾದದ್ದು ಅಂದ್ರೆ ಒಂದು ನಿರ್ದಿಷ್ಟವಾದ ಸಮಸ್ಯೆಗೆ ಪರಿಹಾರ ಕಂಡುಹಿಡಿಯೋದು. ಇದನ್ನು ಮಾಡುವಾಗ ನಮ್ಮಲ್ಲಿ ಯಾವ್ಯಾವ ಉಪಕರಣಗಳು ಲಭ್ಯ ಇವೆ ಅವನ್ನು ಉಪಯೋಗಿಸೋದು. ಯಾವುವು ಲಭ್ಯವಿಲ್ಲವೋ ಅವುಗಳನ್ನು ಸ್ಥಳೀಯವಾಗಿ ಅಭಿವೃದ್ಧಿಪಡಿಸಬೇಕಾಗುತ್ತದೆ. ಈ ಕೆಲಸ ಸಮಯ ಮಿತಿಯಲ್ಲಿಯೇ, ಕಡಿಮೆ ಸಮಯದಲ್ಲಿ ಆಗಬೇಕು. ಇಂಥ ಹಲವಾರು ಪ್ರಯೋಗಗಳನ್ನು ನಾವು ಮಾಡಿದೀವಿ. ಉದಾಹರಣೆಗೆ, ವೆರಿ ಹೈ ರೆಸಲ್ಯೂಶನ್ ರೇಡಿಯೋ ಮೀಟರ್ ನಾವೇ ಅಭಿವೃದ್ಧಿಪಡಿಸಿ ಉಪಯೋಗಿಸಿದ್ವಿ. ಇದು ವಾತಾವರಣ ಅಧ್ಯಯನಕ್ಕೆ, ಹವಾಮಾನ ಮುನ್ಸೂಚನೆಯಂಥ ಕಾರ್ಯಗಳಿಗೆ ಉಪಯೋಗ ಆಯ್ತು. ಹಾಗೇ ಒಂದೊಂದು ಸಮಸ್ಯೆ ಉದ್ಭವವಾದಾಗ ತಕ್ಕ ಪರಿಹಾರವನ್ನು ನಾವೇ ಕಂಡುಕೊಳ್ಳಬೇಕಾಗುತ್ತದೆ. ಆ ಕೆಲಸವನ್ನು ಇಸ್ರೋ ಮಾಡುತ್ತದೆ. ದೃಢಸಂಕಲ್ಪ, ಸ್ವಪ್ರಯತ್ನ, ಪರಿಶ್ರಮಗಳಿಂದಾಗಿ ಇಂದು ಅಂತರರಾಷ್ಟ್ರೀಯವಾಗಿ ಖ್ಯಾತಿ ಪಡೆಯಲು ಸಾಧ್ಯವಾಗಿದೆ.




**ಹೊ. :** ಇಸ್ರೋ ಈಗ ವಿಶ್ವದ ಬೇರೆ ಬೇರೆ ದೇಶಗಳ ವಿಶ್ವಾಸ ಗಳಿಸಿ ನಂಬಿಕಸ್ಥ ಸಂಸ್ಥೆ ಆಗಿದೆ. ಬೇರೆ ದೇಶದವರಿಗೆ ತಮ್ಮ ಉಪಗ್ರಹಗಳನ್ನು ಇಸ್ರೋದಿಂದ ಹಾರಿಸಿದ್ರೆ ಯಾವುದೇ ತೊಂದ್ರೆ ಇಲ್ಲದೆ ಖಂಡಿತ ಗುರಿ ಮುಟ್ಟುತ್ತೆ ಎನ್ನುವ ವಿಶ್ವಾಸ ಹೊಂದಿದ್ದಾರೆ. ಇಂಥ ನಂಬಿಕೆ ಗಳಿಸಿಕೊಳ್ಳೋದಿಕ್ಕೆ ೪೦–೫೦ ವರ್ಷದ ಪ್ರಯತ್ನ ಬೇಕಾಯ್ತು. ಅಂದಮೇಲೆ ಇದು ಟೀಂ ಸ್ಪಿರಿಟ್‌ನಿಂದ ಸಾಧ್ಯವಾಗಿರಬೇಕು. ಇಂಥ ಟೀಂಅನ್ನು ನಿಮ್ಮ ಸಂಸ್ಥೆಯೊಳಗೆ ಹೇಗೆ ಬೆಳಸ್ತೀರಾ ?

**ಕಿರಣ :** ಮುಖ್ಯವಾಗಿ, ಸತೀಶ ಧವನ್ ಅವರು ಅಧ್ಯಕ್ಷರಾಗಿದ್ದಾಗ ಒಂದು ಪದ್ಧತಿ ಅಥವಾ ಆರ್ಕಿಟೆಕ್ಚರ್ ರೂಪಿಸಿದ್ರು. ಅದರ ಪ್ರಕಾರ ಪ್ರತಿಯೊಬ್ಬರ ಯಶಸ್ವಿ ಕಾರ್ಯನಿರ್ವಹಣೆ ಸಂಸ್ಥೆಯ ಯಶಸ್ಸಿಗೆ ಕಾರಣವಾಗುತ್ತದೆ. ಪ್ರತಿಯೊಬ್ಬರ ಅಂತಿಮಗುರಿ, ಸಂಸ್ಥೆಯ ಅಂತಿಮಗುರಿ ಒಂದೇ ಆಗಿರುತ್ತೆ. ಇದರಲ್ಲಿ ಪ್ರತಿಯೊಂದು ಕೆಲಸದ ರಿವ್ಯೂ ಮಾಡಲಾಗುವುದು. ರಿವ್ಯೂನಲ್ಲಿ ಚಿಕ್ಕವರಿಂದ ಹಿಡಿದು ಅತ್ಯಂತ ಅನುಭವೀ ತಜ್ಞರವರೆಗೆ ಎಲ್ಲರೂ ಭಾಗವಹಿಸುತ್ತಾರೆ. ಯಾರು ಯಾರನ್ನಾದರೂ ಪ್ರಶ್ನಿಸಲು ಮುಕ್ತ ಸ್ವಾತಂತ್ರ್ಯ ಇರುತ್ತೆ. ಒಬ್ಬರು ಏನೇ ಡಿಸೈನ್ ಮಾಡಿದ್ರೂ ಇನ್ನೊಬ್ರು ಕ್ರಾಸ್‌ಚೆಕ್ ಮಾಡ್ತಾರೆ, ವೆರಿಫೈ ಮಾಡ್ತಾರೆ, ವಿವರಣೆ ಕೇಳ್ತಾರೆ. ಮತ್ತೆ ಕೆಲವು ಸಾರಿ ತಾಂತ್ರಿಕ ನಿರ್ಣಯ, ಎಂಜಿನಿಯರಿಂಗ್ ನಿರ್ಣಯ ಮಾಡಿ ಮುಂದುವರಿಯಬೇಕಾಗುತ್ತದೆ. ಅವನ್ನೂ ಒಂದು ಪರಿಮಿತಿಯಲ್ಲಿ ಮಾಡಬೇಕಾಗುತ್ತದೆ. ಒಟ್ನಲ್ಲಿ ಕ್ವಾಲಿಟಿ ಕಂಟ್ರೋಲ್‌ಗೆ ಹೆಚ್ಚಿನ ಆದ್ಯತೆ ಕೊಡುವುದು. ಈ ರೀತಿ ಕ್ರಮಗಳನ್ನು ಶುರುವಿನಿಂದಲೂ ಇಟ್ಕೊಂಡಿರೋದ್ರಿಂದ ನಾವು ಯಶಸ್ಸು ಸಾಧಿಸೋದಿಕ್ಕೆ ಸಾಧ್ಯವಾಗಿದೆ. ಈಗ ನೋಡಿ, ಒಂದು ರಾಕೆಟ್‌ನಲ್ಲಿ ೧೦,೦೦೦ದಿಂದ ೨೦,೦೦೦ ಐಟಮ್‌ಗಳಿರುತ್ತವೆ. ಯಾವುದೇ ಒಂದು ಸರಿಯಾಗಿ ಕೆಲಸ ಮಾಡದೆ ಇದ್ರೂ ಅದು ವಿಫಲವಾಗೋ ಸಾಧ್ಯತೆ ಇರುತ್ತದೆ. ಆದ್ದರಿಂದ ಎಲ್ರೂ ಮಾಡೋ ಕೆಲಸಾನ ಸರಿಯಾಗಿ ಮಾಡಲೇಬೇಕಾಗುತ್ತದೆ. ಇದಲ್ಲದೆ ನಮ್ಮ ಪ್ರಾಜೆಕ್ಟ್‌ನ ಫಲಾನುಭವಿಗಳನ್ನು ಆಹ್ವಾನಿಸಿ, ಅವರೊಡನೆ ಚರ್ಚಿಸಿ, ಅವರ ಅವಶ್ಯಕತೆಗಳಿಗನುಗುಣವಾಗಿ ಪ್ರಾಜೆಕ್ಟ್ ತಯಾರಿಸುವುದರ ಜೊತೆಗೆ ರಿವ್ಯೂ ಮಾಡಬೇಕಾದಾಗ ವಿಷಯ ತಜ್ಞರನ್ನು, ವಿವಿಧ ಶೈಕ್ಷಣಿಕ ಸಂಸ್ಥೆಗಳ ತಜ್ಞರನ್ನು ಭಾಗವಹಿಸುವಂತೆ ಮಾಡುತ್ತೇವೆ. ಹೀಗೆ ಇದೊಂದು ಓಪನ್ ಆರ್ಕಿಟೆಕ್ಚರ್.

**ಹೊ. :** ಒಂದು ಕಾಲಕ್ಕೆ ಇಸ್ರೋ ಅಂದ್ರೆ ಕೆಲವರು ಅದೊಂದು ಬಿಳಿಯಾನೆ ಅಂತ ಟೀಕಿಸ್ತಿದ್ರು. ಆದ್ರೆ ಇಂದು ಇಸ್ರೋ ಹೆಮ್ಮೆಯ ಸಂಸ್ಥೆ ಆಗಿದೆ. ಇಸ್ರೋ ಜನಸಾಮಾನ್ಯರ ಬದುಕಿಗೆ ಹೇಗೆ ಪೂರಕವಾಗಿ ಕೆಲಸ ಮಾಡ್ತಿದೆ ?

**ಕಿರಣ :** ನೀವೀಗ ಇಸ್ರೋ ಒಂದು ಬಿಳಿಯಾನೆ ಅನ್ನುವ ಟೀಕೆ ಕುರಿತು ಹೇಳಿದ್ರಿ. ಆದ್ರೆ ನಿಜವಾಗಿ ಇಸ್ರೋನ ಮೊಟ್ಟಮೊದಲನೇ ಕೆಲಸದಿಂದ ಇಲ್ಲಿಯವರೆಗೆ ನೇರವಾಗಿ ಸಾರ್ವಜನಿಕರಿಗೆ ಉಪಯೋಗವಾಗುವ ಕೆಲಸಗಳನ್ನೇ ಮಾಡ್ತಾ ಬಂದಿದೆ. ಹಳೇ ಕಾಲದಲ್ಲಿ ಇಸ್ರೋ ಏನ್ ಕೆಲಸ ಮಾಡ್ತಾ ಇದೆ ಅನ್ನೋದು ಹೆಚ್ಚಿನವರಿಗೆ ಗೊತ್ತಾಗ್ತಾ ಇರಲಿಲ್ಲ. ಇಂದಿಗೂ ಹೆಚ್ಚಿನವರಿಗೆ ಗೊತ್ತಿಲ್ಲ. ಇಸ್ರೋ ಕೆಲಸ ಕೇವಲ ಒಂದು ಉಪಗ್ರಹವನ್ನು ರಾಕೆಟ್ ಮೂಲಕ ಆಕಾಶಕ್ಕೆ ಉಡಾವಣೆ ಮಾಡೋದು ಅಂತ ತಿಳ್ಕೊಂಡಿದ್ದಾರೆ. ಆದ್ರೆ ಈ ಉಪಗ್ರಹದಲ್ಲಿ ನಾವು ಅಳವಡಿಸಿರುವ ಕೆಲಸ ಕಾರ್ಯಗಳು ನೇರವಾಗಿ ಮತ್ತು ಪರೋಕ್ಷವಾಗಿ ಸಾರ್ವಜನಿಕ ಜೀವನದಲ್ಲಿ ಉಪಯೋಗ ಆಗ್ತಾ ಇವೆ. ಉಪಗ್ರಹಗಳಿಂದ ಬರೋ ಮಾಹಿತಿಯಿಂದ ನಿಮಗೆ ಚಂಡಮಾರುತ ಪಥ ಮಾಹಿತಿ, ಸೈಕ್ಲೋನ್ ಫಾಲ್, ಫ್ಲಡ್ ವಿಷಯ ಗೊತ್ತಾಗುತ್ತದೆ. ಹವಾಮಾನ ಮುನ್ಸೂಚನೆ ಸಿಗುತ್ತದೆ. ದೂರ ಸಂವಹನ ಅಂದ್ರೆ ಟೆಲಿಕಮ್ಯೂನಿಕೇಶನ್ ಉಪಗ್ರಹದಿಂದಲೇ ನಡಿಯೋದು ಬ್ಯಾಂಕ್ ಮತ್ತು ಆಡಳಿತ ಸಾಮರ್ಥ್ಯ ಹೆಚ್ಚಿಸಲು ಸಾಧ್ಯವಾಗಿದೆ. ಭೂಮಿಯ ಮೇಲೆ ಯಾವ ಜಾಗದಲ್ಲಿ ಬೋರ್‌ವೆಲ್ ತೆಗದ್ರೆ ನೀರು ಸಿಗುತ್ತೆ ಅನ್ನೋದು ಉಪಗ್ರಹದ ಮೂಲಕ ಗೊತ್ತಾಗುತ್ತದೆ. ಮಾತ್ರವಲ್ಲ, ಭೂಮಿಯ ಎಷ್ಟು ಆಳದಲ್ಲಿ ಎಷ್ಟು ಪ್ರಮಾಣದಲ್ಲಿ ನೀರು ಇದೆ ಎನ್ನೋದು ಕೂಡ ಗೊತ್ತಾಗುತ್ತದೆ. ೧೯೯೦ರಿಂದ ಮೀನುಗಾರರಿಗೆ ಸಮುದ್ರದ ಯಾವ ಭಾಗದಲ್ಲಿ ಹೆಚ್ಚು ಮೀನು ಸಿಗುತ್ತೆ ಅನ್ನೋ ಮಾಹಿತಿ ನೀಡಲಾಗುತ್ತದೆ. ಪ್ರವಾಹದ ತೀವ್ರತೆ ಬಗ್ಗೆ ಮುನ್ಸೂಚನೆ, ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಳ್ಳಬಹುದು. ಉದಾಹರಣೆಗೆ, ಅಸ್ಸಾಂನಲ್ಲಿ ೧೪೦ ಪ್ರವಾಹ ಘಟನೆಗಳ ಮುನ್ಸೂಚನೆ ಕೊಟ್ಟಿದ್ದೀವಿ. ಇದರಲ್ಲಿ ಶೇಕಡ ೯೦ರಷ್ಟು ನಿಖರವಾಗಿತ್ತು. ಇದರಿಂದ ಮುಂಚಿತವಾಗಿಯೇ ಸುರಕ್ಷತಾ ಕ್ರಮಗಳನ್ನು ಕೈಗೊಳ್ಳಲು ಸರ್ಕಾರಗಳಿಗೆ ಸಹಾಯವಾಯಿತು. ಉಪಗ್ರಹಗಳಿಂದ ಬೆಳೆ ಮಾಹಿತಿ, ಜೈವಿಕ ತಂತ್ರಜ್ಞಾನ, ಅರಣ್ಯ ಮಾಹಿತಿ, ಹವಾಮಾನ ಬದಲಾವಣೆ, ಪರಿಸರ ಶಿಕ್ಷಣದಲ್ಲಿ ಟೆಲಿ ಎಜುಕೇಶನ್, ಟೆಲಿ ಮೆಡಿಸನ್ ಹೀಗೆ ಹಲವಾರು ಕ್ಷೇತ್ರಗಳಲ್ಲಿ ನಮ್ಮ ಇಸ್ರೋ ಕೆಲಸ ಮಾಡ್ತಾ ಇದೆ. ಉಪಗ್ರಹಗಳಿಂದ ಬರುವ ಮಾಹಿತಿಯಿಂದ ಕೇವಲ ನಮ್ಮ ದೇಶ ಮಾತ್ರವಲ್ಲ, ಸುತ್ತಮುತ್ತಲ ದೇಶಗಳಿಗೂ ಅನುಕೂಲ ಆಗ್ತಾ ಇದೆ. ನಮ್ಮ ದೇಶದಲ್ಲಿ ಇತ್ತೀಚೆಗೆ ಕೇಂದ್ರ ಸರಕಾರದ ೫೮ ಇಲಾಖೆಗಳು ದಕ್ಷತೆಯಿಂದ ಕೆಲಸ ಮಾಡಲು ಬಾಹ್ಯಾಕಾಶ ತಂತ್ರಜ್ಞಾನದ ಬಳಕೆ ಮಾಡುತ್ತಿವೆ. ಬೆಂಗಳೂರಲ್ಲಿ ರಿಂಗ್ ರೋಡ್ ಕುರಿತ ಮಾಹಿತಿ, ಮೈಸೂರಲ್ಲಿ ಅಂಚೆ ಇಲಾಖೆ ಸಹಯೋಗದಲ್ಲಿ ಜನರಿಗೆ


ರಾಷ್ಟ್ರಾಧ್ಯಕ್ಷರಿಂದ ಸನ್ಮಾನ

ಮಾಹಿತಿ ದೊರಕಿಸಲು ಅಲ್ಲದೆ ಪೋಸ್ಟ್‌ಮ್ಯಾನ್ ರೈತರ ಜೊತೆ ಸಮಾಲೋಚಿಸಿ ರೈತನ ಜಮೀನಿನ ಚಿತ್ರಗಳನ್ನು ಪಡೆದು ದೆಹಲಿಯಲ್ಲಿರುವ ಮಹಾಲನೋಬಿಸ್ ಫೋರ್‌ಕ್ಯಾಸ್ಟಿಂಗ್ ಸೆಂಟರ್‌ಗೆ ಕೊಟ್ರೆ ರೈತರ ಬೆಳೆ ಸಮಸ್ಯೆ, ಬೆಳೆ ವಿಮೆ ಮುಂತಾದ ಕೃಷಿ ಚಟುವಟಿಕೆ ಅಭಿವೃದ್ಧಿ ಪಡಿಸಲು ಸಹಾಯ ಮಾಡುತ್ತದೆ. ಇಂಥ ಹಲವಾರು ಕ್ಷೇತ್ರಗಳಲ್ಲಿ ಜನರ ಬದುಕಿಗೆ ಪೂರಕವಾಗಿ ನಮ್ಮ ಸಂಸ್ಥೆ ಕೆಲಸ ಮಾಡುತ್ತಿದೆ. ಜನತೆ ಇದರ ಪ್ರಯೋಜನ ಪಡೆಯಬೇಕು.

**ಹೊ. :** ಇನ್ನೇನಾದರೂ ಅಧಿಕ ವಿವರಣೆ ನೀಡಿದರೆ ಅನುಕೂಲವಾದೀತು.

**ಕಿರಣ :** ನಾನಾಗಲೇ ನೀರಿನ ಒರತೆಯ ಬಗ್ಗೆ ಹೇಳಿದೆ. ಹತ್ತು ಅಥವಾ ಹದಿನೈದು ದಿವಸಗಳಿಗೊಮ್ಮೆ ಮೇಲ್ಪದರದ ನೀರಿನ ನಕ್ಷೆಗಳನ್ನು ಸಿದ್ಧಪಡಿಸುತ್ತೇವೆ. ಇದರ ಉಪಯೋಗ ಹಲವು ರೀತಿಗಳಲ್ಲಿ ಸಾಧ್ಯ. ಉದಾಹರಣೆಗೆ, ಬುಡಕಟ್ಟು ಜನರ ಪ್ರದೇಶಗಳಲ್ಲಿ ಇದನ್ನಾಧರಿಸಿ ನದಿ-ಸಮುದ್ರ ಇಲ್ಲದೆಡೆಯೂ ಮೀನುಗಾರಿಕೆ ಮಾಡಬಹುದು. ಇಂತಿಂತಹ ಕಟ್ಟೆ ಮತ್ತು ಕುಂಟೆಗಳಲ್ಲಿ ಇಂತಿಷ್ಟು ಕಾಲ ನೀರಿನ ಸೌಕರ್ಯವಿರುತ್ತದೆ ಎಂಬುದನ್ನು ಸ್ವಲ್ಪ ನಿಖರವಾಗಿ ತಿಳಿದರೆ ಮೀನು ಬೆಳೆಸಬಹುದು. ಗ್ರಾಮೀಣ ಪ್ರದೇಶದ ಸರ್ಕಾರಿ ವಿಭಾಗಗಳು ಇಂತಹ ಮಾಹಿತಿ ಪಡೆದು ವಿವಿಧ ಬೆಳೆಗಳನ್ನು ಸೂಕ್ತವಾಗಿ ಆಯೋಜಿಸುತ್ತವೆ. ಅರಣ್ಯ ಇಲಾಖೆಗೆ ಅನೇಕ ರೀತಿಯ ಮಾಹಿತಿ ಮತ್ತು ಮುನ್ಸೂಚನೆ ನೀಡುತ್ತೇವೆ. ಎಲ್ಲಿ ಕಾಡುಮರಗಳು ವಿರಳವಾಗುತ್ತಿವೆಯೆಂಬುದನ್ನು ತಿಳಿದಾಗ ಅಲ್ಲಿ ಹೊಸದಾಗಿ ಗಿಡಗಳನ್ನು ಬೆಳೆಸಲು ಅನುಕೂಲವಾಗುತ್ತದೆ. ಜಲಾಶಯಗಳ ನೀರಿನ ಮಟ್ಟವನ್ನು ಕಾಲಕಾಲಕ್ಕೆ ಕ್ಲುಪ್ತವಾಗಿ ತಿಳಿಯುತ್ತಾ ಹೋಗುವುದು ಕೃಷಿ ಕ್ಷೇತ್ರಕ್ಕೆ ಉಪಯುಕ್ತ. ಎಲ್ಲೋ ನೀರಿನ ಹರಿವಿದೆಯೆನ್ನಿ: ಅಲ್ಲಿ ನೀರನ್ನು ತಡೆದು ಭೂಮಿಯೊಳಕ್ಕೆ ಹಿಂಗುವಂತೆ ಮಾಡಲು ಸಾಧ್ಯ. ಹೀಗೆ ಜನರನ್ನು ಯೋಜನೆಗಳಲ್ಲಿ ತೊಡಗಿಸಿಕೊಂಡು ಬೆಳವಣಿಗೆಯ ಹಾದಿಯಲ್ಲಿ ಮುನ್ನಡೆಯಬಹುದು. ಇದಕ್ಕೆ ಸರ್ಕಾರ ಮತ್ತು ಜನತೆ ಕೈ ಜೋಡಿಸುವ ಅಗತ್ಯವಿರುತ್ತದೆ. ಮೊದಲು ಏನೆಲ್ಲಾ ಸೌಲಭ್ಯಗಳು ಸಾಧ್ಯವೆಂಬುದು ಶಿಕ್ಷಣ ವ್ಯವಸ್ಥೆಯ ಮೂಲಕ ಜನರನ್ನು ತಲುಪಬೇಕು. ನ್ಯಾಯಾಲಯಗಳಲ್ಲಿ ಸಹ ರಿಮೋಟ್ ಸೆನ್ಸಿಂಗ್ ಡೇಟಾ ಇದ್ದರೆ ಅದನ್ನು ಸಾಕ್ಷಿಯಾಗಿ ಪರಿಗಣಿಸುವ ಸಾಧ್ಯತೆ ಇದೆ. ವಿದ್ಯಾರ್ಥಿಗಳನ್ನು ಮಾಹಿತಿ ವಾಹಕರನ್ನಾಗಿ ರೂಪಿಸುವ ಕೆಲಸ ಮಾಡಿದರೆ ಅವರಿಗೂ ವಿಶಿಷ್ಟವಾದೊಂದು ಅನುಭವ ದೊರೆತಂತಾಗುತ್ತದೆ. ಮುಂದಿನ ಅವರ ಸೇವಾಕ್ಷೇತ್ರಗಳಲ್ಲಿ ಅದು ಉಪಯೋಗಕ್ಕೆ ಬರುತ್ತದೆ. ಈ ಸಂಬಂಧದಲ್ಲಿ ನಾವು ಎನ್‌ಸಿಇಆರ್‌ಟಿ ಜೊತೆ ಕೆಲಸ ಮಾಡುತ್ತಿದ್ದೇವೆ.

**ಹೊ. :** ರೈಲ್ವೇ ವಿಭಾಗದವರು ನಿಮ್ಮ ಪ್ರಯೋಜನ ಪಡೆದಿದ್ದಾರೆಯೇ ?

**ಕಿರಣ :** ಯಾವುದೋ ದೂರ ಪ್ರದೇಶದಲ್ಲಿ ರೈಲ್ವೇ ಹಳಿಗಳನ್ನು ಜೋಡಿಸಬೇಕಾದರೆ, ಸುರಂಗ ಕೊರೆಯಬೇಕಾದರೆ, ಆ ಜಾಗಕ್ಕೆ ಸಂಪರ್ಕ ಕಲ್ಪಿಸುವುದು ಹೇಗೆ, ಇತ್ಯಾದಿ ಕೆಲಸಗಳಿಗೆ ನಮ್ಮಿಂದ ಸಲಹೆ ಪಡೆಯಲು ಸಾಧ್ಯ.

**ಹೊ. :** ವೈಜ್ಞಾನಿಕ ಮನೋಭಾವವನ್ನು ಕುರಿತು ಏನು ಹೇಳುತ್ತೀರಿ? ವೇದಗಳ ಕಾಲದಲ್ಲೇ ಅಂತರಗ್ರಹ ಯಾನದ ತಿಳಿವಳಿಕೆ ಇದ್ದಿತು ಎಂದು ೨೦೧೫ರ ಭಾರತೀಯ ವಿಜ್ಞಾನ ಅಧಿವೇಶನದಲ್ಲಿ ಯಾರೋ ಹೇಳಿದ್ದರು. ಅದರಲ್ಲಿ ತಥ್ಯಾಂಶವಿದೆಯೆ?

**ಕಿರಣ :** ಮಾನವನ ಸಂಪೂರ್ಣ ಜ್ಞಾನದ ಪರಿಧಿ ಇಂದು ಏನಿದೆ, ಅದು ಹಠಾತ್ತನೆ ಉಂಟಾಗಿಲ್ಲ. ಪಾಶ್ಚಾತ್ಯರಲ್ಲಿ ಇದನ್ನು 'ವೈಜ್ಞಾನಿಕ ವಿಧಾನ' ಎನ್ನುತ್ತಾರೆ. ಇಲ್ಲಿ ಮುಖ್ಯ ಗ್ರಹಿಕೆ ಏನೆಂದರೆ ಒಂದು ಪ್ರಯೋಗವನ್ನು ಯಾರು ಎಲ್ಲಿ ಮಾಡಿದರೂ ಫಲಿತಾಂಶ ಒಂದೇ ಇರುತ್ತದೆ ಎಂಬುದು. ಅಂದರೆ, ಒಂದು ವಿಚಾರವನ್ನು ಯಾರು ಬೇಕಾದರೂ ಪರೀಕ್ಷೆ ಮಾಡಿ ನೋಡಬಹುದು. ಇಂದಿನ ದಿನಗಳಲ್ಲಿ ಇದಕ್ಕೆ ಪರಿಮಿತಿ ಉಂಟು. ಏಕೆಂದರೆ, ಬದಲಾವಣೆಗಳು ಸಂಭವಿಸುತ್ತಿರುತ್ತವೆ. ನಿನ್ನೆ ಸರಿಯಿದ್ದುದು ಇಂದು ಸರಿಯಿಲ್ಲ ಎಂದಾಗಿಬಿಡುತ್ತದೆ. ಆಗ ಬೇರೊಂದು ಊಹಾಪ್ರತಿಜ್ಞೆ ಮತ್ತು ವಿಧಾನ ಅನುಸರಿಸಿ ಮುಂದುವರಿಯಬೇಕು. ಈಗ ನಮಗೆ ತಿಳಿದಿರುವುದೆಲ್ಲಾ ತಪ್ಪೆಂದು ಅದರ ಅರ್ಥವಲ್ಲ. ನೂರಾರು ವರ್ಷಗಳ ಕಾಲಘಟ್ಟದಲ್ಲಿ ಏನೆಲ್ಲಾ ನಡೆದಿದೆ, ನೋಡಿ. ಅದರ ಹಿಂದೊಮ್ಮೆ ಹೇಳಿದ್ದುದು ಇಂದು ಅಂಧಶ್ರದ್ಧೆಯಾಗಿ ತೋರಬಹುದು. ಆದರೆ ಅದು ಪೂರ್ತಿ ಅವೈಜ್ಞಾನಿಕ ಎಂದು ಸ್ಥಿರಪಡಿಸಲಾಗುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಅದು ಸಾಧ್ಯ. ಆದರೆ ಎಲ್ಲ ಸಂದರ್ಭಗಳಲ್ಲೂ ಅಲ್ಲ. ಹಿಂದಿನ ಸಾಧಕರಿರಬಹುದು, ಗ್ರಂಥಗಳಿರಬಹುದು, ಅಲ್ಲೆಲ್ಲಾ ತಪ್ಪುಗಳೇ ಇವೆಯೆಂದು ಹೇಳುವಂತಿಲ್ಲ. ವೈಜ್ಞಾನಿಕ ವಿಧಾನದಿಂದ ಅವನ್ನು ಒರೆಗಲ್ಲಿಗೆ ಹಚ್ಚಿ ನೋಡಬೇಕು. ಸಾರಾಸಗಟಾಗಿ ಅದೆಲ್ಲವನ್ನೂ ತಿರಸ್ಕರಿಸುವುದು ಸರಿ ಎನಿಸುವುದಿಲ್ಲ. ಈಚೆಗೆ ಚೀಣಾದ ಒಬ್ಬ ವಿಜ್ಞಾನಿ ಮಲೇರಿಯಾಕ್ಕೆ ಔಷಧಿ ಕಂಡುಹಿಡಿದು ನೊಬೆಲ್ ಪಾರಿತೋಷಕವನ್ನು ಪಡೆದ. ಆತನ ಹೇಳಿಕೆಯಂತೆ ಅವನು ೧೫೦೦ ವರ್ಷ ಹಿಂದಿನ ಒಂದು ಗ್ರಂಥದಿಂದ ಪ್ರೇರಣೆ ಪಡೆದು ಸಂಶೋಧನೆ ನಡೆಸಿದ್ದನೆಂದು ಹೇಳುತ್ತಾರೆ. ಅಂದಿನ ಮಾತನ್ನು ಇಂದಿನ ವೈಜ್ಞಾನಿಕ ವಿಧಾನದಿಂದ ಪರೀಕ್ಷಿಸಲಾಗಿದೆ ಎಂದರ್ಥ. ಅಂಥದೇನನ್ನೂ ಮಾಡದೆ ನಾವದನ್ನು ತಳ್ಳಿಹಾಕಬಾರದು. ನಾವಿನ್ನೂ ವಿವರಣೆ ನೀಡಲಾಗಿಲ್ಲದಂತಹ ಸಂಗತಿಗಳು ಅನೇಕವಿರುತ್ತವೆ. ಹಾಗೆಂದು ಅಲ್ಲಿರುವುದನ್ನೆಲ್ಲಾ ಸ್ವೀಕರಿಸಿಬಿಡಬೇಕೆಂದೇನೂ ಇಲ್ಲ. ಪರೀಕ್ಷೆ ಮಾಡದೆಯೇ ನಿರಾಕರಿಸಬಾರದು ಎಂದಷ್ಟೇ ನಾವು ತಿಳಿಯಬೇಕಾದ್ದು. ಹೊಸ ವೈಜ್ಞಾನಿಕ ಸಂಶೋಧನೆಗಳು ನಡೆಯುತ್ತಾ ಹೋದಂತೆ ನಮ್ಮ ತಿಳಿವಿನ ವ್ಯಾಪ್ತಿ ಹಿಗ್ಗುತ್ತಿರುತ್ತದೆ. ಆ ತಿಳಿವು ಮತ್ತೆ ಬದಲಾಗುವ ಸಾಧ್ಯತೆಯೂ ಉಂಟು. ವಿಜ್ಞಾನದಲ್ಲಿ ಅಂತಿಮ ಎಂಬುದೇನೂ ಇಲ್ಲವೆನಿಸುತ್ತದೆ.






*ಸಂದರ್ಶಕರೊಂದಿಗೆ ಇಸ್ರೋ ಅಧ್ಯಕ್ಷರು*

**ಹೊ.:** ಅನ್ಯಗ್ರಹ ಜೀವಿಗಳ ಬಗ್ಗೆ ಏನು ಹೇಳುತ್ತೀರಿ ?

**ಕಿರಣ :** ಆ ಬಗ್ಗೆ ಈವರೆಗೆ ನಮಗೆ ವೈಜ್ಞಾನಿಕ ನಿಖರತೆ ದೊರಕಿಲ್ಲ. ನಾವು ಸಾಮಾನ್ಯವಾಗಿ ಕಲ್ಪಿಸಿಕೊಳ್ಳುವ ರೀತಿಯಲ್ಲಿ ಇರುವಂತಹ ಜೀವಿಗಳು ಇವೆ ಅಥವಾ ಇದ್ದಾರೆಂದು ಖಚಿತವಾಗಿ ಹೇಳಲು ನಮ್ಮಲ್ಲಿ ಪುರಾವೆಗಳಿಲ್ಲ. ನಾವು ತಿಳಿಯದಿರುವಂತಹ ಜೀವಿಗಳು ಬೇರಾವುದೋ ರೂಪದಲ್ಲಿ ಇರಲು ಸಾಧ್ಯವೇ ಇಲ್ಲವೆಂದು ಹೇಳಲು ಸಹ ಪುರಾವೆಗಳಿಲ್ಲವಲ್ಲ !

**ಹೊ.:** ವೈಜ್ಞಾನಿಕ ಮನೋಭಾವವನ್ನು ಮೂಡಿಸುವ ಬಗೆ ಯಾವುದು ?

**ಕಿರಣ :** ಇದು ತಿಳಿವಿನ ಪ್ರಶ್ನೆ. ಒಂದು ಕ್ರಿಯೆ ಇದೆಯೆನ್ನಿ: ಅದರ ಹಿಂದಿನ ಸಿದ್ಧಾಂತವೇನು ? ಒಂದು ಉದಾಹರಣೆ ನೋಡಿ. ಯಾವುದೋ ದೇವಸ್ಥಾನದ ಬಳಿ ಕೊಂಡ ಹಾಯುವ ಪದ್ಧತಿ ಇದೆ. ಅದನ್ನು ಒಂದು ರೀತಿಯಲ್ಲಿ ಮಾತ್ರವೇ ಅರ್ಥೈಸಲು ಬರುವುದಿಲ್ಲ. ಸುಮ್ಮನೆ ಮೂಢನಂಬಿಕೆ ಎಂದು ಹೇಳಿ ಅದನ್ನು ವಿಶ್ಲೇಷಿಸುವುದು ಸರಿಯಲ್ಲ. ಅಮೇರಿಕಾದಲ್ಲಿ ಕೊಂಡ ಹಾಯುವುದನ್ನು ಕಾರ್ಯಾಗಾರಗಳಲ್ಲಿ ಒಂದು ಭಾಗವನ್ನಾಗಿ ಮಾಡಿಕೊಂಡಿರುವ ಸಂದರ್ಭಗಳಿವೆ. ಹಣ ತೆತ್ತು ಅಲ್ಲಿಗೆ ಬಂದು ಆ ಅನುಭವ ಪಡೆಯುವವರಿದ್ದಾರೆ. ಅದನ್ನು ಮೂಢನಂಬಿಕೆ ಎನ್ನಬಹುದೆ ? ಕಾರ್ಯಾಗಾರದಲ್ಲಿ ಅದರ ಉದ್ದೇಶವು ವ್ಯಕ್ತಿಯ ಮನಸ್ಸಿನ ಮಾಪನವೂ ಆಗಿರುತ್ತದೆ. ಮನಸ್ಸು ಗಟ್ಟಿ ಇದೆಯೆ ಅಥವಾ ಭೀತಿಯಿಂದ ಆವರಿಸಲ್ಪಟ್ಟಿದೆಯೆ ? ಕ್ರಮೇಣ ಭೀತಿಯನ್ನು ನಿವಾರಿಸಿಕೊಂಡು ಯಾವ ಅಳುಕೂ ಇಲ್ಲದೆ ಕೊಂಡ ಹಾಯುವುದನ್ನು ಸಾಧಿಸಿಕೊಳ್ಳಬಹುದು. ಚಿಕ್ಕಂದಿನಿಂದಲೂ ಬೆಂಕಿ ಎಂದರೆ ಬೆಚ್ಚಿಬೀಳುವ ಸ್ವಭಾವದವರು ಆ ಭಾವನೆಯನ್ನು ಮೀರಿ ನಿಲ್ಲಲು ಸಾಧ್ಯವೆಂಬುದು ಈ ಕೊಂಡ ಹಾಯುವುದರ ಹಿನ್ನೆಲೆಯಲ್ಲಿದೆ. ಬೆಂಕಿಯೆಂದರೆ ಸುಡುವ ಪದಾರ್ಥ ಎಂಬ ಭಾವನೆಯನ್ನು ಕೈ ಬಿಡಲು ಇದೊಂದು ಸಾಧನ, ಅಷ್ಟೆ. ಎಷ್ಟು ಕಡಿಮೆ ಕಾಲ ನಿಮ್ಮ ಕಾಲು ಬೆಂಕಿಯನ್ನು ಸ್ಪರ್ಶಿಸುತ್ತಿರುತ್ತದೆ ಎಂಬುದನ್ನು ತಿಳಿದರೆ ನಿಮ್ಮ ಅಳುಕು ಕಡಿಮೆಯಾಗುತ್ತದೆ. ಆ ಹಂತದಲ್ಲಿ ಅದು ಅಂಧಶ್ರದ್ಧೆಯಾಗಿ ಉಳಿದಿರುವುದಿಲ್ಲ.

**ಹೊ.:** ಕರ್ನಾಟಕದ ಭೂಭಾಗವನ್ನೆಲ್ಲ ಉಪಗ್ರಹದಿಂದ ಪಟಚಿತ್ರಣ ಮಾಡೋಕೆ ಸಾಧ್ಯಾನಾ ?

**ಕಿರಣ :** ಇದನ್ನು ಒಂದು ಸಾರಿ ಅಲ್ಲ, ಸುಮಾರು ಸಾರಿ ಈಗಾಗ್ಲೆ ಮಾಡಿಯಾಗಿದೆ. ಬೇರೆ ಬೇರೆ ರೆಸಲ್ಯೂಶನ್ಸ್‌ನಲ್ಲಿ ಮಾಡಿದೀವಿ. ಇದರಿಂದ ವೇಸ್ಟ್‌ಲ್ಯಾಂಡ್ ಎಲ್ಲೆಲ್ಲಿದೆ, ನೀರಿನ ಮೂಲಗಳ ಕುರಿತು, ಸರ್ಫೇಸ್ ವಾಟರ್ ಮ್ಯಾಪ್ಸ್ ಎಲ್ಲ ಮಾಹಿತೀನ ಕೊಟ್ಟಿದೀವಿ. ಫಾರೆಸ್ಟ್ ಇಲಾಖೆಯವರಿಗೂ ಈ ಎಲ್ಲ ಮಾಹಿತಿ ಕೊಟ್ಟಿದೀವಿ. ಮುಖ್ಯವಾಗಿ ಮಾಡ್ತಾ ಇರೋದು ಅಂದ್ರೆ ಸ್ಪೇಸ್ ಟು ಸ್ಪೇಸ್ ಇನ್‌ಫರ್ಮೇಶನ್ ಸಿಸ್ಟಮ್ ಫಾರ್ ದಿ ಸೆಂಟ್ರಲೈಸ್ಡ್ ಪ್ಲಾನಿಂಗ್, ಸಿಸಿಡಿಪಿ, ಇದರಲ್ಲಿ ಪ್ರತಿಯೊಬ್ಬ ಗ್ರಾಮ ಪಂಚಾಯಿತಿ ಮುಖ್ಯಸ್ಥ ಈ ಮಾಹಿತಿನೆಲ್ಲ ಉಪಯೋಗಿಸಿಕೊಂಡು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ ರೂಪಿಸಿಕೊಳ್ಳೋದಕ್ಕೆ ಯೋಜನೆ ನಡೀತಾ ಇದೆ. ಈಗ ನಾವು ಆ ಯೋಜನೆಗೆ ವಿದ್ಯಾರ್ಥಿಗಳನ್ನು ತೊಡಗಿಸಿಕೊಂಡು ಅವರ ಮೂಲಕ ಜನಪ್ರತಿನಿಧಿಗಳಿಗೆ ಸ್ಥಳೀಯ ಭಾಷೆಗಳಲ್ಲಿ ಕಂಪ್ಯೂಟರ್ ಮೂಲಕ ಮಾಹಿತಿ ಉಪಯೋಗಿಸಿಕೊಳ್ಳುವುದನ್ನು ಹೇಳಿಕೊಡುವ ಕಾರ್ಯಕ್ರಮ ರೂಪಿಸಿದ್ದೇವೆ. ಇದಕ್ಕಾಗಿ ಕೆಲವು ಕಡೆ ಪೈಲೆಟ್ ಪ್ರೋಗ್ರಾಂ ನಡೀತಾ ಇದೆ. ಈ ಯೋಜನೆ ಕೆಲವೇ ದಿನಗಳಲ್ಲಿ ಎಲ್ಲ ಕಡೆ ಜಾರಿಗೆ ಬರಲಿದೆ.

**ಹೊ.:** ಇದನ್ನೆಲ್ಲ ಕೇಳಿದ್ರೆ ನಮ್ಮ ಜನಪ್ರತಿನಿಧಿಗಳು ಈ ವಿಚಾರದಲ್ಲಿ ಹಿಂದೆ ಬಿದ್ದಿದ್ದಾರೆ ಅನ್ಸುತ್ತೆ. ಎಷ್ಟೋ ವಿಷಯ, ಸಮಸ್ಯೆಗಳ ಕುರಿತು ಚರ್ಚೆ ಮಾಡ್ತಾರೆ. ಆದ್ರೆ ಪರಿಹಾರದ ಬಗ್ಗೆ ಯೋಚಿಸೋದೇ ಇಲ್ಲ. ಈ ದೃಷ್ಟಿಯಿಂದ ಇಸ್ರೋ ಆಗಲಿ ನಿಮ್ಮ ಅಕಾಡೆಮಿಕ್ ಸಂಸ್ಥೆಗಳಿಂದಾಗಲೀ ಇಂಥ ಅನೇಕ ಯೋಜನೆಗಳ ಬಗ್ಗೆ ಕಿರುಹೊತ್ತಿಗೆಗಳನ್ನು ಹೊರತರಬಹುದು ಅಥವಾ ಜನಜಾಗೃತಿಗಾಗಿ ಕಾರ್ಯಾಗಾರಗಳನ್ನು ಮಾಡುವ ಯೋಜನೆ ಇಸ್ರೋದಲ್ಲಿದೆಯಾ ?

**ಕಿರಣ :** ನಾವು ರಾಜ್ಯ ಮತ್ತು ಕೇಂದ್ರ ಸರಕಾರಗಳ ಎಲ್ಲ ಇಲಾಖೆಗಳ ಜೊತೆ ಸಂಪರ್ಕದಲ್ಲಿದೀವಿ. ಈ ಬಾಹ್ಯಾಕಾಶ ತಂತ್ರಜ್ಞಾನ ಹಾಗೂ ಅದರ ಉಪಕರಣಗಳಿಂದ ಬೇರೆ ಬೇರೆ ಕೆಲಸಗಳಿಗೆ ಯಾವ್ಯಾವ ಥರ ಉಪಯೋಗ ಆಗುತ್ತೆ ಅನ್ನುವುದನ್ನು ಶಾಲಾ ಮಕ್ಕಳಿಂದ ಹಿಡಿದು ಹಿರಿಯ ಅಧಿಕಾರಿಗಳವರೆಗೆ, ಜನ ಪ್ರತಿನಿಧಿಗಳಿಗೆ, ಬೇರೆ ಬೇರೆ ಮಟ್ಟಗಳಲ್ಲಿ ತಿಳಿಸಬೇಕಾಗಿದೆ. ಈ ಕುರಿತು ಕೆಲಸ ನಡೀತಾ ಇದೆ. ಇದು ಒಂದು ಚಳುವಳಿಯ ರೂಪದಲ್ಲಿ ನಡೆಯಬೇಕಿದೆ.

**ಹೊ.:** ಇಸ್ರೋಗೆ ಬೇಕಾದ ಬಿಡಿಭಾಗಗಳನ್ನೆಲ್ಲ ಮಾಡುವುದಕ್ಕೋಸ್ಕರ ನಮ್ಮ ದೇಶದ ಕಾರ್ಖಾನೆಗಳೇ ತುಂಬ ಇವೆ ಅಂತಾ ಹೇಳಿದ್ರಿ. ಅಂಥ ಎಷ್ಟು ಕಾರ್ಖಾನೆಗಳಿಗೆ ಇಸ್ರೋ ಕೆಲಸ ಕೊಟ್ಟಿದೆ. ಎಷ್ಟು ಜನರಿಗೆ ಉದ್ಯೋಗ ಸಿಕ್ಕಿರಬಹುದು ?

**ಕಿರಣ :** ಸುಮಾರು ೬೦೦ರಿಂದ ೭೦೦ ಕಂಪನಿಗಳು ನಮ್ಮ ಜೊತೆ ಕೆಲಸ ಮಾಡ್ತಾ ಇವೆ. ಇಂಥ ಕಂಪನಿಗಳು ನಮಗೆ ಬೇಕಾಗುವಂಥ ಬಿಡಿ ಭಾಗಗಳನ್ನು ಮಾಡಿಕೊಡುವುದರ ಜೊತೆಗೆ, ಇಸ್ರೋಗೆ ಕೆಲಸ ಮಾಡಿಕೊಡ್ತಾರೆ ಅಂದ್ರೆ ಆ ಕಂಪನಿಯ ವಿಶ್ವಾಸಾರ್ಹತೆ ಹೆಚ್ಚುತ್ತದೆ. ಇದರಿಂದ ಹಲವಾರು ಕಂಪನಿಗಳು ತಮ್ಮ ಉತ್ಪನ್ನಗಳನ್ನು ರಫ್ತುಮಾಡುವ ಮಟ್ಟಕ್ಕೆ ಬೆಳೆದಿವೆ. ಸಾವಿರಾರು ಜನ ಕೆಲಸಗಾರರು ಈ ಕಂಪನಿಗಳಲ್ಲಿ ಕೆಲಸ ಮಾಡುತ್ತಿದ್ದಾರೆ.

**ಹೊ.:** ನಾವು ಸ್ಪೇಸ್ ಸೈನ್ಸ್‌ನಿಂದ ೧೨ ಬಿಲಿಯನ್ ವರ್ಷಗಳ ಹಿಂದೆ ನಮ್ಮ ವಿಶ್ವ ಹೇಗಿತ್ತು ಎಂದು ತಿಳಿದುಕೊಳ್ಳುವವರೆಗೆ ಸಾಗಿದ್ದೇವೆ. ಆದರೆ ಇದರ ಮೂಲಕ ಜನರ ತಿಳುವಳಿಕೆಯಲ್ಲಿ ವಿಶ್ವದ ಕಲ್ಪನೆ ಬಂದರೂ ವಿಶ್ವಭಾವ ಬರುತ್ತಿಲ್ಲ. ಅಂದರೆ ಜನಗಳ ಮನಸ್ಸಿನಲ್ಲಿ ಈ ಭೂಮಿ, ಸೂರ್ಯ, ಚಂದ್ರ, ಗ್ಯಾಲಕ್ಸಿ, ನಾನು ಎಲ್ಲ ವಿಶ್ವದ ಭಾಗವೇ ಆಗಿದ್ದೇವೆ ಎಂಬ ವಿಶ್ವಭಾವನೆ ಬರ್ತಾ ಇಲ್ಲ. ಸ್ಪೇಸ್ ಸೈನ್ಸ್‌ನಿಂದ ವೈಜ್ಞಾನಿಕ ಮಾಹಿತಿ ಸಿಗುತ್ತದೆ, ಅಷ್ಟೆ. ಅದು ಜನರ ಮನಸ್ಸಿನಲ್ಲಿ ಅರಿವು ಮೂಡಿಸುತ್ತಿಲ್ಲ. ಅಂತರಿಕ್ಷ ವಿಜ್ಞಾನ ಮನುಷ್ಯನ ಮನಸ್ಸನ್ನು ವಿಶಾಲಗೊಳಿಸುವುದು ಮುಖ್ಯ. ಇಂಥ ಕೆಲಸವನ್ನು ಇಸ್ರೋ ಮಾಡಬೇಕು ಅಂತ ಅಲ್ಲ, ಇಂಥ ಕೆಲಸ ಆಗಬೇಕು, ಈ ದಿಶೆಯಲ್ಲಿ ಸಾಗಬೇಕು ಅಲ್ಲವೆ ?

**ಕಿರಣ :** ನೀವು ಕೇಳ್ತಾ ಇರೋ ಪ್ರಶ್ನೆ ಸ್ಪೇಸ್ ಸೈನ್ಸ್‌ಗಿಂತ ಒಂದು ರೀತಿ ಹೆಚ್ಚು ಮೂಲಭೂತವಾದ ಪ್ರಶ್ನೆ. ಅದನ್ನೆಲ್ಲ ಯೋಚನೆ ಮಾಡಬೇಕಾದ ಮನುಷ್ಯ ಒಂದು ಕೆಪೆಬಲಿಟಿ ಬೆಳಸ್ಕೋಬೇಕು. ಅದು ಯಾವ ರೀತಿ, ಹೇಗೆ ಅನ್ನೋದು ತುಂಬ ಬೇರೆಯದೇ ಆದ ವಿಚಾರ. ಸ್ಪೇಸ್ ಸೈನ್ಸ್‌ನಿಂದ, ವೀಕ್ಷಣೆಯಿಂದ ನಮಗೆ ವಿಶ್ವ ಮಾಹಿತಿ ಸಿಗಬಹುದು. ಅದನ್ನೆಲ್ಲ ಉಪಯೋಗಿಸಿಕೊಂಡು ಮನುಷ್ಯನ ಮನಸ್ಸನ್ನು ವಿಶಾಲಗೊಳಿಸೋಕೆ ಬೇರೆ ಬೇರೆ ರೀತಿಯ ಪ್ರಯತ್ನಗಳಾಗಬೇಕು. ಮೇಲಾಗಿ ನಮ್ಮ ತಿಳುವಳಿಕೆ ಹೊಸ ಹೊಸ ವೈಜ್ಞಾನಿಕ ಸಂಶೋಧನೆಗಳು ಬಂದಹಾಗೆ ಬದಲಾವಣೆ ಆಗ್ತಾ ಹೋಗುತ್ತೆ ಅನ್ನುವುದನ್ನು ಮರೆಯಬಾರದು.

**ಹೊ.:** ನಿಮ್ಮ ಬಿಡುವಿಲ್ಲದ ಕೆಲಸಗಳ ಮಧ್ಯೆ ನಮಗೆ ಸಮಯ ಕೊಟ್ಟು ನಿಮ್ಮ ಅಪಾರವಾದ, ಅಮೂಲ್ಯವಾದ ಚಿಂತನೆಗಳನ್ನು ಅನುಭವಗಳನ್ನು ಹಂಚಿಕೊಂಡಿದ್ದೀರಿ. 'ಹೊಸತು' ಓದುಗರ ಪರವಾಗಿ ನಿಮಗೆ ಧನ್ಯವಾದ ಹೇಳಿ ಶುಭ ಕೋರುತ್ತೇವೆ.

ಡಾ॥ ಸಿದ್ದನಗೌಡ ಪಾಟೀಲ
ಸಂಪಾದಕ, 'ಹೊಸತು', ಬೆಂಗಳೂರು – ೫೬೦ ೦೦೧





ತಿಂಗಳ ಕಥೆ

# ಇದಿರ ಹರಿದು

ಶಿವ್ಯಾನ ಮೇಲೆ ಫಕೀರಪ್ಪನಿಗೆ ಈಗಲೂ ನಂಬಿಕೆ ಇತ್ತು. ತಪ್ಪು ಮಾಡಿಲ್ಲಂತ ಗೊತ್ತಿತ್ತು. ಆದರೆ, ಈಗಷ್ಟೇ ಚನ್ನಬಸಪ್ಪ ಸಾವ್ಕಾರನು, ಬಾಯಿಗೆ ಬಂದಗೆಲ್ಲ ಮಾತಾಡಿ, ಶಿವ್ಯಾ, ತಾಮ್ರದ ಹಂಡೆ ಕಳುವು ಮಾಡ್ಯಾನಂತ ಅಪವಾದ ಹೊರಸಿದ್ದ. ಹಂಗs, ತನಗಾದ ಲುಕ್ಸಾನು ನಾಳೆ ಒಳಗೆ ತುಂಬಿಕೊಡ್ಬೇಕಂತೇಳಿ ತಾಕೀತು ಮಾಡಿ ಹೋಗಿದ್ದ. ಇದೆಲ್ಲವೂ ಫಕೀರಪ್ಪನಿಗೆ ಮತ್ತೆ ಮತ್ತೆ ನೆನಪಾಗಿ ಆತನಿಗೆ ಶಿವ್ಯಾನ ಮೇಲೆ ಸಿಟ್ಟು ಉಕ್ಕೇರಿ ಬಂತು. ಹೀಗೆ, ಉಕ್ಕೇರಿ ಬಂದ ಸಿಟ್ಟಿನಲ್ಲಿ, ಅಲ್ಲೇ ನಿಂತಿದ್ದ ಶಿವ್ಯಾನ ರಟ್ಟೆ ಹಿಡಿದು, 'ಲೇ, ಶಿವ್ಯಾ, ಹಾದರಕ್ಕುಟ್ಟಿದವನೆ... ಇದೆಲ್ಲ ಬೇಕಿತ್ತೆನು, ನಿನ್ಗ !? ಹಿಂಗ್ಯಾಕ್ ಮಾಡಿದ್ದಿಲೆ !? ಆ ತಾಮ್ರದ ಹಂಡೆ ಎಲ್ಲಿಟ್ಟಿದ್ದಿ ಹೇಳ್ಲೇ...' ಎಂದು ಬೈಯುತ್ತ, ಅಂಗಳದಲ್ಲಿ ಬಿದ್ದಿದ್ದ ಕಬ್ಬಿನ ಮಡ್ಡಿನಿಂದ ದನಕ್ಕೆ ಬಡಿದವರಂಗೆ ಬಡಿಯತೊಡಗಿದ.

ಕಲ್ಲೇಶ್ ಕುಂಬಾರ್

ಆ ರಾತ್ರಿ, ಧೋ... ಎಂದು ಮಳೆಯಂಗೆ ಸುರಿಯುತ್ತಿದ್ದ ಕತ್ತಲೆಯೊಳಗೆ ಈ ಲೋಕದ ಸಕಲ ಜೀವಾತ್ಮಗಳೆಲ್ಲವೂ ಭೂಮಿಯ ಮೇಲಿನ ತಮ್ಮ ಇರುವಿಕೆಯ ತಂತು ಕಡಿದುಕೊಂಡವರಂಗೆ ಗಾಢವಾಗಿ ನಿದ್ದೆಗೆ ಶರಣಾದ ಹೊತ್ತಲ್ಲಿ; ಇತ್ತ ಲಿಂಗಾಯತರ ಕೇರಿಯ ಕೊನೆಯ ತುದಿಗೆ ಅಂಟಿಕೊಂಡಂತೆ ಇರೋ ಗುಡುಸಲಿನ ಹೊರಗೆ ಅಂಗಳದಲ್ಲಿ ಮಲಗಿದ್ದ ಫಕೀರಪ್ಪ, ಇದ್ದಕ್ಕಿದ್ದಂಗೆ, 'ಲೇ, ಯಾಕ್ರಲೆ...? ಯಾಕ್ರಲೆ...? ಏನ್ಮಾಡ್ಲಿಕತ್ತೀರ್ಲೆ...!?' ಎಂದು ಕನವರಿಸುತ್ತ ತಟ್ಟನೆ ಹಾಸುಗೆಯಲ್ಲಿ ಎದ್ದು ಕುಂತ! ಆ ಕ್ಷಣದಲ್ಲಿ, ಹೌಹಾರಿದಂತಿದ್ದ ಆತನ ಮೈಯೆಂಬೊ ಮೈಯೆಲ್ಲ ಭಯದಿಂದ ಬೆವರೊಡೆದಿತ್ತು. ಆ ಭಯದಿಂದಾಗಿ ಗಂಟಲು ಒಣಗಿ ಬಂದಂಗಾಗಲು ಉಗುಳು ನುಂಗಿದ. ಮರುಗಳಿಗೆಯಲ್ಲಿ ದೀರ್ಘವಾದ ನಿಟ್ಟುಸುರೊಂದನ್ನು ಬಿಟ್ಟು, ತುಸು ಹೊತ್ತು ಹಂಗೇ ಕುಂತು ಸುಧಾರಿಸಿಕೊಂಡ. ಆಗಲೇ, ಕ್ರೂರವಾದ ಮೌನ ತುಂಬಿದ ನಿಶ್ಯಬ್ದ ವಾತಾವರಣದಲ್ಲಿ ಹಾರಾಡುತ್ತಿದ್ದ ಹುಳ-ಹುಪ್ಪಡಿಗಳು ಗುಂಯ್... ಗುಟ್ಟುತ್ತಿದ್ದ ಶಬ್ದ ಕಿವಿಗೆ ಬಿತ್ತು. ಅದ ಕೇಳಿಸಿಕೊಳ್ಳುತ್ತ, ತನ್ನ ಹಾಸುಗೆಯ ಪಕ್ಕದಲ್ಲಿದ್ದ ಕಂದೀಲಿನ ಮಂದಬೆಳಕಲ್ಲಿ ಸುತ್ತಲೂ ಕಣ್ಣಾಡಿಸಿದ. ಆಗ, ಗುಡುಸುಲದೊಳಗೆ ಮಲಗಿದ್ದ ತಾರವ್ವ, ಗಾಢನಿದ್ದೆಗೆ ಜಾರಿದ್ದು, ಮುಂದು ಮಾಡಿದ ಬಾಗಿಲ ಸಂದಿಯಿಂದ ಕಂಡಿತು.



ಆಕೆಯನ್ನು ಕಂಡಿದ್ದೇ ದುಃಖ ಉಮ್ಮಳಿಸಿ ಬಂತು. ಆ ದುಃಖದಲ್ಲಿ, ತನ್ನ ಸುತ್ತಲೂ ಆವರಿಸಿದ ಕತ್ತಲೆಗೆ ಕಣ್ಣುಗಳನ್ನು ಕೀಲಿಸಿ ಹಂಗೇ ಕುಂತ. ಆಗಲೇ, ತುಸುಹೊತ್ತಿನ ಹಿಂದೆ ಕಂಡಕನಸು ಆತನ ಕಣ್ಮುಂದೆ ಮೂಡತೊಡಗಿತು : ಗುಡುಸುಲ್ದಾಗ ಹಚ್ಚಿಟ್ಟಿದ್ದ ಚಿಮಣಿ ದೀಪದ ಬೆಳಕಿನ್ಯಾಗ ಫಕೀರಪ್ಪ ಉಣ್ಣಾಕ ಕುಂತಿದ್ದ. ಅದs ವ್ಯಾಳ್ಯೆದಾಗ ಅತ್ತ ಗುಡುಸುಲಿನ ಹೊರಗೆ, ಮಹಾಪೂರ ಬಂದವ್ರಂಗ ಹೊಳೆ... ತನ್ನೊಡಲು ತುಂಬುಕೊಂಡು ರಭಸದಿಂದ ಹರೀಲಿಕ್ಕತ್ತಿತ್ತು! ಇದು, ಗೊತ್ತಿದ್ದೊ... ಗೊತ್ತಿಲ್ದನೊ... ಏನೋ ಅನ್ನುವಂಗ ಫಕೀರಪ್ಪ, ತಾಬಾನದಾಗಿನ ಅನ್ನ-ಸಾರು ಕಲಸಿ, ಇನ್ನೇನು ತುತ್ತು ಬಾಯ್ಗಿಡ್ಬೇಕು... ಅಟ್ರಾಗ, ನೊಡ್ಲಿಕ್ಕೆ ರಾಕ್ಷಸ್ರಂಗ ಕಾಣ್ತಿದ್ದ ಐದಾರು ಜನರು, ನೆಲದ ಮ್ಯಾಲೆ ನಡೆದವರಂಗೆ ಆ ಹೊಳೆಮ್ಯಾಲೆ ಸರಸರ ಅಂತ ನಡೆದುಕೊಂಡು ಬಂದವರೆ, ಗುಡುಸುಲನ್ನು ಹೊಕ್ಕು ಫಕೀರಪ್ಪನ ಮುಂದೆ ಬಂದು ನಿಂತ್ಗಂಡ್ರು! ಆಗ, ಹೆಜ್ಜೆ ಸಪ್ಪಳಾದಂತೆನಿಸಿ ಫಕೀರಪ್ಪ ಕತ್ತೆತ್ತಿ ನೋಡ್ತಾನು... ಮನುಸೇರಂಗ ಕಾಣ್ತಿದ್ದ ಅವರಿಗೆಲ್ಲ ಕೆಳಗೆ ಕಾಲುಗಳೇ ಇರ್ಲಿಲ್ಲ! ಇನ್ನು, ಮಾರಿನರ ನೋಡೋಣಂದ್ರ... ಅವರ ಮುಂಡಗಳ ಮ್ಯಾಲೆ ರುಂಡಗಳೇ ಇರ್ಲಿಲ್ಲ! ಹೆಗಲಮ್ಯಾಲೆ ನೀರು ತುಂಬಿದ ಹಂಡೆಗಳನ್ನು ಹೊತ್ತುಕೊಂಡಿದ್ದ ಅವ್ರೆಲ್ಲ ಆಕಾಶದೊಳಗೆ ಹಾರಾಡೊ ಗಾಳಿಪಟದಂಗ ನಿಂತಲ್ಲೇ ಅತ್ತಿತ್ತ ವಾಲಾಡುತ್ತಿದ್ದರು. ಆ ಹೊತ್ತಲ್ಲಿ, ಅವರ ರೂಪ ಕಂಡು ಬೆಚ್ಚಿಬಿದ್ದ ಫಕೀರಪ್ಪನ ಎದೆಯೊಳಗೆ ಸಳಸಳ ಅಂತ ನೀರಾಡತೊಡಗಿತು.

ಇದರಿಂದಾಗಿ, ಆತ, 'ಯಾರ್ಲೆ, ನೀವೆಲ್ಲ...?' ಎಂದು ಕೇಳಬೇಕೆಂದು ಕೊಂಡ. ಆದರೆ, ಕೇಳಲು ಧೈರ್ಯ ಸಾಲಲಿಲ್ಲ. ಅದಕ್ಕೇ ಕೈಯಾಗ ತುತ್ತು ಹಿಡ್ಕೊಂಡು, ಜೀವಭಯದಿಂದ ಹಂಗೇ ನಡುಗುತ್ತ ಕುಂತ. ಇಷ್ಟರ ನಡುವೆ, ಅವರೆಲ್ಲ ಇದ್ದಕ್ಕಿದ್ದಂಗೆ ಗಹಗಹಿಸಿ ನಗುತ್ತ ಫಕೀರಪ್ಪನತ್ತ ದಡದಡನೆ ಬಂದವರೆ ಏಕಕಾಲದಲ್ಲಿ ತಮ್ತಮ್ಮ ಹೆಗಲ ಮೇಲಿನ ಹಂಡೆಯಲ್ಲಿದ್ದ ನೀರನ್ನು ಆತನ ಮೈಮೇಲೆ ಸುರುವಿದಂಗಾಗಲು, 'ಲೇ, ಯಾಕ್ರಲೆ...? ಯಾಕ್ರಲೆ...? ಏನ್ಮಾಡ್ಲಿಕತೀರ್ಲೆ...!?' ಎಂದು ಕನವರಿಸುತ್ತ ತಟ್ಟನೆ ಹಾಸುಗೆಯಲ್ಲಿ ಎದ್ದು ಕುಂತಿದ್ದ, ಫಕೀರಪ್ಪ!

ಫಕೀರಪ್ಪನಿಗೆ ಕನಸಲ್ಲಿ ಕಂಡದ್ದು ಕಣ್ಮುಂದೆ ಬಂದು ಸಂಕಟವಾಗತೊಡಗಿತು. ಆ ಸಂಕಟದಲ್ಲಿ, 'ಪಾಪಾತ್ಮಗಳು ಸುಳಿದಾಡೊ ಹೊತ್ತಿನ್ಯಾಗ ಅದೆಂಥ ಕೆಟ್ಟ ಕನ್ಸು ಕಂಡೆನಪ್ಪೊ, ಶಿವನೆ...' ಎಂದು ಮನದೊಳಗೆ ಅಂದುಕೊಂಡ. ಹಾಗೇ ಆ ಕನಸಿನ ಗುಂಗಿನಿಂದ ಹೊರಬರಬೇಕೆಂದುಕೊಂಡು ತನ್ನ ಚಿತ್ತವನ್ನು ಎತ್ತೆತ್ತಲೋ ಹರಿಸತೊಡಗಿದ. ಆಗ, ಇಂದು ಸಂಜೆಳೆ ಚನ್ನಬಸಪ್ಪ ಸಾವ್ಕಾರನು ಗುಡುಸಿಲಿನ ತಂಕ ಬಂದು, ತನಗೆ ಬಾಯಿಗೆ ಬಂದಂಗೆಲ್ಲ ಬೈದು, ಕೊನೆಗೆ, "ಲೇ, ಫಕೀರಪ್ಪ... ನಿನ್ಗ ನಾಳೆ ತಂಕ ಟೈಮ್ ಕೊಡ್ತೀನಿ! ನಿನ್ನ ಮಗ, ಶಿವ್ಯಾ ಮಾಡಿದ ತಪ್ಪು ಒಪ್ಕೊಂಡು... ನನ್ಗ ಆದ ಲುಕ್ಸಾನು ತುಂಬಿಕೊಡ್ಬೇಕು! ಇಲ್ದಿದ್ರ, ಪೊಲೀಸ ಟೇಸನ್ದಾಗ ಕಂಪ್ಲೇಂಟ್ ಕೊಡ್ತೀನಿ, ಹುಷಾರ್..." ಎಂದು ತಾಕೀತು ಮಾಡಿ ಹೋಗಿದ್ದು ನೆನಪಾಗಿ ತಳಮಳಿಸಿದ. ಆ ತಳಮಳದಿಂದಾಗಿ ಕ್ಷಣ ಹೊತ್ತು ತನ್ನ ತಾನೇ ಮೈಮರೆತು ಕಣ್ಮುಚ್ಚಿ ಕುಂತ. ಆ ಗಳಿಗೆಯಲ್ಲಿ, ಕಗ್ಗತ್ತಲೆಂದರೆ ಕಗ್ಗತ್ತಲಾಗಿತ್ತು. ಮ್ಯಾಲೆ, ಮುಗಿಲೊಳಗೆ ರಾಶಿ ರಾಶಿ ಚುಕ್ಕೆಗಳು ಮಿನುಗುತ್ತಿದ್ದವು. ಬೆಳಕು ಹರೀಲಿಕ್ಕೆ ಇನ್ನೂ ಭಾಳ್ಹೊತ್ತಿತ್ತು. ಆದರೆ, ಇದಾವುದರ ಅರಿವು ಇಲ್ಲದಂಗೆ ಮೈಮರೆತು ಕುಂತಿದ್ದ ಫಕೀರಪ್ಪ, ಆ ಅರೆಮರೆವಿನ ನಡುಕನs ದೀರ್ಘವಾಗಿ ಉಸುರೆಳುದುಕೊಳ್ಳುತ್ತ ಹಾಸುಗೆಯಲ್ಲಿ ಕೈ ಸವರಾಡಿದ. ಆಗ, ತನ್ನ ಪಕ್ಕದಲ್ಲಿ ಮಲಗಿದ್ದ ಶಿವ್ಯಾ, ಗಾಢವಾಗಿ ನಿದ್ದೆಗೆ ಜಾರಿದ್ದು ಅದ್ಹೆಂಗೋ ಅರಿವಿಗೆ ಬಂದು, ದಿಗ್ಗನೆ ಕಣ್ತೆರೆದು ನೋಡಿದ. ಆ ವ್ಯಾಳ್ಯೆದಾಗ ಹಾಸುಗೆಯಲ್ಲಿ, ಮೈ ನೋವಿನಿಂದಾಗಿ ನರಳುತ್ತ ಗುಬ್ಬಿಯಂಗಾಗಿ ಮುದುಡಿ ಮಲಗಿದ್ದ ಶಿವ್ಯಾನ ಮೈಮೇಲೆಲ್ಲ ಬಾಸುಂಡೆಗಳು ಮೂಡಿದ್ದವು. ಆ ಬಾಸುಂಡೆಗಳಿಂದಾಗಿ ಆತನ ಮೈಯಲ್ಲ ಹಚ್ಚಗ್ ಹಸಿರಾಗಿತ್ತು. ಅದರ ನೋವು ತಡೀಲಾರ್ದೆ ಆತ ನಿದ್ದೆಗಣ್ಣಲ್ಲಿ ಹಾಸುಗ್ಯಾಗ ಬಿದ್ದುಕೊಂಡು ಒಂದೇ ಸವುನೆ ಒದ್ದಾಡುತ್ತಿದ್ದ. ಇಡಿಯಾಗಿ ಆತನ ದೇಹ ಅಂಬೋದು ಕೆಂಡದಂಗೆ ಸುಡುತ್ತಿತ್ತು. ಇಂಥ ಸ್ಥಿತಿಯಲ್ಲಿದ್ದ ಶಿವ್ಯಾನನ್ನು ಕಂಡು ಫಕೀರಪ್ಪನ ಕಳ್ಳಿಗೆ ಬೆಂಕಿ ಬಿದ್ದಂಗಾಯಿತು. ಆ ಗಳಿಗೆಯಲ್ಲಿ, ದುಃಖ ತಡೀಲಾರದೆ ಒಳಗೊಳಗೆ ಮರುಗಿದ. ಆ ಮರುಗುವಿಕೆ ಯಿಂದಾಗಿ ಹಂಗೇ ಶಿವ್ಯಾನನ್ನು ಕಣ್ತುಂಬಿಕೊಂಡು ಕುಂತ.

....ಶಿವ್ಯಾನ ಮ್ಯಾಲೆ ಫಕೀರಪ್ಪನಿಗೆ ಭಾಳಷ್ಟು ಪ್ರೀತಿ ಇತ್ತು. ಅವುನ ಕಂಡ್ರ ಸಾಕು... ಜೀವಬಿಡ್ತಿದ್ದ. ಶಿವ್ಯಾ, ಏನs ಕೇಳಿದ್ರೂ ಫಕೀರಪ್ಪ ಇಲ್ಲಂತಿರ್ಲಿಲ್ಲ. ಅವುನಿಗೆ, ಆಗಾಗ ಕರೆಪ್ಪನ ಕಿರಾಣಿ ಅಂಗಡ್ಯಾಗಿನ ಚಾಕ್ಲೇಟು, ಲೇಮನ್ ಗೋಳೆ, ಬಟಗಡ್ಲಿ, ಹುರಕಡ್ಲಿ... ಅಂತೇಳಿ ಏನೆಲ್ಲ ತಿನ್ಸು ಕೊಡಿಸ್ತಿದ್ದ. ಹಂಗs ಹಬ್ಬ-ಹರಿದಿನ್ದಾಗ ನಿರವಾಸೆರ ಅರಿವಿ ಅಂಗಡ್ಯಾಗ ಚೆಂದನು ಹೊಸ ಬಟ್ಟೆ ಕೊಂಡು ತಂದು, ದಾದಾಪೀರ ಟೇಲರನತ್ರ ಅಂಗಿ, ಚೆಡ್ಡಿ ಹೊಲಿಸಿ ಕೊಡ್ತಿದ್ದ. ಆಗೆಲ್ಲ, ಶಿವ್ಯಾ, ಹೊಸ ಅಂಗಿ, ಚೆಡ್ಡಿ ತೊಟ್ಕೊಂಡು, ಕೇರಿಯೊಳಗಿನ ತನ್ನ ವಾರಿಗೆಯ ಹುಡುಗರಿಗೆಲ್ಲ, 'ನಮ್ಮಪ್ಪ ಕೊಡಿಸ್ಯಾನು...' ಎಂದು ಹೆಮ್ಮೆಯಿಂದ ತೋರಿಸ್ತಿದ್ದ. ಅದನ್ನು ಕಂಡು ಫಕೀರಪ್ಪ ಒಳಗೊಳಗೆ ಬೀಗುತ್ತಿದ್ದ. ಇನ್ನು, ಫಕೀರಪ್ಪನ ಹೆಂಡ್ತಿ, ತಾರವ್ವ ಅಂತೂ ಶಿವ್ಯಾನ ಅಂಗೈಯಾಗ ಹಿಡದವ್ರಂಗ ನಾಜೂಕಿಲೆ ಜೋಪಾನ ಮಾಡಿದ್ದಳು. ಅವುನು, ಏಳೆಂಟು ವರ್ಷದವನಾಗೋ ತಂಕ ಅಂಗಾಲಿಗೆ ಮಣ್ಣು ಹತ್ತಲ್ದಂಗ ಹಗಲು ಹನ್ನೆರ್ಡು ತಾಸು ಬಗಲಾಗ ಹಾಕ್ಕೊಂಡನs ಕೆಲ್ಸ-ಬಗಸಿ ಮಾಡ್ತಿದ್ಳು. ಹಂಗs, ಶಿವ್ಯಾನ ಹೊಟ್ಟಿಗಿ ಬೇಕು-ಬ್ಯಾಡಾದ್ದನ್ನೆಲ್ಲ ಮಾಡಿ ಹಾಕ್ತಿದ್ಳು. ಹಿಂಗ್, ಅಕಿ ತಿನ್ಸುದು... ಉಣ್ಸುದು... ಮಾಡೂದ್ರಾಗನ ವ್ಯಾಳ್ಯೆ ಕಳೀತಿದ್ಳು. ಇನ್ನು, ಅವುನಿಗೇನರೆ ಉರಿ-ಥಂಡಿ ಅಂತ ಬಂದು, ಒಂದೀಟು ಮೈ ಬೆಚ್ಚಗಾದ್ರ ಸಾಕು... ತನ್ನದೇ ಮೈಗೆ ಜಡ್ಡು ಬಡದವ್ರಂಗ ಮಾಡ್ತಿದ್ಳು. ಆಗೆಲ್ಲ, ಶಿವ್ಯಾನ ಆಗಿಂದಾಗನs ಕುಲಕರ್ಣಿ ಡಾಕ್ಟರನ ದವಾಖಾನೆಗೆ ಕರ್ಕೊಂಡ್ಹೋಗಿ; ಸೂಜಿ ಚುಚ್ಚಿಸಿ, ಔಸುದ್ದಿ-ಗುಳಿಗಿ ತೆಗೆದುಕೊಂಡು ಬರ್ತಿದ್ಳು! ಅಂಥ ಮಮಕಾರ ಶಿವ್ಯಾನ್ಯಾಲೆ ತಾರವ್ವನಿಗಿತ್ತು! ಇದನ್ನೆಲ್ಲ ಕಂಡು ಕೇರಿಯೊಳಗಿನ ಜನರೆಲ್ಲ, "ಗಂಡ-ಹೆಂಡ್ತಿ ಇಬ್ಬರೂನು ಸೇರಿ, ತಮ್ಮ ಹೊಟ್ಟೀಲೆ ಹುಟ್ಟಿದ ಮಗನಿಗಿಂತಲೂ ಒಂದು ಗುಂಜಿ ಹೆಚ್ಚು ಅನ್ನೂವಂಗ ಜೋಪಾನ ಮಾಡ್ಲಿಕತ್ತಾರು, ನೋಡು..." ಎಂದು ಮಾತಾಡಿಕೊಳ್ಳುತ್ತಿದ್ದರು. ಆಗ, ಜನರ ಈ ಥರದ ಮಾತುಗಳನ್ನು ಕೇಳಿದಾಗ ಅವರಿಬ್ಬರಿಗೂ ಮುಜುಗರವಾಗುತ್ತಿತ್ತು. ಆಗೆಲ್ಲ ಅವರು, "ಇದ್ರಾಗ ನಮ್ದೇನೈತಿ... !? ಎಲ್ಲನೂ ಆ ಹಾರೀಗೇರಿ ಹನ್ಮಪ್ಪನ ಇಚ್ಚೆ..." ಎಂದು ಹೇಳುತ್ತಿದ್ದರು. ಅದು, ಒಂದು ರೀತಿಲೆ ಖರೇನೂ ಇತ್ತು!

ಫಕೀರಪ್ಪ, ಮದಿವಿ, ಮುಂಜಿ, ದೊಡ್ಡ ದೊಡ್ಡ ಮನೆತನದಾಗ ನಡೆಯೋ ಕುಪ್ಪಸದ ಕಾರ್ಯ ಮತ್ತು ದೇವರಕೊಂಡಪ್ಪಗೋಳ ಮಠದಾಗ ಪ್ರತಿವರ್ಷ ಶಿವರಾತ್ರಿಯೊಳಗೆ ನಡೆಯೋ ಸಪ್ತಾಹಕ್ಕೆಂದು ಮಠಕ್ಕೆ ಬರುವ ಭಕ್ತರಿಗೆಂತ ಹಮ್ಮಿಕೊಳ್ಳುವ ಅನ್ನದಾಸೋಹ ಕಾರ್ಯಕ್ರಮಗಳಲ್ಲೆಲ್ಲ ಅಡುಗೆ ಕೆಲಸ ಮಾಡಲು ಹೋಗುತ್ತಿದ್ದರೆ, ತಾರವ್ವ, ಮಂದಿ ಹೊಲದಾಗ ಕಸ ತೆಗೀಲಿಕ್ಕೆ ಹೋಗುತ್ತಿದ್ದಳು. ಹಿಂಗಾಗಿ, ಅವರಿಬ್ಬರೂ ತಮಗೆ ದಕ್ಕಿದ್ದರಲ್ಲೇ ತಿಂದುಂಡು ಸುಖವಾಗಿದ್ದರು. ಆದರೆ, ಹಿಂಗ್ ಅವರಿಬ್ಬರ ಬದುಕು ಅಂಬೋದು ಥಲೂತಂಗಿ ನಡೆಯುತ್ತಿರುವ ಹೊತ್ತಲ್ಲೇ ಫಕೀರಪ್ಪನಿಗೆ ಇನ್ನಿಲ್ಲದ ಸಂಕಟವೊಂದು ಎದುರಾಗಿತ್ತು! ಅದು, ಚನ್ನಬಸಪ್ಪ ಸಾವ್ಕಾರನ ವಿಷಯದಾಗ ಶಿವ್ಯಾ, ಅದ್ಹೆಂಗೋ ಫಕೀರಪ್ಪನ ಕುತ್ತಿಗೆಗೆ ಉರ್ಲು ತಂದಿಟ್ಟಿದ್ದ!...

ಇದೆಲ್ಲ, ಫಕೀರಪ್ಪ ಮೈಮರೆತು ಕುಂತಾಗ ಅರಿವಿಗೆ ಬಂದು ಸಂಕಟವಾಯಿತು. ಆ ಸಂಕಟದಲ್ಲಿ ಆತನ ಕಣ್ಣುಗಳು ತುಂಬಿ ಬಂದವು. ಆ ಕ್ಷಣದಲ್ಲಿ, ಆತನ ಎದೆನೋವಿನಿಂದ ತೊಯ್ದು ತೊಪ್ಪೆಯಾಗಿತ್ತು. ಮನಸ್ಸು ಎತ್ತೆತ್ತಲೋ ಹರಿದಾಡುತ್ತಿತ್ತು. ಆಗಲೇ, ದೀರ್ಘವಾದ ನಿಟ್ಟುಸಿರುಬಿಡುತ್ತ, ತುಂಬಿಬಂದ ಕಣ್ಣೀರನ್ನು ಒರೆಸಿಕೊಂಡು, ಶೂನ್ಯದಲ್ಲಿ ದೃಷ್ಟಿ ನೆಟ್ಟು ಕುಂತ.

✶ ✶ ✶

ಇದುವರೆಗೂ, ಫಕೀರಪ್ಪನು ದಾಟಿಬಂದ ಬದುಕಿನಲ್ಲಿ ಆತನ ಪಾಲಿಗೆ ನನ್ನವರು ಅಂತ ಹೇಳಿಕೊಳ್ಳಲು ಉಳಿದುಕೊಂಡಿದ್ದ ಹಡೆದವ್ವ ದೇವಕಿಯ ಕಣ್ಮುಂದೆಯೇ ಫಕೀರಪ್ಪನ ಕೈಯಿಂದ, ಆಗಷ್ಟೇ ಮೈನೆರೆದು ನಿಂತಿದ್ದ ತಾರವ್ವನು ಗುಳದಾಳಿ ಕಟ್ಟಿಸಿಕೊಂಡು, ಮುಂದಿನ ಒಂದೆರಡು ವರ್ಷಗಳ ನಂತರದಲ್ಲಿ ಹೊಸದಾಗಿ ನಡೆಯಲೆಂದು ಗಂಡನ ಮನೆಗೆ ಬರುವ ಹೊತ್ತಿಗೆಲ್ಲ ಫಕೀರಪ್ಪನ ಅವ್ವ ದೇವಕಿಯು ತೀರಿಕೊಂಡು ಅದಾಗಲೇ ಐದಾರು ತಿಂಗಳಾಗಿತ್ತು. ಹಿಂಗಾಗಿ, ಇನ್ನೂ ತನ್ನವ್ವನ ಅಗಲಿಕೆಯ ದುಃಖದಲ್ಲಿದ್ದ ಫಕೀರಪ್ಪನಿಗೆ ಕುಂತಲ್ಲಿ, ನಿಂತಲ್ಲಿ, ದೇವಕಿಯ ನೆನಪುಗಳೇ ನುಗ್ಗಿಬಂದು ಅನಾಥ ಪ್ರಜ್ಞೆಯ ಭಾವ ಆವರಿಸಿಕೊಂಡುಬಿಟ್ಟಿತ್ತು. ಈ ಕಾರಣವಾಗಿ, ಸದಾ ಉಸಿರಾಡೊ ಗೊಂಬೆಯಂತಾಗಿ, ತನ್ನದೇ ಲೋಕದಲ್ಲಿರುತ್ತಿದ್ದ ಆತನನ್ನು ಸಂಭಾಳಿಸುವುದರ ಜೊತೆಗೆ ಸಂಸಾರವನ್ನು ಮುನ್ನಡೆಸುವ ಜವಾಬ್ದಾರಿಯೂ ಸಹ ಆ ಹೊತ್ತಲ್ಲಿ ಹೊಸಮಲಗಿತ್ತಿಯಾಗಿದ್ದ ತಾರವ್ವನ ಹೆಗಲೇರಿ ಬಿಟ್ಟಿತು! ಆದರೆ, ಲೌಕಿಕ ಪ್ರಪಂಚದ ಬಗ್ಗೆ ಅರಿವು ಇನ್ನೂ ಆಗಿರದಿದ್ದ ಆಕೆಗೆ, ಇದನ್ನೆಲ್ಲ ಹೇಗೆ ನಿಭಾಯಿಸುವುದು ಎಂಬ ಚಿಂತೆ ಇನ್ನಿಲ್ಲದಂಗೆ ಕಾಡುತ್ತಿತ್ತು. ಈ ತೆರನಾಗಿ ಕಾಡುತ್ತಿದ್ದ ಚಿಂತೆ ಯಿಂದಾಗಿಯೇ ಆಕೆ, ಹಾರೀಗೇರಿ ಹನುಮಪ್ಪನಲ್ಲಿ, "ನಮ್ಮ ಸಂಸಾರನ್ನ ಸರಿಯಾಗಿ ನಡೆಸಪ್ಪೊ, ತಂದೆ..." ಎಂದು ದಿನಾಲೂ ಕೈ ಮುಗಿದು ಬೇಡಿಕೊಳ್ಳುತ್ತಿದ್ದಳು. ಫಕೀರಪ್ಪನು ಕ್ರಮೇಣ ತನ್ನವ್ವ ದೇವಕಿಯ ನೆನಪುಗಳಿಂದ ಹೊರಬಂದು, ಬದುಕಿನತ್ತ ಮುಖ ಮಾಡುವುದರ ಮೂಲಕ ತಾರವ್ವನಿಗೆ ನೆಮ್ಮದಿಯನ್ನು ತಂದಿದ್ದ. ಆ ಸಂದರ್ಭದಲ್ಲಿ, ಹೊಟ್ಟೆಪಾಡಿಗಾಗಿ ಮದಿವಿ-ಮುಂಜಿ, ದೊಡ್ಡ ದೊಡ್ಡ ಮನೆತನದಾಗ ನಡೆಯೋ ಕುಪ್ಪಸದ ಕಾರ್ಯ ಮತ್ತು ದೇವರಕೊಂಡಪ್ಪಗೋಳ ಮಠದಾಗ ಪ್ರತಿವರ್ಷ ಶಿವರಾತ್ರಿಯೊಳಗೆ ನಡೆಯೋ ಸಪ್ತಾಹಕ್ಕೆಂದು ಮಠಕ್ಕೆ ಬರುವ ಭಕ್ತರಿಗೇಂತ ಹಮ್ಮಿಕೊಳ್ಳುವ ಅನ್ನದಾಸೋಹ ಕಾರ್ಯಕ್ರಮಗಳಲ್ಲೆಲ್ಲ ಅಡುಗೆ ಕೆಲಸ ಮಾಡುತ್ತಿದ್ದ ಫಕೀರಪ್ಪ ಮತ್ತೇ ಅದೇ ಕೆಲಸದಲ್ಲಿ ತೊಡಗಿಸಿಕೊಂಡರೆ, ಇತ್ತ, ತಾರವ್ವ ಹೊಲದಾಗ ಕಸ ತೆಗೀಲಿಕ್ಕೆ ಹೊರಟಳು. ಹಿಂಗಾಗಿ, ಇದ್ದುದರಲ್ಲೇ ತಿಂದುಂಡು ಸುಖವಾಗಿರುವುದನ್ನು ರೂಢಿಸಿಕೊಂಡ ಅವರಿಬ್ಬರ ಬದುಕು ಒಂದು ನೆಲೆಗೆ ಬಂದು ನಿಲ್ಲುವುದರ ಮೂಲಕ ಅವರಿಬ್ಬರಿಗೂ ಸಂತಸವನ್ನುಂಟುಮಾಡಿತ್ತಾದರೂ ಮದಿವಿಯಾಗಿ ಇಷ್ಟು ವರ್ಷಗಳಾದರೂ ತಮಗೆ

ಮಕ್ಕಳಾಗಲಿಲ್ಲವಲ್ಲ... ಎಂಬ ಚಿಂತೆ ಮಾತ್ರ ಫಕೀರಪ್ಪ ಮತ್ತು ತಾರವ್ವನನ್ನು ಸದಾ ಕಾಡುತ್ತಲೇ ಇತ್ತು! ಈ ಕಾರಣವಾಗಿಯೇ, ಅವರಿಬ್ಬರೂ ಕಂಡ ಕಂಡ ದೇವರಿಗೆಲ್ಲ ಹರಕೆ ಹೊತ್ತು ಬೇಡಿಕೊಂಡರಾದರೂ ಕೊನೆಗೂ ಮಕ್ಕಳಾಗದಿದ್ದಾಗ ವಿಧಿಯಿಲ್ಲದೆ ಅದರ ಆಶೆಯನ್ನೇ ಬಿಟ್ಟು ಕುಂತರು. ಆಗಲೇ, ಅದೊಂದು ದಿನ ಬೆಳ್ಳಂಬೆಳಿಗ್ಗೆಯೇ ಊರಾಚೆ ಇರೋ ಸೌದೇರ ಬಸವ್ವನ ತಿಪ್ಪೆಯಲ್ಲಿ ಯಾರೋ ಆಗಷ್ಟೇ ಹುಟ್ಟಿದ ಹಸುಗೂಸನ್ನು ಹಾಕಿ ಹೋಗಿರುವ ಸುದ್ದಿ ಫಕೀರಪ್ಪ ಮತ್ತು ತಾರವ್ವನ ಕಿವಿಯ ಮೇಲೆ ಬೀಳಲು ಆ ಹಸುಗೂಸನ್ನು ನೋಡಲು ಓಡೋಡಿ ಹೋಗಿದ್ದರು. ಆಗ, ಅಲ್ಲಿ, ಸೌದೇರ ಬಸವ್ವನ ತಿಪ್ಪೆಯ ಮುಂದೆ ನೆರೆದಿದ್ದ ಜನರ ಗುಂಪನ್ನು ತೂರಿಕೊಂಡು ಅವರಿಬ್ಬರೂ ಮುಂದೆ ಹೋಗಿ ನೋಡಿದಾಗ, ತೆಳು ಬಟ್ಟೆಯ ಮೇಲೆ ಮಲಗಿದ್ದ, ಮೈತುಂಬ ರಕ್ತ ಮೆತ್ತಿದ ಆ ಹಸುಗೂಸು ಹಸಿವಿನಿಂದ ಒಂದೇ ಸವುನೆ ಅಳುತ್ತಿತ್ತು. ಅದ ಕಂಡು ಫಕೀರಪ್ಪ ಮತ್ತು ತಾರವ್ವ ಮಮ್ಮಲ ಮರುಗಿದರು. ಇದರ ನಡುವೆ ಅಲ್ಲಿ ನೆರೆದಿದ್ದ ಜನರೆಲ್ಲ ಆ ಹಸುಗೂಸಿಗಾಗಿ ಕ್ಷಣಹೊತ್ತು ಮರುಕ ವ್ಯಕ್ತಪಡಿಸಿ, ತಮ್ಮ ಪಾಡಿಗೆ ತಾವು ಹೋಗುತ್ತಿದ್ದರಾದರೂ ಆ ಹಸುಗೂಸಿನ ವಿಚಾರದಲ್ಲಿ ಯಾವೊಂದು ನಿರ್ಧಾರವನ್ನು ಕೈಗೊಳ್ಳದಿರುವುದು ಮಾತ್ರ ಫಕೀರಪ್ಪನಿಗೂ ಮತ್ತು ತಾರವ್ವನಿಗೂ ಹೇಸಿಗೆ ಹುಟ್ಟಿಸಿತ್ತು. ಅಂಥದರಲ್ಲಿ, ಅತ್ತ ಜನರೆಲ್ಲ ನಿದನಿದಾನವಾಗಿ ಚದುರತೊಡಗಿದರೆ ಇತ್ತ, ಹೊತ್ತೇರಿದಂಗೆ ಬಲಿಯುತ್ತಿದ್ದ ಬಿಸಿಲನ್ನು ತಡೆದು ಕೊಳ್ಳಲಾಗದೆ ಆ ಹಸುಗೂಸು ಮಲಗಿದಲ್ಲೇ ಕಣ್ಮುಚ್ಚಿಕೊಂಡು ಚಡಪಡಿಸುತ್ತಿತ್ತು. ಇದನ್ನೆಲ್ಲ ಕಣ್ಣಿಂದ ನೋಡಲಾಗದ ಫಕೀರಪ್ಪನು, ತನ್ನ ಮನದೊಳಗೆ ಆಗಲೇ ಒಂದು ನಿರ್ಧಾರಕ್ಕೆ ಬಂದವರಂತೆ, ಆ ಹಸುಗೂಸಿನ ಮೇಲೆ ದೃಷ್ಟಿನೆಟ್ಟು, 'ಲೇ, ತಾರಿ, ಕೂಸಿನ್ನ ತಗೊ...! ನಾವಃ ಜೋಪಾನ ಮಾಡೂನಂತ! ಮುಂದ್, ಅದರ ಹಣೆಬರ್ದಾಗ ಏನೈತೊ... ಅದು ಆಗ್ತೈತಿ...' ಎಂದು ಅಂದವನೆ ಬಿರಬಿರನೆ ಮನೆಯತ್ತ ಹೆಜ್ಜೆ ಹಾಕಿದ. ಆ ಹೊತ್ತಲ್ಲಿ, ಫಕೀರಪ್ಪ ಅಂದ ಮಾತುಗಳಿಂದ ಒಳಗೊಳಗೆ ಮುದಗೊಂಡ ತಾರವ್ವ, ತಟ್ಟನೆ ಆ ಹಸುಗೂಸನ್ನು ಎತ್ತಿಕೊಂಡವಳೆ ಫಕೀರಪ್ಪನ ಹಿಂದೆ ಅದೇ ವೇಗದಲ್ಲಿ ಹೆಜ್ಜೆ ಹಾಕತೊಡಗಿದ್ದಳು.

* * *

ಅಂದು, ಸೌದೇರ ಬಸವ್ವನ ತಿಪ್ಪೆಯಲ್ಲಿ ಸಿಕ್ಕಿದ್ದ ಆ ಹಸುಗೂಸು ಮುಂದಿನ ಎಂಟ್ಹತ್ತು ವರ್ಷಗಳಲ್ಲಿ ಫಕೀರಪ್ಪ ಮತ್ತು ತಾರವ್ವನ ಆರೈಕೆಯಲ್ಲಿ ಬೆಳೆದು ದೊಡ್ಡವನಾಗುವುದರ ಮೂಲಕ ಅವರಿಬ್ಬರಿಗೂ ಮಕ್ಕಳಿಲ್ಲವೆಂಬ ಕೊರತೆಯನ್ನು ತುಂಬಿದ್ದ. ಫಕೀರಪ್ಪನಂತೂ ತಾನಿನ್ನೂ, ತನ್ನವ್ವ ದೇವಕಿಯ ಹೊಟ್ಟೆಯಲ್ಲಿರುವಾಗಲೇ ಸತ್ತುಹೋಗಿದ್ದ ತನ್ನಪ್ಪ ಶಿವಪ್ಪನ ಹೆಸರನ್ನು ಆತನಿಗಿಟ್ಟು ಪ್ರೀತಿಯಿಂದ, 'ಶಿವಪ್ಪ... ಶಿವು... ಶಿವ್ಯಾ...' ಅಂತೆಲ್ಲ ಕರೆಯುತ್ತಿದ್ದ. ಆದರೆ, ರೂಢಿಯೊಳಗೆ ಶಿವ್ಯಾ... ಅಂತಲೇ ಹೆಚ್ಚಾಗಿ ಕರೆಯುತ್ತಿದ್ದನಾದ್ದರಿಂದ ಕೇರಿಯಲ್ಲಿರೊ ಜನರೂ ಸಹ ಹಂಗೇ ಕರೆಯುತ್ತಿದ್ದರು. ಇನ್ನು, ಶಿವ್ಯಾನ್ಮ್ಯಾಲೆ ಫಕೀರಪ್ಪನಿಗೂ ಮತ್ತು ತಾರವ್ವನಿಗೂ ಅದಾವ ಪರಿ ಪ್ರೀತಿ ಇತ್ತೆಂದರೆ... ಅವುನು ಏನಃ ಕೇಳಿದ್ರೂ ಇಲ್ಲಂತಿರ್ಲಿಲ್ಲ. ಆತನಿಗೆ, ಬೇಕಾದ್ದು-ಬೇಡಾದ್ದನ್ನೆಲ್ಲ

ಸಾಕ್ಷ್ಯ ನುಡಿಯಿತು

# ಹೆಜ್ಜೆ ಗುರುತು






ಕಡಲ ತೀರದ
ಬೊಡ್ಡು ಮರ
ಇಲ್ಲೇ ನೋಡು ಗಂಟೆಗಟ್ಟಲೆ
ನಿಂತುಹೋಗಿದ್ದ
ಅವ,
ನನ್ನ ಚಿಗುರುಗಳ ನೇವರಿಸಿ
ಅತ್ತಿದ್ದ ಉಕ್ಕುವ ಅಲೆಗಳ
ತಬ್ಬಿ ಬಿಕ್ಕಿದ್ದ
ಊರಿದ ಹೆಜ್ಜೆಗಳ
ಮೇಲೆಯೇ ಹೆಜ್ಜೆಯೂರುತ್ತ
ಗಟ್ಟಿಯಾಗುವ ಬಯಕೆಗೆ
ಬರಿದಾಗುತ್ತಿದ್ದ
ನಾವುಗಳು ಸುಮ್ಮನೆ ದಿಟ್ಟಿಸುತ್ತಿದ್ದೆವು
ಅವನಿಗೆ ಅಲೆದಾಡುವ
ಅವಸರವಿತ್ತು
ಬದುಕು ಕಟ್ಟುವ ಕಾಯಕಕ್ಕೆ
ಹೆಜ್ಜೆ ಕೀಳುವ ಅನಿವಾರ್ಯವಿತ್ತು
ಹೊರಡುವ ಮುನ್ನ ನನ್ನೊಳಗಣ ಉದುರು
ಎಲೆಯ ಜೇಬಿನಲ್ಲಿ
ಹೆಕ್ಕಿಕೊಂಡ,
ಕಾಲಿಗೆ ಅಂಟಿದ ಜಿನುಗು ಮರಳ
ಕಣ್ಣಿಗೆ ಒತ್ತಿಕೊಂಡ
ಬಿಸಿಲು ಬಾಗಿ ಬಿಕ್ಕುವ ಮುನ್ನ
ಕನಸುಗಳ ಹೂ ಬುಟ್ಟಿಯ
ಉಸುಕಿನ ಮುಸುಕಿನೊಳಗೆ
ಹೂತಿಟ್ಟು ಹೊರಟೇಬಿಟ್ಟ
ಸಾಂತ್ವನಕ್ಕೆ ಪದ ಹುಡುಕಿ ನಾವು
ಮರಗಟ್ಟಿದೆವು!
ಹೋಗುವವನ ಹಿಡಿದಿಟ್ಟುಕೊಳ್ಳದ
ಸಮಯಕ್ಕೆ ಸಾಕ್ಷಿಯಾದೆವು
ಈಗ ನೀನು ಬಂದಿದ್ದೀಯೆ
ಅಪ್ಪನ ಹೆಜ್ಜೆ ಹೆಕ್ಕಲು
ಹೂತಿಟ್ಟ ಹೂ ಬುಟ್ಟಿಗಳ
ಜಾಡು ಜೀಕಲು
ಈಗದು ಸಾಧ್ಯವಿಲ್ಲ
ಮಗಳೇ!
ಹೂತ ಕನಸುಗಳಿಗೆ
ಜೀವ ಕೊನರುವುದಿಲ್ಲ
ಜಗದ ಕಣ್ಣಿನಲಿ ಗುರುತು
ಉಳಿಯುವುದಿಲ್ಲ!

**ದೀಪ್ತಿ ಭದ್ರಾವತಿ**
'ಸ್ನಿಗ್ಧ' ನಿಲಯ, ೩ನೇ ತಿರುವು ಬಲಭಾಗ
ಶಂಕರ ಮಠ ರಸ್ತೆ, ಭದ್ರಾವತಿ

ಕೊಡಿಸುತ್ತಿದ್ದರು. ಶಿವ್ಯಾ, ಎಂಟ್ಹತ್ತು ವರ್ಷದ ಹುಡುಗನಾಗಿದ್ದರೂ ಸಹ ಈಗಲೂ ಸಹ ತಾರವ್ವ, ಆತನಿಗೆ ತುತ್ತು ಮಾಡಿ ಉಣ್ಣಿಸುತ್ತಿದ್ದಳು. ಆತ, ಒಂದೀಟು ಮಾರಿ ಸಪ್ಪಗ ಮಾಡಿದ್ದು ನೋಡಿದರೆ ಸಾಕು... ತಾರವ್ವನ ಗಂಟಲೊಳಗೆ ಕೂಳು ಇಳೀತಿರ್ಲಿಲ್ಲ. ಆಗೆಲ್ಲ, ಆಕೆ, 'ಶಿವಪ್ಪ , ಶಿವು... ನನ್ನ ಮಗನ... ಹಿಂಗ್ಯಾಕ ಸಪ್ಪಗ ಮಾರಿ ಮಾಡಿದ್ದಿ !? ಮೈಯಾಗ ಹುಷಾರಿಲ್ಲೇನು, ನಿನ್ಗ ? ದವಾಖಾನಿಗಿ ಹೋಗುನೆನು...!?' ಎಂದು ಆತನ ಮೈಮೇಲೆಲ್ಲ ಕೈ ಸವರಾಡುತ್ತ ಕೇಳುತ್ತಿದ್ದಳು. ಅಲ್ಲದೇ, ಫಕೀರಪ್ಪನಂತೂ ಶಿವ್ಯಾನ ಕಣ್ಣಾಗ ಕಣ್ಣಿಟ್ಟು ಕಾಯುತ್ತಿದ್ದ. ಒಂದು ವೇಳೆ, ಶಿವ್ಯಾನ ಮಾರಿ ಅರೆಕ್ಷಣ ಆತನ ಕಣ್ಣಿಗೆ ಬೀಳದಿದ್ರ... ನೀರೊಳಗಿನ ಮೀನನ್ನು ಹೊರತೆಗೆದು ಎಸೆದವರಂಗೆ ಒಂದೇ ಸವುನೆ ಚಡಪಡಿ ಸುತ್ತಿದ್ದ. ಆತ, ಶಿವ್ಯಾನ ಅದೆಷ್ಟು ಹಚ್ಚಿಕೊಂಡಿದ್ದನೆಂದರೆ ಅರೆ ಗಳಿಗೆಯೂ ಕೂಡ ಆತನನ್ನು ಬಿಟ್ಟು ಇರ್‍ತಿರ್ಲಿಲ್ಲ. ಹಿಂಗಾಗಿಯೇ, ಆತ ದೊಡ್ಡ ದೊಡ್ಡ ಕಾರ್ಯಕ್ರಮ ಗಳಲ್ಲಿ ಅಡುಗೆ ಕೆಲಸ ಮಾಡಲು ಹೋದಾಗಲೆಲ್ಲ ಶಿವ್ಯಾನನ್ನು ತನ್ನೊಂದಿಗೆ ಕರೆದುಕೊಂಡು ಹೋಗುತ್ತಿದ್ದ. ಇದು ಆತನಿಗೆ ಅಭ್ಯಾಸವಾಗಿ ಹೋಗಿತ್ತು. ಆದರೆ, ಇದೇ ಆತನಿಗೆ ಈಗ ಕುತ್ತು ತಂದೊಡ್ಡಿತ್ತು !

* * *

ಹಾರೀಗೇರಿ ಊರಿನಲ್ಲೇ ಶ್ರೀಮಂತ ಕುಳ ಎನಿಸಿ ಕೊಂಡಿದ್ದ ಚನ್ನಬಸಪ್ಪ ಸಾವ್ಕಾರನು, ತನಗಿದ್ದ ಇಬ್ಬರು ಮಕ್ಕಳಲ್ಲಿ ಹಿರಿಯ ಮಗನಾದ ರಮೇಶನ ಮದಿವಿ ಯನ್ನು ಈಗ ನಾಕಾರು ದಿನಗಳಿಂದೆ ಅದ್ದೂರಿಯಾಗಿ ನೆರವೇರಿಸಿದ್ದ. ಆ ಮದುವೆಯಲ್ಲಿ ಆತ ನೀರಿನಂಗೆ ಹಣ ಖರ್ಚು ಮಾಡಿದ್ದ. ಮದುವೆಯ ಜವಾಬ್ದಾರಿ ಯನ್ನು ಸಂಪೂರ್ಣವಾಗಿ ತಾನೇ ವಹಿಸಿಕೊಂಡಿದ್ದ. ಹಿಂಗಾಗಿ, ಹತ್ತಾರು ಚಟಗಳನ್ನು ಅಂಟಿಸಿಕೊಂಡು, ಆ ಚಟಗಳನ್ನು ಪೂರೈಸಿಕೊಳ್ಳಲು ಏನೆಲ್ಲ ಮಾಡಲು ತಯಾರಿದ್ದ ತನ್ನ ಕಿರಿಯ ಮಗ ಸುರೇಶನನ್ನು ಕಡೆಗಣಿಸಿ, ಮದುವೆಯಲ್ಲಿ ಸ್ವತಃ ಚನ್ನಬಸಪ್ಪ ಸಾವ್ಕಾರನೇ ಎಲ್ಲವನ್ನೂ ಮುಂದಾಗಿ ಮಾಡುತ್ತಿದ್ದ. ಮದುವೆಗೆಂದು, ಹನುಮಪ್ಪನ ಗುಡಿಯ ಪಕ್ಕದಲ್ಲಿರುವ ಕಾಯಿಪಲ್ಲೆ ಬಜಾರಿನ ಅಂಗಳದಲ್ಲಿ ದೊಡ್ಡದಾದ ವೇದಿಕೆಯನ್ನು ಹಾಕಿಸಿದ್ದ. ಆ ವೇದಿಕೆಯ ಮುಂದೆ, ಹಾಕಲಾಗಿದ್ದ ವಿಶಾಲವಾದ ಹಂದರದ ಕೆಳಗೆ ಮದಿವಿಗೆ ಬಂದವರಿಗೆಂದು ನೂರಾರು ಕುರ್ಚಿಗಳನ್ನು ಹಾಕಿಸಿದ್ದ. ಅಲ್ಲದೇ, ಅವರಿಗೆಲ್ಲ ಹಾಲುಗ್ಗಿ ಮತ್ತು ಮಸಾಲಿ ಅನ್ನದ ಅಡುಗೆ ಮಾಡಿಸಿದ್ದ. ಇದರ ಉಸ್ತುವಾರಿಯನ್ನು ಆತ, ಫಕೀರಪ್ಪನಿಗೆ ವಹಿಸಿದ್ದನಲ್ಲದೇ ಯಾವ ಕಾರಣಕ್ಕೂ ಅಡುಗೆ ಕಮ್ಮೀ ಬೀಳದಂಗೆ ನೋಡಿಕೊಳ್ಳಬೇಕೆಂದು ತಾಕೀತು ಮಾಡಿದ್ದ. ಅದಕ್ಕೇ, ಆ ದಿನ ಫಕೀರಪ್ಪನು ಬೆಳಿಗ್ಗೆ ಏಳುತ್ತಲೇ ಅಡುಗೆ ಮಾಡಲು ಮದಿವಿ ಹಂದರದತ್ತ ಹೋಗಿದ್ದ. ಆಗ, ಶಿವ್ಯಾ ಕೂಡ ಫಕೀರಪ್ಪ ನೊಂದಿಗೆ ಮದಿವಿ ಹಂದರದಾಗನs ಇದ್ದ.

ಇನ್ನು, ಮದಿವಿಯ ಸಂಭ್ರಮವಂತೂ ಹೇಳತೀರ ದಂಗಿತ್ತು. ಚನ್ನಬಸಪ್ಪ ಸಾವ್ಕಾರನ ಶ್ರೀಮಂತಿಕೆಯು ಹಾರೀಗೇರಿ ಊರ ಸುತ್ತಲಿನ ಹತ್ತಳ್ಳಿಗೆ ಗೊತ್ತಿತ್ತಾದ್ದರಿಂದ ಆ ಹಳ್ಳಿಗಳಲ್ಲಿನ ಜನರೆಲ್ಲರೂ ಅಂದು ಮದಿವಿಗೆ ಬಂದಿದ್ದರು. ಆ ದಿನ ಹಂದರದೊಳಗೆ ಕಾಲಿಡಲಿಕ್ಕೂ ಜಾಗ ಇಲ್ಲದಂಗ ಜನರು ತುಂಬ್ಕೊಂಡಿದ್ದರು. ಆ ಹೊತ್ತಲ್ಲಿ ಈ ಪರಿಯ ಜನರನ್ನು ಕಂಡು, ವೇದಿಕೆಯ ಮೇಲೆ, ಮದುಮಗನಾಗಿದ್ದ ರಮೇಶನ ಪಕ್ಕದಲ್ಲಿ ನಿಂತುಕೊಂಡಿದ್ದ ಚನ್ನಬಸಪ್ಪ ಸಾವ್ಕಾರನ ಎದೆತುಂಬಿ ಬಂದಿತ್ತು. ಇದರಿಂದಾಗಿ, ಆತ ನಿಂತಲ್ಲಿಂದಲೇ ನೆರೆದ ಜನರತ್ತ ಕೈಬೀಸಿ, ಅವರೆಲ್ಲರ ಉಪಸ್ಥಿತಿಗೆ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದ. ಆದರೆ, ಆ ಗಳಿಗೆಯಲ್ಲಿ ಆತನ ಕಿರಿಯ ಮಗ ಸುರೇಶನು, ಯಾರಿಗೂ ಬೇಡದವನಂತನಾಗಿ, ಮುಖ ಒಣಗಿಸಿಕೊಂಡು ವೇದಿಕೆಯ ಮೇಲೆ ಆತನ ಪಕ್ಕದಲ್ಲಿ ಸುಳಿದಾಡುತ್ತಿದ್ದ. ಇದು, ಚನ್ನಬಸಪ್ಪ ಸಾವ್ಕಾರನಿಗೆ ಸಿಟ್ಟು ತರಿಸಿತ್ತಾದರೂ ಆ ಹೊತ್ತಲ್ಲಿ ಏನೂ ಮಾಡಲಿಕ್ಕೆ ಬರದಂಗಿತ್ತು. ಈ ಎಲ್ಲ ಕ್ರಿಯೆಗಳು ತಮ್ಮ ಪಾಡಿಗೆ ತಾವು ಎಂಬಂತೆ ನಡೆಯುತ್ತಿರುವಾಗಲೇ ಮುಹೂರ್ತ ಸಮಯ ಬರುತ್ತಿದ್ದಂಗೆ ಪುರೋಹಿತರ ಮಂತ್ರ ಘೋಷಗಳ ನಡುವೆ ಹಂದರದಲ್ಲಿ ನೆರೆದ ಜನರೆಲ್ಲ ವಧು-ವರರ ಮೇಲೆ ಅಕ್ಕಿ ಕಾಳು ಹಾಕಿ; ಊಟಕ್ಕೆ ಹೋಗುವವರು ತಾತ್ಕಾಲಿಕವಾಗಿ ನಿರ್ಮಿಸಿದ ಅಡುಗೆ ಕೋಣೆಯತ್ತ ಹೆಜ್ಜೆ ಹಾಕತೊಡಗಿದರೆ, ಆಯೇರಿ ಕೊಡುವವರು ವೇದಿಕೆಯ ಮೇಲೇರಿ ಬಂದು ವಧು-ವರರಿಗೆ ಆಯೇರಿ ಕೊಡತೊಡಗಿದರು. ಆಗ, ಅಲ್ಲೇ ನಿಂತಿದ್ದ ಚನ್ನಬಸಪ್ಪ ಸಾವ್ಕಾರನು ಮದಿವಿಗೆ ಬಂದವರು ಮಧುಮಗ ರಮೇಶನಿಗೆ ನೀಡಿದ ಆಯೇರಿ ಸಾಮಾನುಗಳನ್ನು ಆತನಿಂದ ಪಡೆದುಕೊಂಡು ತನ್ನ ಪಕ್ಕದಲ್ಲಿ ಇಡತೊಡಗಿದ್ದ. ಆಗ ಫಕೀರಪ್ಪನ ಮಗ ಶಿವ್ಯಾ, ವೇದಿಕೆಯ ಪಕ್ಕದಲ್ಲಿ ನಿಂತುಕೊಂಡು ಮದುವೆಯ ಸಂಭ್ರಮವನ್ನು ಬೆರಗುಗಣ್ಣಿನಿಂದ ನೋಡುತ್ತ ನಿಂತಿದ್ದ. ಇದೇ ಹೊತ್ತಲ್ಲಿ, ಅತ್ತ ವೇದಿಕೆಯ ಮೇಲೆ ಚನ್ನಬಸಪ್ಪ ಸಾವ್ಕಾರನ ಹತ್ತಿರದ ಸಂಬಂಧಿ ಯೊಬ್ಬರು ತಾಮ್ರದ ಹಂಡೆಯೊಂದನ್ನು ಮಧುಮಗ ರಮೇಶನಿಗೆ ಆಯೇರಿ ಮಾಡಲು ಚನ್ನಬಸಪ್ಪ ಸಾವ್ಕಾರನು ಅದನ್ನು ರಮೇಶನಿಂದ ಪಡೆದುಕೊಂಡು ತನ್ನ ಪಕ್ಕದಲ್ಲಿರಿಸಿಕೊಂಡ. ಆ ಕ್ಷಣದಲ್ಲಿ, ಆ ತಾಮ್ರದ ಹಂಡೆಯನ್ನು ಕಂಡದ್ದೇ ವೇದಿಕೆಯ ಕೆಳಗೆ ನಿಂತು ಕೊಂಡಿದ್ದ ಶಿವ್ಯಾನೊಳಗೆ ಕುತೂಹಲ ಗರಿಗೆದರ ತೊಡಗಿತು. ತನ್ನ ಜೀವಮಾನದಲ್ಲೇ ಕೇವಲ ಚರಿಗೆ-ಕೊಡಗಳನ್ನಷ್ಟೇ ನೋಡಿದ್ದ ಆತನಿಗೆ ಆ ಹಂಡೆಯನ್ನು ಹತ್ತಿರದಿಂದ ನೋಡಬೇಕೆನಿಸಿತು. ಅದಕ್ಕೇ, ಆತ ತಟ್ಟನೆ ವೇದಿಕೆಯನ್ನೇರಿ ಹೋದವನೆ ಆ ಹಂಡೆಯನ್ನು ಮುಟ್ಟಿ ನೋಡಲಾರಂಭಿಸಿದ. ಆಗ, ಅಲ್ಲೇ ನಿಂತಿದ್ದ ಚನ್ನಬಸಪ್ಪ ಸಾವ್ಕಾರನಿಗೆ ಅದನ್ನು ಕಂಡು ಸಿಟ್ಟು ಉಕ್ಕೇರಿ ಬಂತು. ಅದೇ ಸಿಟ್ಟಿನಲ್ಲಿ ಆತ, 'ಲೇ, ಇಲ್ಲೇನು ಮಾಡ್ಲಿಕತ್ತೀಲೆ ? ಇಲ್ಲ್ಯಾರ ಬರ್‍ಲಿಕ್ಕೇಳಿದ್ರಲೆ, ನಿನ್ಗ !? ಕೆಳಗಿಳೀ ಮೊದ್ಲು...' ಎಂದು ಬೈದು, ರಟ್ಟೆ ಹಿಡಿದು ಜೋರಾಗಿ ನೂಕಿದ. ಇದರಿಂದಾಗಿ, ಆಯತಪ್ಪಿ ವೇದಿಕೆಯ ಮೇಲಿಂದ ಕೆಳಗೆ ಬಿದ್ದ ಶಿವ್ಯಾ, ಜೋರಾಗಿ ದನಿ ತೆಗೆದು ಅಳಲಾರಂಭಿಸಿದ. ಆಗ, ಇದೆಲ್ಲವನ್ನು ನೋಡುತ್ತ ಹಂದರದಲ್ಲಿ ಮುಂದಿನ ಕುರ್ಚಿಯಲ್ಲಿ ಕುಂತಿದ್ದ ಲಿಂಗಾಯತರ ಕೇರಿಯ ಸಂಗಪ್ಪನಿಗೆ ಕೆಡಕೆನಿಸಿತು. ಆದರೆ, ಚನ್ನಬಸಪ್ಪ ಸಾವ್ಕಾರನ ಎದುರಿನಲ್ಲಿ ಕುಂತ ಕುರ್ಚಿಯಿಂದ ಎದ್ದು ಹೋಗಿ ಶಿವ್ಯಾನನ್ನು ಸಮಾಧಾನಪಡಿಸುವುದಕ್ಕೆ ಹಿಂಜರಿದ. ಕೊನೆಗೆ, ಅತ್ತೂ... ಅತ್ತೂ... ಸುಸ್ತಾದ ಆತನನ್ನು ಯಾರೂ ಕೇಳದಾದಾಗ ಅಲ್ಲಿಂದ ಹೊರಟು ಹೋಗಿದ್ದ. ಆದರೆ, ಇದೇ ಘಟನೆ ಫಕೀರಪ್ಪನ ಕುತ್ತಿಗೆಗೆ ತಂದಿಟ್ಟಿತ್ತು !

* * *

ಚನ್ನಬಸಪ್ಪ ಸಾವ್ಕಾರನ ಮಗ, ರಮೇಶನ ಮದಿವಿ ಕಾರ್ಯ ಮುಗಿದು ಅದಾಗಲೇ ನಾಕಾರು ದಿನ ಗಳಾಗಿದ್ದವು. ಆದರೆ, ಮದಿವಿಗೆಂದು ದೂರದ ಊರು ಗಳಿಂದ ಬಂದಿದ್ದ ಹತ್ತಿರದ ಬಂಧುಗಳು ಇನ್ನೂ ಮನೆಯಲ್ಲಿ ಉಳಿದುಕೊಂಡಿದ್ದರಾದ್ದರಿಂದ ಚನ್ನಬಸಪ್ಪ ಸಾವ್ಕಾರನು, ತಮಗೆ ಆಯೇರಿ ಎಂದು ಬಂದಿದ್ದ ಸಾಮಾನುಗಳನ್ನು ಸರಿಯಾಗಿ ಗಮನಿಸಿರಲಿಲ್ಲ. ಅದಕ್ಕೇ, ಇಂದು ಬೆಳಿಗ್ಗೆ ಬಂಧುಗಳೆಲ್ಲ ತಮ್ಮ ತಮ್ಮ ಊರು ಗಳಿಗೆ ತೆರಳಿದ ಮೇಲೆ ಸಂಜೆ ಹೊತ್ತಲ್ಲಿ, ಮನೆಯಲ್ಲಿ ಎಲ್ಲರೂ ಇರುವಾಗಲೇ ಚನ್ನಬಸಪ್ಪ ಸಾವ್ಕಾರನು ಆಯೇರಿ ಸಾಮಾನುಗಳನ್ನು ಇಟ್ಟಿದ್ದ ಕೋಣೆಯನ್ನು ಹೊಕ್ಕು, ಹಂಗೇ ಒಂದೊಂದಾಗಿ ಎಲ್ಲವನ್ನೂ ಸೂಕ್ಷ್ಮವಾಗಿ ಗಮನಿಸತೊಡಗಿದ. ಆಗಲೇ, ಅಲ್ಲಿ ತನ್ನ ಸಂಬಂಧಿಕರೊಬ್ಬರು ಆಯೇರಿಯಾಗಿ ನೀಡಿದ್ದ ತಾಮದ್ರ ಹಂಡೆಯು ಕಾಣದಂತಾಗಲು ದಿಗಿಲಿಗೆ ಬಿದ್ದ. ಇದರಿಂದಾಗಿ, 'ತಾಮ್ರದ ಹಂಡೆ ಎಲ್ಲೋತು...!?' ಎಂದು ಯೋಚಿಸತೊಡಗಿದ. ಆದರೂ ಹೊಳೆಯದಾದಾಗ ಕೋಣೆಯಿಂದ ಹೊರಬಂದು ಮನೆಯವರನ್ನೆಲ್ಲ ವಿಚಾರಿಸಿದ. ಅವರು, 'ನಮ್ಮ ಕಣ್ಣಿಗೇನು ತಾಮ್ರದ ಹಂಡೆ ಕಂಡಿಲ್ಲ...!' ಎಂದಾಗ ಮತ್ತೇ ಚಿಂತೆಗೆ ಬಿದ್ದ. ಆ ಚಿಂತೆಯಿಂದಾಗಿ, ಆತನಿಗೆ ತಟ್ಟನೆ ಏನೋ ನೆನಪಾದಂತಾಗಿ, ಮನೆಯಿಂದ ಹೊರ ಬಂದವನೆ ದಾರಿಗಿಳಿದು, ಫಕೀರಪ್ಪನ ಮನೆಯತ್ತ ರಾವುಗಣ್ಣನ್ನು ಬಿಟ್ಟುಕೊಂಡು ಅವಸರವಸರ ವಾಗಿ ಹೆಜ್ಜೆ ಹಾಕತೊಡಗಿದ.

ಹೀಗೆ, ಚನ್ನಬಸಪ್ಪ ಸಾವ್ಕಾರನು ರೋಷಾವೇಷದಲ್ಲಿ ಹೆಜ್ಜೆ ಹಾಕುತ್ತ ಬಂದು, ಫಕೀರಪ್ಪನ ಗುಡುಸುಲಿನ ಮುಂದೆ ನಿಂತುಕೊಂಡ ಹೊತ್ತಲ್ಲಿ ಫಕೀರಪ್ಪನು, ಅಲ್ಲೇ ಅಂಗಳದಲ್ಲಿ ತಾರವ್ವ ಮತ್ತು ಶಿವ್ಯಾನೊಂದಿಗೆ ಮಾತಾಡುತ್ತ ಕುಂತಿದ್ದ. ಆಗ, ಅದಕಂಡು ಕುದ್ದು ಹೋದ ಚನ್ನಬಸಪ್ಪ ಸಾವ್ಕಾರನು, 'ಮಾಡೂದೆಲ್ಲ ಕಮಾಯಿ ಮಾಡಿ, ಅರೀದ ಮಳ್ಳರಂಗ ಹೆಂಗ ಕುಂತಾರ, ನೋಡು...' ಎಂದು ಮನದೊಳಗೆ ಅಂದುಕೊಳ್ಳುತ್ತ ಒಂದೆರಡು ಹೆಜ್ಜೆ ಮುಂದೆ ಬಂದವನೆ ತಾಮ್ರದ ಹಂಡೆಯ ವಿಚಾರದಲ್ಲಿ ಫಕೀರಪ್ಪನಿಗೆ ಬಾಯಿಗೆ ಬಂದಂಗೆ ಮಾತಾಡತೊಡಗಿದ. ಹಾಗೇ, ಮದಿವಿ ದಿನ ಆಯೇರಿಯಾಗಿ ಬಂದಿದ್ದ ತಾಮ್ರದ ಹಂಡೆಯನ್ನು ಶಿವ್ಯಾ ಕಳುವು ಮಾಡಿದ್ದಾನೆಂದೂ; ಆ ದಿನ ಅವುನು ಆ ತಾಮ್ರದ ಹಂಡೆಯ ಸುತ್ತಲೇ ಸುಳಿದಾಡು ತ್ತಿದ್ದನೆಂದೂ; ಅದನ್ನು ತಾನೂ ಕಣ್ಣಾರೆ ನೋಡಿರು ವೆನೆಂದೂ ಏರುದನಿಯಲ್ಲಿ ವಾದಿಸತೊಡಗಿದ. ಆಗ, ಆತನ ದನಿ ಕೇಳಿ, ಕೇರಿಯಲ್ಲಿರೊ ಜನರೆಲ್ಲ ಗುಂಪು ಗುಂಪಾಗಿ ಬಂದು ಫಕೀರಪ್ಪನ ಅಂಗಳದಲ್ಲಿ ನೆರೆದರು. ಆದರೆ, ಆ ಕ್ಷಣದಲ್ಲಿ ಹಿಂದು ಮುಂದು ಏನೂ ಗೊತ್ತಿರದಿದ್ದ ಫಕೀರಪ್ಪನು ಆತನ ಮಾತುಗಳಿಂದ

ವಿಚಲಿತನಾಗಿ ತೋಯಿಸಿಕೊಂಡ ಕಾಗೆಯಂತಾಗಿ, ಒಂದೂ ಮಾತಾಡದೆ ಸುಮ್ಮನೆ ಮಿಕ ಮಿಕ ನೋಡುತ್ತ ನಿಂತ. ಇದರಿಂದಾಗಿ, ಮತ್ತಷ್ಟು ವ್ಯಘ್ರನಾದ ಚನ್ನಬಸಪ್ಪ ಸಾವ್ಕಾರನು, ಬಾಯಿಗೆ ಬಂದಗೆಲ್ಲ ಫಕೀರಪ್ಪನನ್ನು ಬೈದು, ಕೊನೆಗೆ, 'ಲೇ, ಫಕೀರಪ್ಪ... ನಿನ್ಗ ನಾಳೆ ತಂಕ ಟೈಮ್ ಕೊಡ್ತೀನಿ. ನಿನ್ನ ಮಗ, ಶಿವ್ಯಾ ಮಾಡಿದ ತಪ್ಪು ಒಪ್ಕೊಂಡು... ನನ್ಗ ಆದ ಲುಕ್ಸಾನು ತುಂಬಿಕೊಡ್ಬೇಕು! ಇಲ್ದಿದ್ರ, ಪೋಲಿಸ ಟೇಸನ್ನಾಗ ಕಂಪ್ಲೇಂಟ್ ಕೊಡ್ತೀನಿ, ಹುಷಾರ್...' ಎಂದು ತಾಕೀತು ಮಾಡಿದವನೆ ಬಿರಬಿರನೆ ಅಲ್ಲಿಂದ ಹೊರಟುಹೋದ.

ಈ ತೆರನಾಗಿ ಚನ್ನಬಸಪ್ಪ ಸಾವ್ಕಾರನು ನೆರೆದು ನಿಂತಿದ್ದ ಕೇರಿಯ ಮಂದಿಯ ಮುಂದೆ ಬಾಯಿಗೆ ಬಂದಂಗೆ ಅಂದು ಹೋದಾಗ ಫಕೀರಪ್ಪ ದಿಗಿಲಿಗೆ ಬಿದ್ದ. ಆ ಗಳಿಗೆಯಲ್ಲಿ, ಆತನಿಗೆ ಇನ್ಮುಂದೆ ಕೇರಿಯಲ್ಲಿ ತಲೆಯೆತ್ತಿ ಓಡಾಡುವುದು ಹೇಗೆಂಬ ಚಿಂತೆ ಕಾಡತೊಡಗಿತು. ಹಾಗೇ, ಇದರ ನಡುವೆ ಶಿವ್ಯಾನ ಮೇಲೆ ಫಕೀರಪ್ಪನಿಗೆ ಈಗಲೂ ನಂಬಿಕೆ ಇತ್ತು. ತಪ್ಪು ಮಾಡಿಲ್ಲಂತ ಗೊತ್ತಿತ್ತು. ಆದರೆ, ಈಗಷ್ಟೆ ಚನ್ನಬಸಪ್ಪ ಸಾವ್ಕಾರನು, ಬಾಯಿಗೆ ಬಂದಗೆಲ್ಲ ಮಾತಾಡಿ, ಶಿವ್ಯಾ, ತಾಮ್ರದ ಹಂಡೆ ಕಳುವು ಮಾಡ್ಯಾನಂತ ಅಪವಾದ ಹೊರಸಿದ್ದ. ಹಂಗs, ತನಗಾದ ಲುಕ್ಸಾನು ನಾಳೆ ಒಳಗೆ ತುಂಬಿಕೊಡ್ಬೇಕಂತೇಳಿ ತಾಕೀತು ಮಾಡಿ ಹೋಗಿದ್ದ. ಇದೆಲ್ಲವೂ ಫಕೀರಪ್ಪನಿಗೆ ಮತ್ತೆ ಮತ್ತೆ ನೆನಪಾಗಿ ಆತನಿಗೆ ಶಿವ್ಯಾನ ಮೇಲೆ ಸಿಟ್ಟು ಉಕ್ಕೇರಿ ಬಂತು. ಹೀಗೆ, ಉಕ್ಕೇರಿ ಬಂದ ಸಿಟ್ಟಿನಲ್ಲಿ, ಅಲ್ಲೇ ನಿಂತಿದ್ದ ಶಿವ್ಯಾನ ರಟ್ಟೆ ಹಿಡಿದು, 'ಲೇ, ಶಿವ್ಯಾ, ಹಾದರಕ್ಕುಟ್ಟಿದವನೆ... ಇದೆಲ್ಲ ಬೇಕಿತ್ತೇನು, ನಿನ್ಗ !? ಹಿಂಗ್ಯಾಕ್ ಮಾಡಿದ್ದಿಲೆ !? ಆ ತಾಮ್ರದ ಹಂಡೆ ಎಲ್ಲಿಟ್ಟಿದ್ದಿ ಹೇಳ್ಲೇ...' ಎಂದು ಬೈಯುತ್ತ, ಅಂಗಳದಲ್ಲಿ ಬಿದ್ದಿದ್ದ ಕಬ್ಬಿನ ಮಡ್ಡಿನಿಂದ ದನಕ್ಕೆ ಬಡಿದವರಂಗೆ ಬಡಿಯತೊಡಗಿದ. ಆಗ, ಏಟು ತಾಳಲಾರದೇ ಶಿವ್ಯಾ, 'ನಾ, ಹಂಡೆ ತುಡುಗು ಮಾಡಿಲ್ಲಪ್ಪೋ... ನನ್ನ ಹೊಡಿಬ್ಯಾಡಪ್ಪೋ...' ಎಂದು ಚೀರಾಡಿ ಅಳತೊಡಗಿದಾಗ ಆತನ ಪಕ್ಕದಲ್ಲಿ ನಿಂತಿದ್ದ ತಾರವ್ವನ ಕಳ್ಳಿಗೆ ಬೆಂಕಿ ಬಿದ್ದಂಗಾಗಲು, 'ಹೊಡಿಬ್ಯಾಡ... ಎಲ್ಲೆರೆ ಕೊಂದಿಟ್ಟಿ ಕೂಸಿನ್ನ...' ಎಂದು ಬಾಯಿ ಬಡಿದುಕೊಂಡು ಅಳಲಾರಂಭಿಸಿದಳು. ಆ ಕ್ಷಣದಲ್ಲಿ, ಇದೆಲ್ಲವನ್ನೂ ನೋಡುತ್ತ ಗುಂಪಿನಲ್ಲಿ ನಿಂತಿದ್ದ ಅದೇ ಕೇರಿಯ ಸಂಗಪ್ಪನಿಗೆ ಕಳ್ಳುಗಳು ಕಿವುಚಿದಂಗಾಗಲು ಅವಸರದಲ್ಲಿ ಫಕೀರಪ್ಪನತ್ತ ಬಂದವನೆ, 'ಲೇ, ಫಕೀರಪ್ಪ... ನಿನ್ಗ ಬುದ್ಧಿ ಐತೆನು...!? ಶಿವ್ಯಾನ ಕೊಲ್ಬೇಕಂತ ಮಾಡಿದ್ದೆನು, ನೀನು...!? ಎಂದು ಸಿಟ್ಟಿನಲ್ಲಿ ಅಂದವನೆ ಆತನ ಕೈಯಿಂದ ಶಿವ್ಯಾನನ್ನು ಬಿಡಿಸಿಕೊಂಡ. ಹಾಗೇ, ಆತ, ಫಕೀರಪ್ಪನ ರಟ್ಟೆ ಹಿಡಿದು, ನಾಕ್ಹೆಜ್ಜೆ ಮುಂದೆ ಕರೆದುಕೊಂಡು ಬಂದು, 'ಫಕೀರಪ್ಪ, ಹಿಂದು ಮುಂದು ತಿಳೀದನs ಹುಡುಗನ ಹಂಗ್ ಬಡ್ಯೂದೈತೆನು !? ಆ ತಾಮ್ರದ ಹಂಡೆ ಯಾರು ತುಡುಗು ಮಾಡ್ಯಾರಂತ ನಿನ್ಗ ಗೊತ್ತೈತೆನು ? ಆದ್ರ, ನನ್ಗ ಗೊತ್ತೈತೆದು...! ಹೇಳ್ತಿನಿ, ಕೇಳು... ಆ ದಿನ, ಮದಿವ್ಯಾಗ... ನಾ, ಅಲ್ಲೇ ಹಂದರದಾಗ ಎಲ್ಲನೂ ನೋಡ್ಕಂತ ಮುಂದೆ ಕುಂತಿದ್ದೆ. ಆಗ, ಅಕ್ಕಿಕಾಳು ಬಿದ್ದಮ್ಯಾಲೆ ಆಯೇರಿ ಕೊಡ್ಲಿಕ್ಕೆಂತ ಎಲ್ರೂ ಮಂಟಪದ ಮ್ಯಾಲೆ ಏರಲಿಕ್ಹತ್ತಿದ್ರು. ಅದs ವ್ಯಾಳ್ಯೆದಾಗ, ನಿನ್ನ ಮಗ ಶಿವ್ಯಾ, ಅದೆಲ್ಲಿದ್ದ... ಅದ್ಹೆಂಗೊ ಅವುನೂ ಮಂಟಪದ ಮ್ಯಾಲೇರಿ ಹೋಗಿ... ಅಲ್ಲೇ ಪಕ್ಕದಾಗ, ಇಟ್ಟಿದ್ದ... ಬೀಗರು ಆಯೇರಿ ಅಂತ ಕೊಟ್ಟಿದ್ದ ತಾಮ್ರದ ಹಂಡೆ ನೋಡ್ಕಂತ ನಿಂತಿದ್ದ. ಅದನ್ನು ಕಂಡು, ಅಲ್ಲೇ ಮದುಮಗ ರಮೇಶನ ಹತ್ಯಾಕನs ನಿಂತಿದ್ದ ಚನ್ನಬಸಪ್ಪ ಸಾವ್ಕಾರನಿಗಿ ಸಿಟ್ಟು ಬಂದಿದ್ದೆ ದಡದಡ ಅಂತ ಬಂದು; ಶಿವ್ಯಾನ ಸಿಕ್ಕಂಗ ಬೈದು, ರಟ್ಟೆ ಹಿಡ್ದು ಕೆಳಗ ನೂಕಿದ ! ಇದ್ರಿಂದಾಗಿ, ಕೆಳಗ ಬಿದ್ದ ಶಿವ್ಯಾಗ ಪೆಟ್ಟು ಹತ್ತಿದಂಗಾಗಿ ಅಳ್ಕೊಂತ ಅಲ್ಲಿಂದ ಹೊಂಟ್ಹೋದ. ಆಗ, ನನ್ನ ಭಾಳ ಕೆಟ್ಟೆನಿಸ್ತು. ಆದ್ರ, ಏನ್ಮಾಡ್ಲಿ ? ಚನ್ನಬಸಪ್ಪ ಸಾವ್ಕಾರನು, ಅವುನು ಅಳ್ಕೊಂತ ಹೋಗೋದನ್ನs ನೋಡ್ಕಂತ ಹಂಗs ನಿಂತ್ಬುಟ್ಟಿದ್ದ. ಇದೆಲ್ಲ, ಇತ್ತ ನಡೀತಿದ್ದಾಗನs ಅತ್ತ ಚನ್ನಬಸಪ್ಪ ಸಾವ್ಕಾರನ ಕಿರಿ ಮಗ ಸುರೇಶ, ತನ್ನಪ್ಪನ ಕಣ್ತಪ್ಪಿಸಿ, ತಾಮ್ರದ ಹಂಡೆನ ಹೆಗಲ್ಮ್ಯಾಲೆ ಹೊತ್ಕೊಂಡು ಹೋಗೇಬಿಟ್ಟ ! ಆದ್ರ, ಇದೆಲ್ಲ ಗದ್ದಲದಾಗ ನನ್ನ ಬಿಟ್ರ ಯಾರ್ಯಾರ ಕಣ್ಣಿಗೂ ಬೀಳ್ಲಿಲ್ಲ...' ಎಂದು ವಿವರವಾಗಿ ಹೇಳಿದ. ಆದರೆ, ಆ ಹೊತ್ತಲ್ಲಿ, ಸಂಗಪ್ಪ ಹೇಳಿದ ಮಾತುಗಳನ್ನು ಕೇಳಿ ಫಕೀರಪ್ಪನು ಮುಗುಲು ಹರ್ದು ಮ್ಯಾಲೆ ಬಿದ್ದವರಂಗ ದಿಂಗವರ್ದು ನಿಂತುಬಿಟ್ಟಿದ್ದ !

ದೂರದಲ್ಲಿ ನಾಯಿಯೊಂದು ಊಳಿಡುತ್ತಿರುವ ಸದ್ದು ಕಿವಿಗೆ ಬೀಳುತ್ತಿದ್ದಂಗೆ ಫಕೀರಪ್ಪನು ಸರಕ್ಕನೆ ವಾಸ್ತವಕ್ಕೆ ಬಂದ. ಹಾಗೇ, ದೀರ್ಘವಾಗಿ ನಿಟ್ಟುಸಿರೊಂದನ್ನು ಬಿಡುತ್ತ, ಕತ್ತೆತ್ತಿ ನೋಡಿದ. ಆಗ, ಸುತ್ತಲೂ ಮಬ್ಬುಗತ್ತಲು ಆವರಿಸಿದ್ದು ಕಣ್ಣಿಗೆ ಬಿತ್ತು. ಅದ ಕಂಡು, 'ಬೆಳಕು ಹರೀಲಿಕ್ಕೆ ಬಂದಿರ್ಬೇಕು...' ಎಂದು ಮನದೊಳಗೆ ಅಂದುಕೊಳ್ಳುತ್ತ, ಹಾಸುಗೆಯಲ್ಲಿ ಮಲಗಿದ್ದ ಶಿವ್ಯಾನತ್ತ ದೃಷ್ಟಿ ಬೀರಿದ. ಆಗಲೇ, ಆತನ ಒಣಗಿದ ಮಾರಿ ಕಂಡು ಫಕೀರಪ್ಪನಿಗೆ ದುಃಖ ಉಮ್ಮಳಿಸಿ ಬರಲು ಕಣ್ಣಿಗೆ ನೀರು ತಂದ. ಆ ಕಣ್ಣೀರಿನಿಂದಾಗಿ ಮನಸ್ಸು ನೋವಿನಿಂದ ತೊಯ್ದು ತೊಪ್ಪೆಯಾಗಿತ್ತು. ಕಳೆದ ಸಂಜೆ, ಚನ್ನಬಸಪ್ಪ ಸಾವ್ಕಾರನು ಗುಡುಸುಲಿನ ತಂಕ ಬಂದು ತಾಮ್ರದ ಹಂಡೆಯ ವಿಚಾರದಲ್ಲಿ ಜಗಳ ಮಾಡಿ ಹೋದಾಗಿನಿಂದ ಫಕೀರಪ್ಪನಿಗೆ ಸಮಾಧಾನ ಅಂಬೋದನs ಇಲ್ದಂಗಾಗಿತ್ತು. ಆ ಹೊತ್ತಲ್ಲಿ, ಹೀಗೆ, ಏಕಾಏಕಿ ಶಿವ್ಯಾ ತನ್ನ ಕುತ್ತಿಗೆಗೆ ತಂದೊಡ್ಡಿದ್ದ ಉರ್ಲಿನಿಂದ ಪಾರಾಗುವುದು ಹೇಗೆಂಬ ಚಿಂತೆ ಕಾಡುತ್ತಿತ್ತು. ಆ ಚಿಂತೆಯಿಂದಾಗಿ, ಸೂತ್ರ ಕಿತ್ತ ಗಾಳಿಪಟದಂಗೆ ಮನಸ್ಸು ಎತ್ತೆತ್ತಲೋ ಹರಿದಾಡುತ್ತಿತ್ತು. ಇದರಿಂದಾಗಿ, ಬೆಳತಂಕ ಆತನ ಕಣ್ಣಿಗೆ ನಿದ್ದೆ ಅಂಬೋದು ಇಲ್ಲವಾಗಿತ್ತು. ಹಿಂಗಾಗಿ, ಫಕೀರಪ್ಪನ ಕಣ್ಣಾಗ ಜೊಂಪು ಬಂದಂಗಾಗಿ ಕುಂತಲ್ಲೇ ಕಣ್ಮುಚ್ಚಿದ. ಅಟ್ರಾಗs ಮತ್ತೇ ಕನಸು: ಮಹಾಪೂರ ಬಂದಂಗ ! ಹೊಳೆ ರಭಸದಿಂದ ಹರೀಲಿಕ್ಹತ್ತಿದ್ದಂಗ ! ಆ ಹೊಳೆ ದಂಡೆ ಮ್ಯಾಲೆ ಫಕೀರಪ್ಪ ಅದ್ಯಾಕೇನೊ ಕೈಯಾಗ ಕುಡುಗೋಲು ಹಿಡ್ಕಂಡು ಕುಂತಂಗ ! ಹಂಗ್ ಕುಂತಾಗನs ಚನ್ನಬಸಪ್ಪ ಸಾವ್ಕಾರನ ಕಿರಿ ಮಗ ಸುರೇಶನು, ತನ್ನ ಹೆಗಲ್ಮ್ಯಾಲೆ ತಾಮ್ರದ ಹಂಡೆಯನ್ನು ಹೊತ್ತುಕೊಂಡು ವಿಕಾರವಾಗಿ ನಗುತ್ತ ಫಕೀರಪ್ಪನತ್ತ ಹೆಜ್ಜೆ ಹಾಕ್ತಿದ್ದಂಗ ! ಆಗ್ಲೇ, ಚನ್ನಬಸಪ್ಪ ಸಾವ್ಕಾರನೂ ಸಹ ಉರಿಗಣ್ಣು ಬಿಟ್ಟುಕೊಂಡು; ಮೀಸೆ ತಿರುವುತ್ತ ಆತನ ಬೆನ್ನಿಂದೆ ಬರ್ತಿದ್ದಂಗ ! ಆಗ, ಹೊಳೆ ದಂಡೆಮ್ಯಾಲೆ ಕುಂತಿದ್ದ ಫಕೀರಪ್ಪ ಬೆಚ್ಚಿ ಬಿದ್ದು ಅವರನ್ನೇ ದಿಟ್ಟಿಸಿ ನೋಡ್ದಂಗ ! ಅಟ್ರಾಗ, ಸುರೇಶನು ಮುಂದ್ಮುಂದೆ...; ಚನ್ನಬಸಪ್ಪ ಸಾವ್ಕಾರನು ಹಿಂದ್ಹಿಂದೆ... ಅವಸರವಸರವಾಗಿ ಹೆಜ್ಜೆ ಹಾಕುತ್ತ ಬಂದವರೆ, ಫಕೀರಪ್ಪನ ಮುಂದೆ ನಿಂತ್ಗಂಡಂಗ ! ಇದರ ನಡುಕ ಸುರೇಶನು ತನ್ನ ಹೆಗಲ ಮ್ಯಾಲಿದ್ದ ತಾಮ್ರದ ಹಂಡೆಯಲ್ಲಿದ್ದ ನೀರನ್ನು ಫಕೀರಪ್ಪನ ಮೈಮ್ಯಾಲೆ ಸುರದಂಗ ! ಅದ ಕಂಡು ಚನ್ನಬಸಪ್ಪ ಸಾವ್ಕಾರನು ಕೇಕೇ ಹಾಕಿ ನಕ್ಕಂಗ ! ಆಗ, ಫಕೀರಪ್ಪನಿಗೆ ಸಿಟ್ಟು ಬಂದು, 'ಲೇ, ತಾಯ್ಗಂಡ್ರ...!' ಎಂದು ಜೋರಾಗಿ ಅಂದುಕೊಳ್ಳುತ್ತ; ತಟ್ಟನೆ ಎದ್ದು ನಿಂತು, ಅವರಿಬ್ಬರ ಮೇಲೂ ಕುಡುಗೋಲನ್ನು ಬೀಸಿದಂಗ ! ಅದರ ಬೆನ್ನಿಂದೇನೆ ಚಿಲ್... ಎಂದು ರಕ್ತ ಚಿಮ್ಮಿದಂಗಾಯಿತು ! ಆ ಪರಿ ರಕ್ತ ಕಂಡು ಫಕೀರಪ್ಪನ ಜೀವ ಜಲ್... ಅಂದಂಗಾಗಿ ದಿಗ್ಗನೆ ಕಣ್ಣು ಬಿಟ್ಟ. ಕನಸನ್ನು ಪುನಃ ಪುನಃ ನೆನಪಿಸಿಕೊಂಡು, 'ಶಿವ... ಶಿವ...' ಎಂದು ಅಂದುಕೊಳ್ಳುತ್ತ ತುಸು ಹೊತ್ತು ಹಂಗೇ ಯೋಚಿಸುತ್ತ ಕುಂತ. ಹಂಗ್ ಕುಂತಾಗಲೇ, ಮನದೊಳಗೆ ಒಂದು ನಿರ್ಧಾರಕ್ಕೆ ಬಂದ. ಆ ನಿರ್ಧಾರದಿಂದಾಗಿ, ಮುಖದಲ್ಲಿ ಗೆಲುವಿನ ಕಳೆಯನ್ನು ತುಂಬಿಕೊಳ್ಳುತ್ತ, ಹಾಸುಗೆಯಲ್ಲಿ ಮಲಗಿದ್ದ ಶಿವ್ಯಾನ ಕಾಲ ಕೆಳಗೆ ಹೋಗಿದ್ದ ಕೌದಿಯನ್ನು ಆತನ ಮೈತುಂಬ ಹೊದಿಸಿದವನೆ ತಟ್ಟನೆ ಅಲ್ಲಿಂದ ಎದ್ದು ಗುಡುಸುಲನ್ನು ಹೊಕ್ಕ. ಆಗ, ಅಲ್ಲಿ ಮಲಗಿದ್ದ ತಾರವ್ವನಿಗೆ, 'ಲೇ, ತಾರಿ... ಬೆಳಕಾಗೆದ, ಏಳು...!' ಎನ್ನುತ್ತ ಆಕೆಯನ್ನು ದಾಟಿಕೊಂಡು ಮುಂದೆ ಹೋದವನೆ; ಗುಡುಸುಲಿನ ತುಂಬ ಕಣ್ಣಾಡಿಸಿ, ಆ ಕ್ಷಣದಲ್ಲಿ ತನಗೆ ಬೇಕಾಗಿರುವುದನ್ನು ಹುಡುಕತೊಡಗಿದ.

ಆ ಹೊತ್ತಲ್ಲಿ, ಇತ್ತ ಪೂರ್ವದ ಮುಗುಲಿಗೆ ನಿದನಿದಾನವಾಗಿ ನೆತ್ತರಿನ ಕೆಂಪು ಅಡರುತ್ತಿತ್ತು !

**ಕಲ್ಲೇಶ್ ಕುಂಬಾರ್**
ಮಲ್ಲಿಕಾರ್ಜುನ ಹೋಟೆಲ್, ಅಂಚೆ: ಹಾರೂಗೇರಿ-೫೯೧೨೨೦
ರಾಯಭಾಗ ತಾಲೂಕು, ಬೆಳಗಾವಿ ಜಿಲ್ಲೆ

## ಕವಿತೆ

"ನಾನು ಸತ್ತೆ"
ಎಂದ ಕವಿ.
"ನನಗೆ ಮರಣವೇ ಇಲ್ಲ"
ನಸುನಕ್ಕಿತು ಕವಿತೆ !

**ಶೋಭಾ ಪ್ರಮೋದ್**
ಮನ್‌ಗಾಂವ್, ಮಹಾರಾಷ್ಟ್ರ

# ಓ ಮನಸೇ ಏನು ನಿನ್ನ ವರಸೆ?

ರುಕ್ಮಿಣಿಮಾಲಾ

ಈ ಮನಸ್ಸು ಎಂಬುದು ಒಂದು ಅದ್ಭುತ ಕ್ರಿಯೆ. ಮಾನವನ ಮನಸ್ಸು ಶರವೇಗದಲ್ಲಿ ಚಲಿಸಬಲ್ಲುದು.

*ಮನಸು ಬೆಳೆದಂತೆಲ್ಲ ಹಸಿವು ಬೆಳೆಯುವುದಯ್ಯ*
*ತಣಿಸಲದನೊಗೆಯುವುದು ಬಗೆಬಗೆಯ ಯುಕ್ತಿ*
*ಮನುಜನೇಳಿಗೆಯದರಿನ್; ಆ ಮನಸಿನೇಳಿಗೆಗೆ*
*ಕೊನೆಯೆಲ್ಲಿ ? ಚಿಂತಿಸಲೊ ಮಂಕುತಿಮ್ಮ*

ದ್ವೇಷ, ಅಸೂಯೆ, ಜಗಳ ಇವೆಲ್ಲ ಮನುಜನಲ್ಲಿ ಇರಬಹುದಾದ ಸಹಜ ಸ್ವಭಾವಗಳೇ ? ಹಾಗಾದರೆ ಕರುಣೆ, ಪ್ರೀತಿ, ವಿಶ್ವಾಸ, ನಂಬಿಕೆ ಇವೆಲ್ಲ ಮನುಷ್ಯನ ಹುಟ್ಟುಗುಣ ಅಲ್ಲವೆ, ಎಂಬ ಜಿಜ್ಞಾಸೆ ಕಾಡಿತು. ನಿಜಕ್ಕೂ ಪ್ರೀತಿ, ಕರುಣೆ, ತಾಳ್ಮೆ ಇವೆಲ್ಲ ಮನುಜನಲ್ಲಿ ಇರಬೇಕಾದ ನೈಜ ಸ್ವಭಾವ. ಮಗುವಾಗಿದ್ದಾಗ ಮನ ನಿರ್ಮಲ ವಾಗಿರುತ್ತದೆ. ಮನುಜ ವಿಕಾಸ ಹೊಂದುತ್ತ ಕಲಿಯುವ ದುರ್ಗುಣಗಳು ದ್ವೇಷ, ಅಸೂಯೆ. ಸ್ನೇಹ, ದಯೆ, ತಾಳ್ಮೆಯಂಥ ಸ್ವಭಾವ ಕೆಲವರಲ್ಲಿ ಸಹಜವಾಗೇ ಇರುತ್ತದೆ. ಅಂಥವರ ಬಳಿ ಸ್ವಾರ್ಥ, ಹುಳುಕು ಅಪ್ಪಿತಪ್ಪಿಯೂ ಹತ್ತಿರ ಸುಳಿಯುವುದಿಲ್ಲ. ಸುಳಿಯಲು ಅವರು ಬಿಡುವುದಿಲ್ಲ. ಇನ್ನು ಕೆಲವರಲ್ಲಿ ಇಂಥ ಸಹಜ ಗುಣಗಳು ಸಮೀಪಿಸದೆ ಕೇವಲ ದುರ್ಗುಣಗಳು ಮಾತ್ರ ಅಪ್ಪಿಕೊಳ್ಳುತ್ತವೆ. ಏಕೆ ಹೀಗೆ, ಎಂಬ ಪ್ರಶ್ನೆ ನನ್ನ ಮನಸ್ಸನ್ನು ಕಾಡುತ್ತದೆ. ಇದು ಮನಸ್ಸಿಗೆ ಅರ್ಥವಾಗದ ವಿಚಾರ ಎಂದು ಅದರ ಬಗ್ಗೆ ಮಥಿಸುವುದನ್ನು ಬಿಡುತ್ತದೆ ಅದೇ ಮನಸ್ಸು! 'ಮನವ ಶೋಧಿಸಬೇಕು ನಿಚ್ಚ ದಿನ ದಿನದಿ ಮಾಡುವ ಪಾಪ ಪುಣ್ಯದ ವೆಚ್ಚ' – ಇದು ಪುರಂದರದಾಸರ ವಾಣಿ.

✶ ✶ ✶

ಹದಿಹರಯದ ಮನಸ್ಸಿಗೂ ಇಳಿವಯಸ್ಸಿನ ಮನಸ್ಸಿಗೂ ಆಗಾಗ ಘರ್ಷಣೆ ಆಗುತ್ತಲೇ ಇರುತ್ತದೆ. ನಮ್ಮ ಮನೆಯಲ್ಲಿ ೪ ಮಂದಿ ಇದ್ದೇವೆ. (ನಾವಿಬ್ಬರು, ನಮಗೊಬ್ಬಳು, ಅವಳಿಗೊಬ್ಬ ಅಜ್ಜಿ) ನಾಲ್ಕೂ ಜನರ ಮನಸ್ಸೂ ಒಂದೇ ಸಮ ಇರಲು ಸಾಧ್ಯವಿಲ್ಲ. ಈ ನಾಲ್ಕರಲ್ಲಿ ಎರಡು ಪ್ರೌಢ ಮನಸ್ಸು, ಒಂದು ಹದಿಹರಯ, ಇನ್ನೊಂದು ಇಳಿಮನಸ್ಸು ಎಂದು ವಿಂಗಡಿಸಬಹುದು. ನಮ್ಮ ಮನೆಯಲ್ಲಿರುವ ಪ್ರೌಢ ಮನಸ್ಸಿಗೂ ಇಳಿಮನಸ್ಸಿಗೂ ಹೆಚ್ಚು ತಾಕಲಾಟವಿಲ್ಲ. ಆಗೊಮ್ಮೆ ಈಗೊಮ್ಮೆ ಸಂಘರ್ಷ ಬರುತ್ತದೆ, ಇಲ್ಲವೆಂದಲ್ಲ. ಆದರೆ ಇಳಿಮನಸ್ಸಿಗೂ ಹರಯದ ಮನಸ್ಸಿಗೂ ಆಗಾಗ ಘರ್ಷಣೆ ನಡೆಯುತ್ತಲೇ ಇರುತ್ತದೆ. ಮೊಮ್ಮಗಳು ಮಾಡಿದ್ದು ಅಜ್ಜಿಗೆ ಸರಿ ಕಾಣದು, ಅದನ್ನು ಅಜ್ಜಿ ಮೊಮ್ಮಗಳಿಗೆ ಹೇಳುವುದು, ಅದು ಮೊಮ್ಮಗಳಿಗೆ ಕೋಪ ತರುವುದು. ಉದಾಹರಣೆಗೆ, "ನೀನು ಸಿನಿಮಾದ ಹಾಗೆ ಮಾತಾಡುತ್ತಿದ್ದೀಯ" ಎಂದು ಅಜ್ಜಿ ಅಂದರೆ, "ನೀನು ಸಿನಿಮಾದ ಅಜ್ಜಿಯ ಹಾಗೆ ಮಾತಾಡುತ್ತಿ" ಎಂದು ಮೊಮ್ಮಗಳ ಪ್ರತಿಕ್ರಿಯೆ! ಪರಸ್ಪರ ಮಾತು, ಪ್ರತಿಮಾತು ಬರುತ್ತಲೇ ಇರುತ್ತವೆ. ಇವು ಅಜ್ಜಿ, ಮೊಮ್ಮಗಳಿರುವ ಎಲ್ಲಾ ಮನೆಗಳಲ್ಲಿ ಸ್ವಾಭಾವಿಕವಾಗಿ ಘಟಿಸುವಂಥ ವಿಚಾರ. ಅದು ಅಜ್ಜಿ ಮೊಮ್ಮಗಳ ನಡುವೆ ಪ್ರೇಮಕೋಪ, ಸಲ್ಲಾಪ. ಅಜ್ಜಿಗೂ ಮೊಮ್ಮಗಳಿಗೂ ಆಗಾಗ ಮಾತಿನ ಜಟಾಪಟಿ ನಡೆದರೂ ಅವು ಕೇವಲ ತಾತ್ಕಾಲಿಕ. ಅದರಲ್ಲಿ ಇಬ್ಬರಿಗೂ ಸಂತೋಷವಿದೆ.

ಅಜ್ಜಿ ಮತ್ತು ಮೊಮ್ಮಗಳ ನಡುವೆ ನಮ್ಮ ಮನೆಯಲ್ಲಿ ಇತ್ತೀಚೆಗೆ ನಡೆದ ಸಂಭಾಷಣೆ ಹೀಗಿತ್ತು :

ನಮ್ಮ ಮಗಳು ಮಂಗಳೂರಿಗೆ ರಾತ್ರಿ ಬಸ್ಸಲ್ಲಿ ಪ್ರಯಾಣಿಸುವ ಸಲುವಾಗಿ ಟಿಕೆಟ್ ಕಾದಿರಿಸಿ ಆ ಸುದ್ದಿಯನ್ನು ಅಜ್ಜಿಗೆ ಬಿತ್ತರಿಸಿದಳು.

"ನೀನೊಬ್ಬಳೇ ಹೋಗುವುದಾ ?" ಒಡನೆಯೇ ಅಜ್ಜಿಯಿಂದ ಬಂದ ಪ್ರಶ್ನೆ. (ಅಜ್ಜಿಗೆ ಹೆದರಿಕೆ ತುಸು ಜಾಸ್ತಿಯೇ. ಇದಕ್ಕೂ ಅವರ ಸಮಜಾಯಿಶಿ ಇದೆ. ನನಗೆ ಮೊದಲು ಇಷ್ಟು ಭಯ ಆಗುತ್ತಿರಲಿಲ್ಲ. ಈಗ ಎಲ್ಲದಕ್ಕೂ ಹೆದರಿಕೆ ಆಗುತ್ತದೆ. ಈಗ ಶರೀರಕ್ಕೆ ತಡೆದುಕೊಳ್ಳುವ ಶಕ್ತಿ ಇಲ್ಲ, ಅದಕ್ಕೇ ಬೇಗ ಆತಂಕವಾಗುವುದು.)

"ಅಲ್ಲ, ಅಜ್ಜಿ" ಮೊಮ್ಮಗಳ ಚುಟುಕು ಉತ್ತರ.

"ಮತ್ತೆ ಯಾರು ಬರುತ್ತಾರೆ ನಿನ್ನ ಜೊತೆಗೆ ?"



"ಬಸ್ಸಲ್ಲಿ ನನ್ನೊಡನೆ ತುಂಬ ಜನ ಇರುತ್ತಾರೆ ಅಜ್ಜಿ". ಮೊಮ್ಮಗಳ ತುಂಟತನದ ಉತ್ತರ.

"ಹಾಗಲ್ಲ, ನೀನು ಒಬ್ಬಳೆ ಅದೂ ರಾತ್ರಿ ಪ್ರಯಾಣ ಹೆದರಿಕೆ ಆಗುತ್ತದೆ. ಈಗಿನ ಕಾಲದ ಜನ ಸರಿ ಇಲ್ಲ."

"ಅಜ್ಜೀ, ಭಯ ಏಕೆ ? ನಾನು ಒಬ್ಬಳೇ ಅಲ್ಲ, ಎಷ್ಟೊಂದು ಜನ ಇರುತ್ತಾರಲ್ಲ ಬಸ್ಸಲ್ಲಿ. ಹೋಗಜ್ಜಿ, ನೀನು ಎಲ್ಲದಕ್ಕೂ ಹೆದರುತ್ತೀಯ" ಎಂದು ನುಡಿದವಳೇ ಮುಂದೆ ಅಜ್ಜಿಯ ಪ್ರಶ್ನೆಗಳ ಸುರಿಮಳೆಗೆ ಹೆದರಿ ಅಲ್ಲಿಂದ ಎದ್ದು ಹೋದಳು.

ದಿನವಿಡೀ ಇದೇ ಆಲೋಚನೆಯಲ್ಲಿ ಅಜ್ಜಿಯ ಮನಸ್ಸು ತಿಕ್ಕಾಟದಲ್ಲಿರುತ್ತದೆ. ಸಂಜೆ ವೇಳೆಗೆ ಅದರ ದುಷ್ಪರಿಣಾಮ ಶರೀರದ ಮೇಲೂ ಬೀರಿ, ಸುಸ್ತು, ಸಂಕಟ, ತಲೆತಿರುಗು ಇತ್ಯಾದಿಯಿಂದಾಗಿ ವೈದ್ಯರನ್ನು ನೋಡದೆ ಸಾಧ್ಯವೇ ಇಲ್ಲ ಎಂಬ ಪರಿಸ್ಥಿತಿ ಏರ್ಪಡುತ್ತದೆ. ವೈದ್ಯರ ಬಳಿ ತೆರಳಿ ತಕ್ಕ ಔಷಧೋಪಚಾರವಾಗಿ ಮನೆಗೆ ಬರುತ್ತಾರೆ.

ಇತ್ತ, ಮೊಮ್ಮಗಳ ಮನಸ್ಸು ಈ ಅಜ್ಜಿಗೆ ಹೇಗೆ ಸಮಾಧಾನ ಹೇಳುವುದು ? ಏನು ಹೇಳಿದರೆ ಅಜ್ಜಿಯ ಹೆದರಿಕೆ ಕಡಿಮೆ ಆಗಬಹುದು ? ಎಂಬುದಾಗಿ ಚಿಂತಿಸುತ್ತಿರುತ್ತದೆ. 'ಮಾವನ ಮನೆಗೆ ಬಂದ ನೆಂಟರು ಅದೇ ಬಸ್ಸಲ್ಲಿ ಟಿಕೆಟ್ ರಿಸರ್ವ್ ಮಾಡಿದ್ದಾರೆ ಎಂದು ಅಜ್ಜಿಗೆ ಹೇಳಲು ಆಗದೇ ? ಇಲ್ಲಾಂದ್ರೆ ಅಜ್ಜಿ ರಾತ್ರಿ ನಿದ್ದೆ ಮಾಡಲಿಕ್ಕಿಲ್ಲ. ಅದೇ ಚಿಂತೆಯಲ್ಲಿ ಕೂತಾರು. ಆರೋಗ್ಯ ಇನ್ನೂ ಹದಗೆಟ್ಟೀತು. ಮತ್ತೆ ನಿಮಗೇ ಕಷ್ಟ. ನನಗೆ ಗೊತ್ತು ಅಜ್ಜಿಗೆ ನನ್ನದೇ ಚಿಂತೆ.' – ಆ ಮಂಥನದ ಫಲವಾಗಿ ಕಂಡ ಪರಿಹಾರವನ್ನು ಅಮ್ಮನೊಡನೆ ಚರ್ಚಿಸುತ್ತಾಳೆ. ಸುಳ್ಳು ಹೇಳುವುದು ಸರಿಯೋ ತಪ್ಪೋ ಎಂಬ ಭಾವ ಆ ಕ್ಷಣದಲ್ಲಿ ಮೂಡಿದರೂ ಸರಿ ಅದೇ ಒಳ್ಳೆಯ ಉಪಾಯ ಎಂಬ ತೀರ್ಮಾನಕ್ಕೆ ಬರುತ್ತೇವೆ.

ಒಡನೆ ಮೊಮ್ಮಗಳು ಅಜ್ಜಿಯ ಬಳಿ ಕೂತು, 'ಅಜ್ಜೀ, ನಿನಗೆ ಒಂದು ಸಂತಸದ ಸುದ್ದಿ ಹೇಳುವೆ' ಎಂದು ಪೀಠಿಕೆ ಹಾಕುತ್ತಾಳೆ.

"ನೀನು ರಾತ್ರಿ ಬಸ್ಸಲ್ಲಿ ಹೋಗದೆ ಹಗಲು ಹೋಗುತ್ತೀಯಾ ?" ಅಜ್ಜಿಯ ಆರ್ತ ಮೊರೆ.

"ಟಿಕೆಟ್ ಮಾಡಿ ಆಗಿದೆಯಲ್ಲ. ರಾತ್ರಿಯೇ ಹೋಗುವುದು. ಅದೇ ಬಸ್ಸಿಗೆ ಮಾವನ ಮನೆಗೆ ಬಂದ ನೆಂಟರೊಬ್ಬರು ಟಿಕೆಟ್ ರಿಸರ್ವ್ ಮಾಡಿದ್ದಾರೆ. ಈಗ ನಾನು ಮಾವನ ಮನೆಯಿಂದಲೇ ಬಂದದ್ದು. ಆಗ ಗೊತ್ತಾಯಿತು ಈ ವಿಚಾರ".

"ಅಬ್ಬ, ಈಗ ಸಮಾಧಾನವಾಯಿತು. ಯಾರಾದರೂ ಜೊತೆಗೆ ಇರಬೇಕು, ಅದೂ ರಾತ್ರಿ ಪ್ರಯಾಣದಲ್ಲಿ. ಇನ್ನು ಯೋಚನೆ ಇಲ್ಲ." ಅಜ್ಜಿಯ ನೆಮ್ಮದಿಯ ಮಾತು. ಆದರೂ ಮನಕ್ಕೆ ಪೂರ ನೆಮ್ಮದಿ ಇಲ್ಲ. "ಅವರು ಯಾರು ? ಎಲ್ಲಿಗೆ ಹೋಗುವುದು ? ಇಳಿಯುವುದು ಎಲ್ಲಿ ?" ಇತ್ಯಾದಿ ಪ್ರಶ್ನೆಗಳಿಗೆ ತೊಡಗುತ್ತಾರೆ. ಮೊಮ್ಮಗಳು ವಿವರವಾಗಿ, "ಮಾವ ಇದ್ದಾನಲ್ವ ಅವನ ಹೆಂಡತಿಯ ಚಿಕ್ಕಮ್ಮ ಊರಿಂದ..." ಎಂಬ ಸವಿವರ ವನ್ನು ಕಲ್ಪಿಸಿಕೊಳ್ಳುತ್ತ ವಿವರಿಸುತ್ತಾಳೆ ! ಮತ್ತು ಅಜ್ಜಿ ಇನ್ನೂ ಪ್ರಶ್ನೆ ಕೇಳಿದರೆ ಸುಳ್ಳು ಪೋಣಿಸುತ್ತ ಹೋಗುವುದು ಕಷ್ಟದ ಕೆಲಸ ಎಂದು ಅರಿವಾಗಿ, "ಅಜ್ಜಿ, ನನಗೆ ಇನ್ನೂ ಬ್ಯಾಗಿಗೆ ಬಟ್ಟೆ ತುಂಬಿಸಿಯೇ ಆಗಿಲ್ಲ" ಎಂದು ಅಲ್ಲಿಂದ ಪರಾರಿಯಾಗುತ್ತಾಳೆ !

ಇಷ್ಟೆಲ್ಲ ಹೇಳಿದರೂ ಅಜ್ಜಿಯ ಮನಸ್ಸಿಗೆ ಪೂರ್ಣ ಸಮಾಧಾನ ಸಿಗಲೊಲ್ಲದು. ಮಗ ರಾತ್ರಿ ಮನೆಗೆ ಬಂದೊಡನೆ ಮೊಮ್ಮಗಳ ಪ್ರಯಾಣದ ಕುರಿತು ಪ್ರಶ್ನಿಸುತ್ತಾರೆ. "ಅವಳೊಡನೆ ಬರುತ್ತಾರಲ್ಲ ಅವರ ಸೀಟ್ ನಂಬ್ರ ಎಷ್ಟು ?" ಎಂದು ವಿಚಾರಿಸುತ್ತಾರೆ.

"ಮೂರು". ಮಗನಿಂದ ಥಟ್ಟನೆ ಬರುತ್ತೆ ಉತ್ತರ.

"ಇವಳದ್ದು ಎಷ್ಟು ?"

"ಇಪ್ಪತ್ತಮೂರು". ಎಷ್ಟು ಸಹಜವಾಗಿ ಮಗರಾಯ ಸುಳ್ಳು ನುಡಿದನೆಂದರೆ ನಿಜಕ್ಕೂ ಗೊತ್ತಿದ್ದೇ ಹೇಳಿದ್ದು ಎಂದು ಭಾಸವಾಗಬೇಕು. ಎಷ್ಟಾದರೂ ಮೊಮ್ಮಗಳ ಅಪ್ಪನೇ ಅಲ್ಲವೆ !

"ಓ. ತುಂಬ ದೂರ ಆಯಿತು. ಒಟ್ಟಿಗೆ ಸಿಕ್ಕಬೇಕಿತ್ತು" ಅಜ್ಜಿಯ ಮನಸ್ಸು ಈ ರೀತಿ ಚಿಂತಿಸಲು ತೊಡಗುತ್ತದೆ. ಈ ಮಾತುಕತೆ ಕೇಳುತ್ತ ನನ್ನ ಮನ ಓ ಮನವೇ, ಏನು ನಿನ್ನ ವರಸೆಯೇ ಎಂದು ಬೆರಗುಗೊಂಡೆ.

ಇದೇ ವಿಚಾರವಾಗಿ ಮಿತಿ ಇಲ್ಲದೆ ಮನಸು ಹೀಗೆ ಮುಂದೆ ವಿಹರಿಸುತ್ತದೆ. ಅವರು ಎಷ್ಟು ಹೊತ್ತಿಗೆ ಬರುತ್ತಾರೆ ? ಅವರನ್ನೂ ನೀವೇ ಕರೆದುಕೊಂಡು ಹೋಗುವುದ ? ಇತ್ಯಾದಿ ಪ್ರಶ್ನೆಗಳು, ಆ ಪ್ರಶ್ನೆಗಳಿಗೆ ತಕ್ಕ ಸಮಂಜಸ ಉತ್ತರಗಳು ನಮ್ಮಿಂದ ಬರುತ್ತಲೇ ಇದ್ದುವು ! ಈ ಎಲ್ಲ ಗೊಂದಲಗಳ ನಡುವೆ ಅಜ್ಜಿ ಸುಸ್ತಾಗಿ ಮಲಗಿರುತ್ತಾರೆ. ರಾತ್ರಿ ಮೊಮ್ಮಗಳು ಹೊರಡು ವೆನೆಂದು ಹೇಳಿದಾಗ ಥಟ್ಟನೆ ಎದ್ದು ಗೇಟಿನವರೆಗೂ ಬಂದು, "ಬಸ್ಸಲ್ಲಿ ಮಧ್ಯೆ ಇಳಿಯಬೇಕಾದರೆ ಅವರ ಜೊತೆಯಲ್ಲೆ ಇಳಿ. ಒಬ್ಬಳೇ ಹೋಗಬೇಡ" ಎಂದು ಬುದ್ಧಿಮಾತು ಹೇಳಿಯೇ ಬೀಳ್ಕೊಡುತ್ತಾರೆ. ಮೊಮ್ಮಗಳೂ ತಲೆ ಆಡಿಸಿ ಸಮ್ಮತಿಸುತ್ತಾಳೆ.

ಮೊಮ್ಮಗಳು ಹೇಳಿದ ಒಂದು ಸುಳ್ಳಿನಿಂದ ನಾವು ಎಷ್ಟು ಸುಳ್ಳುಗಳನ್ನು ಸೃಷ್ಟಿ ಮಾಡಬೇಕು, ಅದಕ್ಕೆ ಸಂಬಂಧಪಟ್ಟವರಿಗೂ ಈ ಬಗ್ಗೆ ಮಾಹಿತಿ ಕೊಡಬೇಕು, ಮಗಳು ಹೋಗಿ ತಲಪುವ ಮನೆಯವರ ಬಳಿ ಈ ಅಜ್ಜಿ ಅಡ್ಡ ಪ್ರಶ್ನೆ ಮಾಡುವ ಸಂಭವ ಇರುತ್ತದೆ. ಅವರೂ ಸುಳ್ಳು ಹೇಳಲು ತಯಾರಾಗಿರಬೇಕು. ಮಗಳ ಮಾವನಿಗೂ ಈ ಸುಳ್ಳಿನ ಬಗ್ಗೆ ತಿಳಿಸಬೇಕು. ಇನ್ನು ಒಂದೆರಡು ತಿಂಗಳು ಕಳೆದು ಅಜ್ಜಿ ಮಾವನನ್ನು ಭೇಟಿಯಾದರೂ ಮೊಮ್ಮಗಳ ಪ್ರಯಾಣದ ವಿಚಾರ ಕೇಳುವ ಸಂಭವ ಇರುತ್ತದೆ. ಏಕೆಂದರೆ ಅಜ್ಜಿಗೆ ನೆನಪಿನ ಶಕ್ತಿ ಅಗಾಧ. ಅದಕ್ಕೆ ತಕ್ಕ ಉತ್ತರ ಕೊಡಲು ಅವರೂ ತಯಾರಾಗಿರಬೇಕು. ಅಜ್ಜಿ ಕೇಳುವ ಪ್ರಶ್ನೆ ಎದುರು ತಡಬಡಾಯಿಸಬಾರದಲ್ಲ. ನಾವು ಹೇಳುವ ಸುಳ್ಳಿನಿಂದ ಒಬ್ಬರ ಮನಸ್ಸಿಗೆ ನೆಮ್ಮದಿ ಸಮಾಧಾನ ಸಿಗುತ್ತದೆ ಎಂದಾದರೆ ಸುಳ್ಳು ಹೇಳುವುದರಲ್ಲಿ ತಪ್ಪಿಲ್ಲವೇ ಇಲ್ಲ ಎಂದು ಮನಸ್ಸು ಸಮರ್ಥಿಸಿಕೊಳ್ಳುತ್ತದೆ. ಅಜ್ಜಿಯ ಮಾನಸಿಕ ನೆಮ್ಮದಿಗೆ ಅತ್ಯಂತ ಸುಲಭದ ಪರಿಹಾರ ಇದಾಗಿರುವುದರಿಂದ ನಾವು ಇಂಥ ಸುಳ್ಳು ಸೂತ್ರವನ್ನು ಆಗಾಗ ಹೇಳಬೇಕಾಗುತ್ತದೆ. ಇದುವರೆಗೆ ನಾವು ಹತ್ತಾರು ಸುಳ್ಳುಗಳನ್ನು ಹೇಳಿ ಅದರಿಂದ ಅವರು ನೆಮ್ಮದಿ ಹೊಂದಿದ ಪ್ರಸಂಗಗಳು ಸಾಕಷ್ಟು ಇವೆ. ಅವೆಲ್ಲ ಬರೆಯ ಹೊರಟರೆ ಒಂದು ಸುಲಲಿತ ಕಾದಂಬರಿಯಾದೀತು !

*ಮನಸು ಬೆಳೆಯಲಿ ಭುಜಿಸಿ ನೂರು ನೂರನುಭವವ*
*ಹೊನಲು ನೂರೀ ಬಾಳ ಕಡಲನುಬ್ಬಿಸಲಿ*
*ತನುಬಂಧ ಕಳಚಿ, ಜೀವಖಂಡಚೇತನದ*
*ಕುಣಿತದಲಿ ಕೂಡಿರಲಿ – ಮಂಕುತಿಮ್ಮ*

ಈ ಅಜ್ಜಿಗೆ ೮೩ ವರ್ಷ. ಆರೋಗ್ಯದಲ್ಲಿ ಸಣ್ಣಪುಟ್ಟ ತೊಂದರೆ ಬಿಟ್ಟರೆ ಚೆನ್ನಾಗಿದ್ದಾರೆ. ಅವರು ಉಟ್ಟ ಬಟ್ಟೆಯನ್ನು ನಿತ್ಯ ಅವರೇ ಒಗೆಯುತ್ತಾರೆ. ಬೆಳಗ್ಗೆ ಎದ್ದು ರಂಗೋಲಿ ಹಾಕುತ್ತಾರೆ. ಯಾರಾದರೂ ನೆಂಟರು ಬರುತ್ತಾರೆ ಎಂದು ಗೊತ್ತಾದರೆ ಆ ದಿನ ಅಂಗಳದಲ್ಲಿ 'ಸುಸ್ವಾಗತ' ಎಂಬ ರಂಗೋಲಿ ಹಾಕಿ ಸಂತಸಪಡುತ್ತಾರೆ. ಹತ್ತಾರು ಹೂ ಕುಂಡಗಳಿಗೆ ನೀರು ಹೊಯ್ದು, ಪೂಜೆಗೆ ಹೂ ಕೊಯ್ಯುತ್ತಾರೆ. ಆದರೂ ಅವರಿಗೆ ಒಂದೇ ಕೊರಗು, ತನಗೇನೂ ಹೆಚ್ಚು ಕೆಲಸ ಮಾಡಲು ಕೈಲಾಗುತ್ತಿಲ್ಲವಲ್ಲ ಎಂದು.

* * *

ಈ ವೃದ್ಧಾಪ್ಯವೆನ್ನುವುದು ಬಲು ಕಷ್ಟದ ಜೀವನ. ಅವರ ಮನಸ್ಸನ್ನು ಅರ್ಥಮಾಡಿಕೊಳ್ಳುವ ಮನಸ್ಸು ಮನೆಯಲ್ಲಿರುವ ಹೆಚ್ಚಿನ ಸದಸ್ಯರಿಗೆ ಇರುವುದಿಲ್ಲ. ಅವರು ಏನು ಹೇಳಿದರೂ ಪಥ್ಯವಾಗುವುದಿಲ್ಲ. ಇದಕ್ಕೆ ಕಾರಣ ಕೇಳಿದರೆ 'ಜನರೇಷನ್ ಗ್ಯಾಪ್' ಎಂಬ ಆಂಗ್ಲ ಪದವನ್ನು ಬಳಸಿಬಿಡುತ್ತಾರೆ. ವೃದ್ಧರು ಎಷ್ಟು ಕಷ್ಟಪಡುತ್ತಾರೋ ? ಅವರಿಗೆ ಎಷ್ಟೆಲ್ಲ ನೋವುಗಳು ಇರುತ್ತವೋ ಏನೋ ? ಅವರ ಮನಸ್ಸು ಏನೆಲ್ಲ ಚಿಂತಿಸುತ್ತಿರಬಹುದು ? ಹಿಂದೆ ಎಷ್ಟೆಲ್ಲ ತಿರುಗಿದ್ದೇನೆ, ಕೆಲಸ ಮಾಡಿದ್ದೇನೆ. ಈಗ ಏನೂ ತನ್ನಿಂದ ಆಗುತ್ತಿಲ್ಲವಲ್ಲ, ಯಾರ ಸಹಾಯವೂ ಇಲ್ಲದೆ ಎಲ್ಲೂ ಹೊರಹೋಗಲು ಸಾಧ್ಯವಾಗುವುದಿಲ್ಲವಲ್ಲ ? – ಹೀಗೆಲ್ಲ ಯೋಚಿಸುತ್ತಿರಬಹುದೆ ಎಂದು ವಯಸ್ಸಾದ ಯಾರನ್ನೇ ನೋಡಿದರೂ ನನ್ನ ಮನಸ್ಸು ಈ ರೀತಿ ಚಿಂತಿಸುತ್ತದೆ. ಮನೆಯಲ್ಲಿ ವಯಸ್ಸಾದವರನ್ನು (ಅತ್ತೆ ಇರಬಹುದು, ಮಾವ ಇರಬಹುದು, ಅಜ್ಜ, ಅಜ್ಜಿ ಯಾರೇ ಆಗಲಿ) ನಾವು ಹೆಚ್ಚು ಉಪಚರಿಸದೆ ಇದ್ದರೂ ಚಿಂತಿಲ್ಲ, ಆದರೆ ಅವರ ಮನಸ್ಸಿಗೆ ಈ ಇಳಿ ವಯಸ್ಸಿನಲ್ಲಿ ನೋವು ಮಾತ್ರ ಕೊಡಬಾರದು. ಎಷ್ಟೇ ಬಿಡುವಿಲ್ಲದ ಕಾರ್ಯ ನಮಗಿದ್ದರೂ ದಿನಕ್ಕೊಮ್ಮೆ ಯಾದರೂ ನಗುತ್ತ ಒಂದೆರಡು ಒಳ್ಳೆಯ ಮಾತು ಆಡಿದರೆ ಅಷ್ಟೇ ಸಾಕು. ಇದರಿಂದ ಅವರು ದಿನವಿಡೀ ನೆಮ್ಮದಿಯಿಂದ ಕಾಲ ಕಳೆಯಲು ಸಾಧ್ಯವಾಗುತ್ತದೆ. ಅವರಿಗೆ ನೆಮ್ಮದಿ ನೀಡಿದ ತೃಪ್ತಿ ನಮಗೂ ಸಿಗುತ್ತದೆ.

* * *

ಈ ಮನಸ್ಸು ಎಷ್ಟು ವಿಚಿತ್ರ ! ಈ ಪ್ರಬಂಧ ಬರೆಯುತ್ತ ಬರೆಯುತ್ತ ಓದುಗರಿಗೆ ಇದು ಹಿಡಿಸೀತೇ ? ಎಂದು ನನ್ನ ಮನಸ್ಸು ಚಿಂತಿಸತೊಡಗಿತು ! ಆಗ ಇಲ್ಲಿಗೆ ಇದಕ್ಕೆ ಮುಕ್ತಾಯ ಕೊಡದೆ ಬೇರೆ ಉಪಾಯ ಕಾಣಲಿಲ್ಲ !

**ರುಕ್ಮಿಣಿಮಾಲಾ**
ಮನೆ ಸಂಖ್ಯೆ ೮, 'ಅತ್ರಿ', ಕಾಮಾಕ್ಷಿ ಆಸ್ಪತ್ರೆ ರಸ್ತೆ
ಸರಸ್ವತೀಪುರ, ಮೈಸೂರು – ೫೭೦೦೦೯

# ಧಾರಾವಾಹಿಗಳು ಮತ್ತು ಮಹಿಳೆ




ಆಧುನಿಕ ಜಗತ್ತಿನಲ್ಲಿ ಅತ್ಯಂತ ಪ್ರಭಾವಿ ಮಾಧ್ಯಮಗಳಲ್ಲೊಂದು ದೂರದರ್ಶನ. ಅಲ್ಲಿ ಧಾರಾವಾಹಿ ಮತ್ತು ರಿಯಾಲಿಟಿ ಶೋಗಳಿಗೇ ನಂ. ೧ ಸ್ಥಾನ. ಮಹಿಳೆಯರ ಪಾಲಿಗಂತೂ ಟಿ.ವಿ. ಧಾರಾವಾಹಿಗಳೇ ರಸದೌತಣ.

ಸುಮಾರು ೨೦ ವರ್ಷಗಳ ಹಿಂದಿನ ಮಾತು. ವಾರಕ್ಕೆ ಒಂದು ಬಾರಿ ಭಾನುವಾರ ಮಾತ್ರ ಡಿಡಿ ೯ರಲ್ಲಿ ರಾಮಾಯಣ, ಮಹಾಭಾರತ ಧಾರಾವಾಹಿಗಳು ಪ್ರಸಾರವಾಗುತ್ತಿದ್ದವು. ಜನರು ಅದನ್ನು ಕಾದು ಕುಳಿತು ವೀಕ್ಷಿಸುತ್ತಿದ್ದರು. ತದನಂತರ ಡಿಡಿ ೧ ಕನ್ನಡ ವಾಹಿನಿಯಲ್ಲಿ ಧಾರಾವಾಹಿಗಳು ಆರಂಭವಾಗಿ ವಾರದ ಐದು ದಿನಗಳು ಪ್ರಸಾರವಾಗತೊಡಗಿದವು. ಆಗ ಆರಂಭವಾದದ್ದೆ 'ಮನೆತನ' ಎಂಬ ಧಾರಾವಾಹಿ. ಇದು ಕನ್ನಡದ ಮೊಟ್ಟಮೊದಲ ಮೆಗಾ ಧಾರಾವಾಹಿ. ಮಧ್ಯಾಹ್ನ ೨.೩೦ರಿಂದ ೩.೩೦ರವರೆಗೆ 'ಮನೆತನ', 'ಜನನಿ' ಎಂಬ ಧಾರಾವಾಹಿಗಳಷ್ಟೇ ಆಗ ಪ್ರಸಾರವಾಗುತ್ತಿದ್ದದ್ದು. ಆದರೆ ಇಂದು ಹಾಗಿಲ್ಲ. ದಿನದ ೧೨ ಗಂಟೆಗಳಲ್ಲಿ ಮುಕ್ಕಾಲು ಪಾಲು ಟಿ.ವಿ. ಕಾರ್ಯಕ್ರಮಗಳು ಧಾರಾವಾಹಿಗಳಿಂದಲೇ ಆವರಿಸಿಬಿಟ್ಟಿವೆ. ಒಂದು ಬಾರಿಯಲ್ಲ, ದಿನಕ್ಕೆ ೨-೩ ಬಾರಿ ಪ್ರಸಾರವಾದರೂ ಕೂಡ ಅದನ್ನು ಕುಳಿತು ನೋಡುವವರಿದ್ದಾರೆ. ಹಾಗಾಗಿಯೆ ವಾರದಲ್ಲಿ ೫ ದಿನಗಳಿಗಷ್ಟೇ ಸೀಮಿತವಾಗಿದ್ದ ಧಾರಾವಾಹಿಗಳು ಶನಿವಾರ, ಭಾನುವಾರಗಳಿಗೂ ವಿಸ್ತರಣೆಯಾಗಿರುವುದು ಧಾರಾವಾಹಿಗಳಿಗೆ ಪ್ರೇಕ್ಷಕರು ಕೊಡುವ ಮಹತ್ವಕ್ಕೆ ಸಾಕ್ಷಿ.

ಟಿ.ವಿ. ಧಾರಾವಾಹಿಗಳೆಂದರೆ ನಿಜಕ್ಕೂ ಕೂಡ ಅದೊಂದು ಮಹಿಳಾಪ್ರಧಾನ ಲೋಕ. ಧಾರಾವಾಹಿಗಳ ಶೀರ್ಷಿಕೆಯಿಂದ ಹಿಡಿದು ಪಾತ್ರಗಳಲ್ಲೂ ವೀಕ್ಷಕರಲ್ಲೂ ಮಹಿಳೆಯರ ಸಂಖ್ಯೆಯೇ ಅಧಿಕ. ನಾವು ಗಮನಿಸಿರುವ ಹಾಗೆ ಸಿನಿಮಾಗಳಲ್ಲಿ ನಾಯಕ ಪ್ರಧಾನ ಕಥೆಯೇ ಹೆಚ್ಚು. ಕೆಲವು ಸಿನಿಮಾಗಳನ್ನು ಹೊರತುಪಡಿಸಿ ಬಹುತೇಕ ಸಿನಿಮಾಗಳಲ್ಲಿ ನಾಯಕರಿಗೇ ಪ್ರಧಾನ ಸ್ಥಾನ. ಆದರೆ ಧಾರಾವಾಹಿಗಳಲ್ಲಿ ಹಾಗಲ್ಲ. ಅಲ್ಲಿ ನಾಯಕಿಯರೇ ಪ್ರಧಾನ. ಆಕೆಯ ಸುತ್ತಲೇ ಧಾರಾವಾಹಿಯ ಕಥೆ ಹೆಣೆದು ಕೊಂಡಿರುತ್ತದೆ. ಶೀರ್ಷಿಕೆಗಳೇ ಅವುಗಳನ್ನು ಪ್ರತಿನಿಧಿಸುತ್ತವೆ. ಎಲ್ಲೋ ಕೆಲವನ್ನು ಹೊರತುಪಡಿಸಿದರೆ ಮಿಕ್ಕೆಲ್ಲ ಧಾರಾವಾಹಿಗಳಿಗೂ ಮಹಿಳಾ ಪ್ರಧಾನ ಶೀರ್ಷಿಕೆಗಳೇ ಇವೆ. ಉದಾಹರಣೆಗೆ, ಈಗಾಗಲೇ ಬಂದು ಹೋದ ಜನನಿ, ಪಾರ್ವತಿ, ಭಾಗೀರಥಿ, ಚಂದ್ರಿಕಾ, ಕಾದಂಬರಿ, ಲಕುಮಿ, ಸಾವಿತ್ರಿ, ಅಶ್ವಿನಿ ನಕ್ಷತ್ರ, ಅರಸಿ. ಇಲ್ಲವೆ ಈಗ ಪ್ರಸಾರವಾಗುತ್ತಿರುವ, ಲಕ್ಷ್ಮೀ ಬಾರಮ್ಮ, ಮಹಾದೇವಿ, ಗಾಂಧಾರಿ, ಅಕ್ಕ ಇರಬಹುದು. ಇನ್ನುಳಿದಂತೆ ಮಾಂಗಲ್ಯ, ಮೊಗ್ಗಿನ ಮನಸು, ಗಾಳಿಪಟ, ಬೆಂಕಿಯಲ್ಲಿ ಅರಳಿದ ಹೂವು ಮೊದಲಾದ ಧಾರಾವಾಹಿಗಳು ಕೂಡ ಮಹಿಳಾ ಪ್ರಧಾನ ಕಥೆಯನ್ನೇ ಆಧರಿಸಿವೆ. ಕೌಟುಂಬಿಕ ಧಾರಾವಾಹಿಗಳಲ್ಲೂ ಮಹಿಳೆಗೆ ಹೆಚ್ಚಿನ ಸ್ಥಾನ. ಹಾಗಾಗಿ ಧಾರಾವಾಹಿಗಳ ಇತಿಹಾಸದಲ್ಲಿ ಆಗಿನಿಂದ ಈಗಿನವರೆಗೂ ಮಹಿಳೆಯರೇ ಪ್ರಧಾನ.

ಹಾಗಾದರೆ ಧಾರಾವಾಹಿಗಳಲ್ಲಿ ಸ್ತ್ರೀಯರಿಗೇ ಪ್ರಧಾನ ಸ್ಥಾನ ಸಿಗಲು ಕಾರಣವೇನು ? ಎಂಬುದನ್ನು ಆಲೋಚಿಸಿದಾಗ ಸಿಗುವ ಉತ್ತರ ನಿಜಕ್ಕೂ ಧಾರಾವಾಹಿಗಳ ಬಹುದೊಡ್ಡ ಪ್ರೇಕ್ಷಕರು ಮಹಿಳೆಯರೆ. ಬಹುತೇಕ ಮಹಿಳೆಯರಿಗೆ ಟಿ.ವಿ. ಧಾರಾವಾಹಿಗಳೇ ಆಪ್ತಸಖಿಯಂತೆ. ಗೃಹಿಣಿಯರು ತಮ್ಮ ದಿನದ ಬಿಡುವಿನ ಬಹುತೇಕ ಸಮಯವನ್ನು ವಿನಿಯೋಗಿಸುವುದು

**ದಿವ್ಯ ಎಸ್.**

ಧಾರಾವಾಹಿಗಳ ವೀಕ್ಷಣೆಯಲ್ಲಿಯೆ. ಆ ಧಾರಾವಾಹಿಯ ಯಾವುದೋ ಒಂದು ಪಾತ್ರದಲ್ಲಿ ಮಹಿಳೆ ತನ್ನನ್ನು ತಾನು ಕಂಡುಕೊಳ್ಳುತ್ತಾಳೆ. ಕೆಲವೊಮ್ಮೆ ಎಷ್ಟರಮಟ್ಟಿಗೆ ಎಂದರೆ ಅಲ್ಲಿನ ಪಾತ್ರಗಳನ್ನು ತನಗೆ ಆರೋಪಿಸಿಕೊಳ್ಳುವ ಮಟ್ಟಿಗೆ ಆಕೆ ಧಾರಾವಾಹಿಗಳ ಬಹುದೊಡ್ಡ ಗ್ರಾಹಕಿ. ಹಾಗೆಂದ ಮಾತ್ರಕ್ಕೆ ಪುರುಷರು ಧಾರಾವಾಹಿಗಳನ್ನು ನೋಡುವುದಿಲ್ಲ ಎಂದರ್ಥವಲ್ಲ. ಸಂಖ್ಯೆಯ ದೃಷ್ಟಿಯಿಂದ ಮಹಿಳಾ ಪ್ರೇಕ್ಷಕರೇ ಅಧಿಕ ಎಂಬುದಂತೂ ನಿಜ. ಕನ್ನಡ ಟಿ.ವಿ. ಲೋಕದಲ್ಲಿ ಧಾರಾವಾಹಿಗಳು ಆರಂಭವಾದಾಗ ಹೇಗಿತ್ತೋ ತಿಳಿಯದು. ಆದರೆ ಇಂದು ೩-೪ ತಾಸು ಎಡಬಿಡದೆ ಧಾರಾವಾಹಿಗಳನ್ನು ನೋಡುವ ಮಹಿಳೆಯರಿದ್ದಾರೆ. ಅಷ್ಟರಮಟ್ಟಿಗೆ ಮಹಿಳೆ ಧಾರಾವಾಹಿಗಳ ಮುಖ್ಯ ಗ್ರಾಹಕಿಯಾಗಿದ್ದಾಳೆ. ಅದನ್ನು ಉಳಿಸಿಕೊಂಡು ಹೋಗುವುದಕ್ಕೆ ಚಾನಲ್‌ಗಳು ಕೂಡ ಒಂದರೊಡನೆ ಒಂದು ಪೈಪೋಟಿಗೆ ಬಿದ್ದಂತೆ ಪ್ರಯತ್ನಿಸುತ್ತಿವೆ. ೨೦ ವರ್ಷಗಳ ಧಾರಾವಾಹಿಯ ಇತಿಹಾಸದಲ್ಲಿ ವಾರಕ್ಕೆ ಏಕಮಾತ್ರ ಧಾರಾವಾಹಿ ನೋಡುತ್ತಿದ್ದ ಪ್ರೇಕ್ಷಕನಿಗೆ ಇಂದು ಕನ್ನಡವೊಂದರಲ್ಲೇ ದಿನಕ್ಕೆ ೫೦ಕ್ಕಿಂತ ಹೆಚ್ಚು ಧಾರಾವಾಹಿಗಳು ಪ್ರಸಾರವಾಗುತ್ತಿದ್ದು, ಯಾವುದನ್ನು ನೋಡಬೇಕೆಂಬ ಆಯ್ಕೆಯ ಸ್ವಾತಂತ್ರ್ಯವನ್ನು ನಮಗೇ ಬಿಟ್ಟಿವೆ.

ಧಾರಾವಾಹಿಗಳ ಕಥೆ ನಿರ್ದೇಶಕನ ಕಲ್ಪನೆಯ ಕೂಸು. ಹೆಣ್ಣನ್ನು ಕೇಂದ್ರೀಕರಿಸಿದಂತೆ ನಮ್ಮ ಸುತ್ತಮುತ್ತಲಿನ ಬದುಕನ್ನೇ ಸಾಮಾನ್ಯವಾಗಿ ಕಥೆಯಾಗಿಸಲಾಗುತ್ತದೆ. ಕೆಲವು ಧಾರಾವಾಹಿಗಳು ವಾಸ್ತವಕ್ಕೆ ಹತ್ತಿರ ಎನಿಸಿದರೂ ಇನ್ನು ಕೆಲವು ಧಾರಾವಾಹಿಗಳು ವಾಸ್ತವದಿಂದ ಸಾಕಷ್ಟು ದೂರ ನಿಲ್ಲುತ್ತವೆ. ಈಗಾಗಲೇ ಒಂದಷ್ಟು ಧಾರಾವಾಹಿಗಳು ಬಂದು ಹೋಗಿವೆ. ಪ್ರಸಾರವಾದ ಮತ್ತು

ಪ್ರಸಾರವಾಗುತ್ತಿರುವ ಎಲ್ಲ ಧಾರಾವಾಹಿಗಳೂ ಉತ್ತಮ ಎಂದು ಹೇಳುವಂತಿಲ್ಲ. ಧಾರಾವಾಹಿಗಳಲ್ಲಿ ಕಥೆ ಓಡುವುದಿಲ್ಲ. ತೇಲಿಕೊಂಡು ಹೋಗುತ್ತದೆ. ಆರಂಭದಲ್ಲಿ ಉತ್ತಮ ಕಥಾಹಂದರವುಳ್ಳ ಧಾರಾವಾಹಿಗಳು ಬರಬರುತ್ತಾ ಪಾತ್ರಗಳ ಅನಗತ್ಯ ಪ್ರವೇಶದಿಂದ, ಕಥೆಯನ್ನು ಎಳೆಯುವ ಉದ್ದೇಶದಿಂದ, ನಾನಾ ಕಂತುಗಳಲ್ಲಿ ಪ್ರಸಾರ ಮಾಡಬೇಕೆಂಬ ಹಂಬಲದಿಂದ ಅನಾವಶ್ಯಕವಾಗಿ ಕಥೆಯನ್ನು, ಪಾತ್ರವರ್ಗವನ್ನು ಸೃಷ್ಟಿಸಲಾಗುತ್ತದೆ (ಉದಾಹರಣೆ, ಮಾಂಗಲ್ಯ, ಕಾದಂಬರಿ, ಚರಣದಾಸಿ, ಅಶ್ವಿನಿ ನಕ್ಷತ್ರ ಧಾರಾವಾಹಿಗಳು).

ಇನ್ನು ಧಾರಾವಾಹಿಗಳಲ್ಲಿರುವ ಮಹಿಳೆ ಯಾವ ಮಾದರಿಯವಳು ? ಮಹಿಳೆಯರ ಪಾತ್ರವನ್ನು ಯಾವ ರೀತಿ ಬಿಂಬಿಸಲಾಗುತ್ತಿದೆ ? ಎಂಬುದನ್ನು ವಿಶ್ಲೇಷಿಸಿದಾಗ ಮುಖ್ಯವಾಗಿ ೩ ನೆಲೆಯಲ್ಲಿ ಹೆಣ್ಣಿನ ಪಾತ್ರವನ್ನು ನಿರೂಪಿಸಲಾಗುತ್ತಿದೆ ಅವೆಂದರೆ :

೧. ಹೆಣ್ಣು ಅಳುಮುಂಜಿ. ಎಲ್ಲವನ್ನೂ ಸಹಿಸುವಾಕೆ. ಕೇವಲ ಕುಟುಂಬವೊಂದೇ ಅವಳ ಪಾಲಿಗೆ. ಇಂತಹ ಚೌಕಟ್ಟಿನೊಳಗೆ ಇಟ್ಟು ನೋಡುವುದು. ನಮ್ಮಲ್ಲಿನ ಬಹುತೇಕ ಧಾರಾವಾಹಿಗಳು ವಿವಾಹಪೂರ್ವ ಪ್ರೇಮ ಸಂಬಂಧಗಳು, ವಿರಸಪೂರ್ಣ ವೈವಾಹಿಕ ಬದುಕು, ಬಹುಪತ್ನಿತ್ವ, ಅತ್ತೆ–ಸೊಸೆ ಜಗಳ, ಕುಟುಂಬ ಕಲಹ, ಇಂತಹ ವಿಷಯಗಳನ್ನೇ ಮುಖ್ಯವಾಗಿರಿಸಿ ಕೊಂಡಿವೆ. ಇವುಗಳೆಲ್ಲದರ ಹೊಡೆತ ಬೀಳುವುದು ಧಾರಾವಾಹಿಯ ನಾಯಕಿಗೆ. ಅದರ ಫಲ ಕಣ್ಣೀರ ಧಾರೆ. ಅದಕ್ಕೆಂದೇ ಕೆಲವು ನೆಗೆಟಿವ್ ಮಹಿಳಾ ಪಾತ್ರಗಳು ಸೃಷ್ಟಿಯಾಗಿರುತ್ತವೆ. ಇಲ್ಲಿ ಧಾರಾವಾಹಿಯ ನಾಯಕಿ ತನ್ನ ಮೇಲಾಗುವ ದೌರ್ಜನ್ಯವೆಲ್ಲವನ್ನೂ ಅರಿತು ಸಹಿಸಿಕೊಳ್ಳುವ ತ್ಯಾಗಮಯಿಯಂತೆ ಬಿಂಬಿತ ವಾದರೆ, ತನ್ನ ಕಾರ್ಯಸಾಧನೆಗಾಗಿ, ಸೇಡಿಗಾಗಿ ಸಂಬಂಧಗಳನ್ನೂ ಲೆಕ್ಕಿಸದೆ ಕೊಲ್ಲಿಸುವಷ್ಟು, ಕೊಲ್ಲುವಷ್ಟು ಕ್ರೂರಿಯಂತೆ ಖಳನಾಯಕಿಯಂತೆ ಬಿಂಬಿತವಾಗುತ್ತಾಳೆ. (ಉದಾಹರಣೆ, ಅಕ್ಕ ಧಾರಾವಾಹಿಯ ಭೂಮಿಕ–ದೇವಿಕ, ಅಶ್ವಿನಿ ನಕ್ಷತ್ರದ ಅಶ್ವಿನಿ–ಕೃತಿ, ಕುಲವಧುವಿನ ಧನ್ಯ–ವಚನ). ನಿಜಕ್ಕೂ ಮಹಿಳೆ ತನ್ನ ಮೇಲಾಗುವ ದೌರ್ಜನ್ಯವನ್ನ ಅರಿತೂ ವಿರೋಧಿಸದಷ್ಟು ಅಸಹಾಯಕಿಯೆ ? ರಕ್ತಸಂಬಂಧ ಗಳನ್ನೂ ಲೆಕ್ಕಿಸದೆ ಕೊಲ್ಲುವಷ್ಟು, ಕೊಲ್ಲಿಸುವಷ್ಟು ಕ್ರೂರಿಯೆ ? ಕುಟುಂಬಗಳಲ್ಲಿ ನಿಜಕ್ಕೂ ಈ ಸ್ಥಿತಿ ಇದೆಯೆ ? ಎಂಬುದು ಆಲೋಚಿಸಬೇಕಾದ ಸಂಗತಿ. ಪ್ರಸಾರವಾಗುತ್ತಿರುವ ಬಹುತೇಕ ಧಾರಾವಾಹಿಗಳಲ್ಲಿ ಈ ಸ್ಥಿತಿಯಿದ್ದು, ಮಹಿಳೆಯ ಕಣ್ಣೀರು ಮಾತ್ರ ನಿಂತಿಲ್ಲ.

೨. ಮಹಿಳೆಯರ ಮೇಲಿನ ಶೋಷಣೆ ಮತ್ತು ದೌರ್ಜನ್ಯಗಳಂತಹ ಮಹಿಳಾ ಸಮಸ್ಯೆಗಳ ಚಿತ್ರಣ. ಅನೇಕ ಧಾರಾವಾಹಿಗಳು ಈ ನಿಟ್ಟಿನಲ್ಲಿ ಪ್ರಮುಖ ಸ್ಥಾನ ಪಡೆದಿವೆ. ಉದಾಹರಣೆಗೆ, ಬಾಲಿಕಾ ವಧು (ಹಿಂದಿ), ಲಕುಮಿ, ಪುಟ್ಟಗೌರಿ ಮದುವೆ. ಈಗಾಗಲೇ ಪ್ರಸಾರವಾದ ಮತ್ತು ಪ್ರಸಾರವಾಗುತ್ತಿರುವ ಇಂತಹ ಕೆಲವು ಧಾರಾವಾಹಿಗಳು 'ಬಾಲ್ಯವಿವಾಹ'ದ ಸಮಸ್ಯೆ ಯನ್ನು ವಸ್ತುವಾಗಿರಿಸಿಕೊಂಡು, ಅದರಿಂದಾಗುವ ಕೇಡುಗಳನ್ನು ಎಳೆಎಳೆಯಾಗಿ ಬಿಂಬಿಸಿದಂಥವು. ಬಾಲ್ಯವಿವಾಹದ ವಿರುದ್ಧ ಜನಜಾಗೃತಿ ಮೂಡಿಸುವಲ್ಲಿ ಇದೊಂದು ಒಳ್ಳೆಯ ಪ್ರಯತ್ನ.

ಹಾಗೆಯೆ ತನ್ನ ಗಂಡನಿಂದಲೊ, ತಂದೆಯಿಂದಲೊ ಅಥವಾ ಕಾಲೇಜು ಮತ್ತು ಉದ್ಯೋಗ ವಲಯದಲ್ಲೊ ದೌರ್ಜನ್ಯಕ್ಕೆ ಒಳಗಾಗುವ ಹೆಣ್ಣಿನ ಪಾತ್ರಗಳನ್ನೂ ಕೂಡ ಕಾಣಲು ಸಾಧ್ಯವಿದೆ. ಉದಾಹರಣೆಗೆ, ತಂಗಾಳಿಯ ತುಳಸಿ, ಅಶ್ವಿನಿ ನಕ್ಷತ್ರದ ಅಶ್ವಿನಿ, ಗೋಕುಲದಲ್ಲಿ ಸೀತೆಯಲ್ಲಿನ ದಿಶಾ ಪಾತ್ರಗಳು.

೩. ಇವೆಲ್ಲವನ್ನೂ ಮೀರಿ ಆಕೆಯೂ ಕೂಡ ಒಬ್ಬಳು ಸಾಧಕಿ ಎನ್ನುವ ನಿಟ್ಟಿನಲ್ಲಿ ಅನೇಕ ಧಾರಾವಾಹಿಗಳಲ್ಲಿ ಮಹಿಳಾ ಸಮಸ್ಯೆಗಳನ್ನು ತೆರೆದಿಟ್ಟಿರುವುದು. ಸಾಮಾನ್ಯವಾಗಿ ಕೌಟುಂಬಿಕ ಧಾರಾವಾಹಿಗಳಲ್ಲಿ ಕಣ್ಣೀರಿನ ಕಥೆ ಸಹಜವಾದದ್ದು. ಆದರೆ ಎಲ್ಲ ಧಾರಾವಾಹಿಗಳು ಅದೇ ನೆಲೆಯಲ್ಲಿ ಹೆಣ್ಣಿನ ಚಿತ್ರಣ ಮಾಡಿಲ್ಲ. ಕೆಲವು ಧಾರಾವಾಹಿ ಗಳಾದರೂ ಬದಲಾವಣೆಯ ಕಡೆ ಮುಖ ಮಾಡಿವೆ. ಟಿ. ಎನ್. ಸೀತಾರಾಮ್ ಅವರ ಧಾರಾವಾಹಿಗಳು ಇದಕ್ಕೆ ಉತ್ತಮ ಉದಾಹರಣೆಗಳಾಗಿ ನಿಲ್ಲುತ್ತವೆ. ಅಲ್ಲಿ ಕಂಡುಬರುವ ಲಾಯರ್, ಎಸಿಪಿ, ಐಎಎಸ್ ಮೊದಲಾದ ಉನ್ನತ ಹುದ್ದೆಗಳಲ್ಲಿ ಮಹಿಳೆಯರಿಗೆ ಪ್ರಧಾನ ಸ್ಥಾನ ನೀಡಲಾಗಿದೆ. ತನ್ನ ಸುತ್ತಲಿನ ಸಮಸ್ಯೆಗಳೆಲ್ಲವನ್ನು ಮೀರಿ ಕುಟುಂಬದ ಜವಾಬ್ದಾರಿ ಹೊತ್ತು ನಿರ್ವಹಿಸಿದ ದಿಟ್ಟ ಮಹಿಳೆಯರ ಚಿತ್ರಣವೂ ಅನೇಕ ಧಾರಾವಾಹಿಗಳಲ್ಲಿದೆ. ಉದಾಹರಣೆಗೆ ಪಾರ್ವತಿಯ ಪಾರ್ವತಿ, ರಂಗೋಲಿಯ ಅಭಿನಯ ಪಾತ್ರಗಳು. ಇನ್ನುಳಿದಂತೆ ತಾಯಿಯಾಗಿ, ತಂಗಿಯಾಗಿ, ಸೊಸೆಯಾಗಿ, ಮಗಳಾಗಿ, ಗೆಳತಿಯಾಗಿ ಬೇರೆ ಬೇರೆ ನೆಲೆಯಲ್ಲಿ ಹೆಣ್ಣಿನ ಪಾತ್ರಗಳನ್ನು ಕಟ್ಟಿಕೊಡುವ ಕೆಲಸವನ್ನು ಧಾರಾವಾಹಿಗಳು ಮಾಡುತ್ತಿವೆ.

ಧಾರಾವಾಹಿಗಳು ಪ್ರೇಕ್ಷಕರ ಮೇಲೆ ಪರಿಣಾಮ ಬೀರುವ ಒಂದು ಪ್ರಭಾವಿ ಮಾಧ್ಯಮ. ಅಲ್ಲಿ ಮೂಡಿಬರುವ ಪಾತ್ರಗಳು ಯಾವುದೋ ಒಂದು ರೀತಿಯಲ್ಲಿ ಮಹಿಳೆಯರ ಮೇಲೆ ಪ್ರಭಾವ ಬೀರುತ್ತವೆ. ವಾಸ್ತವ ಪ್ರಪಂಚದ ಅರಿವೇ ಇಲ್ಲದಂತೆ ಧಾರಾವಾಹಿಗಳಲ್ಲೇ ತಲ್ಲೀನರಾಗಿ ಕುಳಿತು ನೋಡುವ ಮಹಿಳೆಯರು ನಮ್ಮಲ್ಲಿದ್ದಾರೆ. ಹಾಗೆ ವೀಕ್ಷಿಸುವಾಗ ಯಾವುದೋ ಒಂದು ಪಾತ್ರದಲ್ಲಿ ತನ್ನನ್ನು ಅವಳು ಗುರುತಿಸಿಕೊಳ್ಳುತ್ತಾಳೆ. ಈ ದೃಷ್ಟಿಯಿಂದ ಧಾರಾವಾಹಿಗಳು ಏನನ್ನು ಬಿತ್ತರಿಸುತ್ತವೆ ಎಂಬುದು ಮುಖ್ಯ. ಧಾರಾವಾಹಿಗಳಿಂದ 'ಮನರಂಜನೆ' ದೊರಕುತ್ತದೆ ಎಂಬುದು ಶಾಶ್ವತ ಸತ್ಯ. ಆದರೆ ಧಾರಾವಾಹಿಗಳಿರುವುದು ಕೇವಲ ಮನರಂಜನೆಗಾಗಿ ಮಾತ್ರವಲ್ಲ, ಅದಕ್ಕೂ ಮೀರಿ ಅವು ಪ್ರೇಕ್ಷಕರ ಮೇಲೆ ಪ್ರಭಾವ ಉಂಟುಮಾಡುತ್ತವೆ. ಧಾರಾವಾಹಿಗಳನ್ನು ಹೀಗೆ ನೋಡಿ ಹಾಗೆ ಬಿಡುವವರು ನಮ್ಮಲ್ಲಿ ಕಡಿಮೆ. ಧಾರಾವಾಹಿಯಲ್ಲಿನ ಯಾವುದೇ ಸಂಗತಿ ಪ್ರೇಕ್ಷಕನನ್ನು ಪ್ರಭಾವಿಸಬಹುದು. ಅದನ್ನು ಅನುಕರಿಸುವವರೂ ಇದ್ದಾರೆ. ಹಾಗಾಗಿ ಮನರಂಜನೆಯ ಹೆಸರಲ್ಲಿ ಇಲ್ಲಸಲ್ಲದ ವಿಚಾರಗಳ ವೈಭವೀಕರಣದ ಅಗತ್ಯವಿಲ್ಲ.

ಇಂದಿನ ಬಹುತೇಕ ಧಾರಾವಾಹಿಗಳಲ್ಲಿ 'ಬಹುಪತ್ನಿತ್ವ'ವನ್ನೆ ಬಿಂಬಿಸಲಾಗುತ್ತಿದೆ (ಚರಣದಾಸಿ, ಲಕ್ಷ್ಮೀ ಬಾರಮ್ಮ ಇನ್ನಿತರೆ ಧಾರಾವಾಹಿಗಳು). ಒಬ್ಬ ನಾಯಕನಿಗೆ ಇಬ್ಬರು ನಾಯಕಿಯರು ಅಥವಾ ಒಬ್ಬ ನಾಯಕಿಗೆ ಇಬ್ಬರು ನಾಯಕರು. ಅದರಲ್ಲಿ ಒಂದು ನೆಗೆಟಿವ್ ರೋಲ್. ಈ ಮೂರ್ವರ ನಡುವೆ ನಡೆಯುವ ಸಮರವೇ ಕಥಾಹಂದರ. ಹಾಗೆ ಜನರನ್ನು ಆಕರ್ಷಿಸುವ ದೃಷ್ಟಿಯಿಂದ ಗಿಮಿಕ್‌ಗಳ ಬಳಕೆ – ಇವೆಲ್ಲಾ ವಾಸ್ತವಕ್ಕಿಂತ ಸಾಕಷ್ಟು ದೂರ ನಿಲ್ಲುತ್ತವೆ. ಇವು ಧಾರಾವಾಹಿಗಳಲ್ಲಿರುವ ಕೆಲವು ಋಣಾತ್ಮಕ ಅಂಶಗಳು. ಇವನ್ನು ಹೊರತುಪಡಿಸಿದರೆ ಧಾರಾವಾಹಿಗಳು ಮನರಂಜನೆ ಒದಗಿಸುವ ಒಂದು ಮಾಧ್ಯಮ ಅಷ್ಟೆ.

ಒಟ್ಟಾರೆಯಾಗಿ ಹೇಳುವುದಾದರೆ, ಇಂದಿನ ದಿನಗಳಲ್ಲಿ ಅತಿ ದೊಡ್ಡ ಶಾಶ್ವತ ಪ್ರೇಕ್ಷಕವರ್ಗವನ್ನು ಹೊಂದಿರುವ ಟಿ.ವಿ. ಧಾರಾವಾಹಿಗಳು ಯಶಸ್ಸು ಸಾಧಿಸಬೇಕಾದಲ್ಲಿ ಧಾರಾವಾಹಿ ಜಗತ್ತು ಸುಧಾರಣೆ ಯಾಗಬೇಕಿದೆ. ಬೇಡವಾದ ವಿಚಾರಗಳನ್ನೋ ಇಲ್ಲದ ಗಿಮಿಕ್‌ಗಳನ್ನೋ ಬಿತ್ತರಿಸುವ ಬದಲು ಹೆಣ್ಣಿನಲ್ಲಿ ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ಬದಲಾವಣೆಯಾಗಬೇಕು.

**ದಿವ್ಯ ಎಸ್.**
ವಿಶ್ವೇಶ್ವರ ನಗರ, ಮೈಸೂರು



ಮಾನವ ಹಕ್ಕುಗಳ ದಿನ ಕೇವಲ ಆಚರಣೆಗೆ ಮಾತ್ರ ಸೀಮಿತವಾಗಬಾರದು. ಮಾನವ ಹಕ್ಕುಗಳ ಕುರಿತ ಜಾಗೃತಿ ಅಭಿಯಾನವಾಗಬೇಕು. ಯಾರಿಗೆ ಈ ಹಕ್ಕುಗಳ ಬಗ್ಗೆ ತಿಳಿಸಿಕೊಡಬೇಕೋ ಅವರನ್ನೇ ಕಾರ್ಯಕ್ರಮಕ್ಕೆ ಆಹ್ವಾನಿಸಬೇಕು. ಅಂದರೆ ಶೋಷಿತರನ್ನು, ದೀನದಲಿತರನ್ನು, ಬಡವರನ್ನು, ನಿರ್ಗತಿಕರನ್ನು, ಅಂಗವಿಕಲರನ್ನು ಆಹ್ವಾನಿಸಿ ಅವರ ಹಕ್ಕುಗಳ ಬಗ್ಗೆ ಮಾಹಿತಿ ನೀಡಬೇಕು. ಪ್ರತಿಯೊಬ್ಬ ನಾಗರಿಕರನ್ನೂ ದೈಹಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ನೈತಿಕವಾಗಿ, ಸಾಂಸ್ಕೃತಿಕವಾಗಿ ಸಶಕ್ತರನ್ನಾಗಿಸಲು ಪಣ ತೊಡಬೇಕು. ಅಂದಾಗ ಮಾತ್ರ ಈ ಆಚರಣೆಗೆ ಒಂದು ಗಟ್ಟಿಯಾದ ನೆಲೆ, ಬೆಲೆ ಸಿಗುತ್ತದೆ.

ಆರ್. ಬಿ. ಗುರುಬಸವರಾಜ

ಪ್ರತಿ ವರ್ಷ ಡಿಸೆಂಬರ್ ೧೦ರಂದು ಅಂತರರಾಷ್ಟ್ರೀಯ ಮಟ್ಟದಲ್ಲಿ 'ಮಾನವ ಹಕ್ಕುಗಳ ದಿನ'ವನ್ನಾಗಿ ಆಚರಿಸಲಾಗುತ್ತದೆ. ಜನತೆಗೆ ಮಾನವ ಹಕ್ಕುಗಳ ಬಗ್ಗೆ ತಿಳಿಸಿಕೊಡುವ ದಿನ ಇದು. ೧೯೪೮ರಲ್ಲಿ ವಿಶ್ವಸಂಸ್ಥೆಯ ಸಾಮಾನ್ಯ ಸಭೆಯಲ್ಲಿ ಆ ದಿನಾಂಕವನ್ನು 'ಮಾನವ ಹಕ್ಕುಗಳ ದಿನ' ಎಂದು ಘೋಷಣೆ ಮಾಡಲಾಯಿತು. ಅಂದಿನಿಂದ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳೆಲ್ಲವೂ ಮಾನವ ಹಕ್ಕುಗಳನ್ನು ಸಂರಕ್ಷಿಸುವ ಪಣ ತೊಟ್ಟವು.

"ಎಲ್ಲ ಮಾನವರೂ ಹುಟ್ಟಿನಿಂದ ಸಮಾನರು. ಜಾತಿ, ವರ್ಣ, ಲಿಂಗ, ಭಾಷೆ, ಧರ್ಮ, ಆಸ್ತಿ ಅಥವಾ ಇತರ ಯಾವುದೇ ಅಂಶಗಳನ್ನು ಪರಿಗಣನೆಗೆ ತೆಗೆದುಕೊಳ್ಳದೆ ಸಮಾನ ಹಕ್ಕು ಮತ್ತು ಗೌರವಗಳಿಗೆ ಎಲ್ಲರೂ ಪಾತ್ರರು" ಎಂಬುದು ಮಾನವ ಹಕ್ಕುಗಳ ಘೋಷಣೆ.

ವ್ಯಕ್ತಿಯ ಘನತೆ ಮತ್ತು ಸ್ವಾತಂತ್ರ್ಯ ರಕ್ಷಣೆಯೇ ಮಾನವ ಹಕ್ಕುಗಳ ಉದ್ದೇಶ. ಮಾನವ ಹಕ್ಕುಗಳನ್ನು ಎರಡು ರೀತಿಯಲ್ಲಿ ವರ್ಗೀಕರಿಸಬಹುದು. ಮೊದಲನೇ ವರ್ಗದಲ್ಲಿ ಬದುಕಿನ ಹಕ್ಕು, ಸ್ವಾತಂತ್ರ್ಯದ ಹಕ್ಕು ಇವೆ. ವ್ಯಕ್ತಿ ಭದ್ರತಾ ಹಕ್ಕು, ಆಲೋಚನಾ ಸ್ವಾತಂತ್ರ್ಯದ ಹಕ್ಕು. ಎರಡನೇ ವರ್ಗದಲ್ಲಿ ಸಾಮಾಜಿಕ ಭದ್ರತೆಯ ಹಕ್ಕು, ದುಡಿಮೆಯ ಹಕ್ಕು, ವಿಶ್ರಾಂತಿಯ ಹಕ್ಕು, ಸಮರ್ಪಕ ಜೀವನ ನಡೆಸುವ ಹಕ್ಕು ಹಾಗೂ ಶೈಕ್ಷಣಿಕ ಹಕ್ಕುಗಳೂ ಸೇರಿವೆ. ಭಾರತದ ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳನ್ನು ೧೪ನೇ ವಿಧಿಯಿಂದ ೩೨ನೇ ವಿಧಿಯವರೆಗೆ ನೀಡಿರುವುದು ಗಮನಾರ್ಹ.

ಬಡತನ ನಿರ್ಮೂಲನೆ ಮತ್ತು ಮಾನವನ ಯೋಗಕ್ಷೇಮವನ್ನು ಉತ್ತಮಪಡಿಸುವುದು ಮಾನವ ಹಕ್ಕುಗಳ ದಿನಾಚರಣೆಯ ಪ್ರಮುಖ ಗುರಿ. ಜೊತೆಗೆ ಮಾನವ ಹಕ್ಕುಗಳ ಬಗ್ಗೆ ಜನಜಾಗೃತಿ ಮೂಡಿಸುವುದು ಹಾಗೂ ಎಲ್ಲ ವರ್ಗ, ಸಮುದಾಯಗಳ ಅಲ್ಪಸಂಖ್ಯಾತರು, ಮಹಿಳೆಯರು, ಅಂಗವಿಕಲರು, ಬಡವರು ಸೇರಿದಂತೆ ದುರ್ಬಲ ವರ್ಗಗಳ ಜನರ ಬದುಕನ್ನು ಹಸನಾಗಿಸಲು ಶ್ರಮಿಸುವುದು ಈ ದಿನಾಚರಣೆಯ ಪ್ರಮುಖ ಉದ್ದೇಶ.

ಆದರೆ ಇಂದು ಮಾನವ ಹಕ್ಕುಗಳ ಕುರಿತು ಆಗಿರುವ ಮತ್ತು ಆಗುತ್ತಿರುವ ಚಟುವಟಿಕೆಗಳನ್ನು ಗಮನಿಸಿದರೆ ಭವಿಷ್ಯ ಕರಾಳ ಎನಿಸುತ್ತದೆ. ಏಕೆಂದರೆ ಮನುಷ್ಯನನ್ನು ಮಾನವ ಹಕ್ಕುಗಳಿಂದ ವಂಚಿಸುವುದು ಕ್ರೂರತ್ವವಾಗಿದೆ. ಇಂದು ಎಲ್ಲ ಮಾನವರ ಹಕ್ಕುಗಳು ಸುರಕ್ಷಿತವಾಗಿಲ್ಲ. ಅದರಲ್ಲೂ ಮಕ್ಕಳು ಮತ್ತು ಮಹಿಳೆಯರ ಜೀವನ ಅಭದ್ರವಾಗಿದೆ.

ಇಂದು ಬಹುತೇಕ ಮಾನವ ಹಕ್ಕುಗಳಿಂದ ಶೋಷಿತರಾಗುತ್ತಿರುವುದು ಕೆಳಹಂತದ ಸಾಮಾನ್ಯ ಜನರು ಎನ್ನುವುದು ಶೋಚನೀಯ. ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಉನ್ನತ ಸ್ಥಾನದಲ್ಲಿರುವವರು

# ಮಾನವ ಹಕ್ಕುಗಳ ಅಭಿಯಾನವಾಗಲಿ !







ಶೋಷಣೆ ಮಾಡುತ್ತಿದ್ದಾರೆ. ಮಾನವರೇ ಮಾನವರನ್ನು ಶೋಷಿಸುತ್ತಿರುವುದು ನಾಗರಿಕ ಸಮಾಜದ ಅಧಃಪತನವಲ್ಲವೇ ? ಜನಸಾಮಾನ್ಯರಿಗೆ ಮಾನವ ಹಕ್ಕುಗಳ ಬಗ್ಗೆ ಸರಿಯಾದ ಮಾಹಿತಿ ಇಲ್ಲದಿರುವುದು ಅಭಿವೃದ್ಧಿಯಾಗುತ್ತಿರುವ ಭಾರತದ ದುರಂತ. ಭಾರತದಲ್ಲಿ ಮಕ್ಕಳ, ಅದರಲ್ಲೂ ಬಾಲಕಿಯರ ಹಾಗೂ ಮಹಿಳೆಯರ ಹಕ್ಕುಗಳಿಗೆ ಯಾವುದೇ ಕಿಮ್ಮತ್ತಿಲ್ಲ ಎನ್ನುವುದನ್ನು ಪ್ರತಿನಿತ್ಯ ಕಾಣುತ್ತಿದ್ದೇವೆ. ಅಪರಾಧಿಗಳಿಗೆ ಎಷ್ಟೇ ಶಿಕ್ಷೆ ನೀಡಿದರೂ ಸಹ ಸಮಾಜದಲ್ಲಿ ಅಪರಾಧಗಳ ಸಂಖ್ಯೆ ಕಡಿಮೆಯಾಗಿಲ್ಲ. ಸರಕಾರಿ ಅಂಕಿ–ಅಂಶಗಳ ಪ್ರಕಾರ ಶಿಕ್ಷೆ ಜಾರಿಯಾಗುತ್ತಿರುವ ಪ್ರಕರಣಗಳ ಸಂಖ್ಯೆ ಶೇಕಡ ೫ರಷ್ಟು ಮಾತ್ರ. ಇನ್ನುಳಿದ ಶೇಕಡ ೯೫ರಷ್ಟು ಪ್ರಕರಣಗಳನ್ನು ರಾಜಕೀಯ ಅಥವಾ ಇನ್ನಾವುದೋ ಪ್ರಭಾವದಿಂದಾಗಿ ಮುಚ್ಚಿಹಾಕಲಾಗುತ್ತದೆ ಅಥವಾ ವಜಾಗೊಳಿಸಲಾಗುತ್ತದೆ.

ಮಹಿಳೆಯರ ಮೇಲೆ ಎಸಗುತ್ತಿರುವ ದೌರ್ಜನ್ಯ ಪ್ರಕರಣಗಳಲ್ಲಿ ದೇಶದ ರಾಜಧಾನಿ ದೆಹಲಿ ಮೊದಲನೇ ಸ್ಥಾನದಲ್ಲಿದ್ದರೆ, ರಾಜ್ಯದ ರಾಜಧಾನಿ ಬೆಂಗಳೂರು ಎರಡನೇ ಸ್ಥಾನದಲ್ಲಿದೆ. ಇತ್ತೀಚೆಗೆ ಇಡೀ ರಾಜ್ಯದ ಮೂಲೆ ಮೂಲೆಗಳಲ್ಲೂ ಸಹ ಅಪರಾಧ ಪ್ರಕರಣಗಳು ಹೆಚ್ಚುತ್ತಿವೆ. ಅಪರಾಧಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿರುವುದು ಕಳವಳಕಾರಿ ಸಂಗತಿ. ಇದಕ್ಕೆ ಕಾರಣ ಮಾನವ ಹಕ್ಕುಗಳ ಬಗ್ಗೆ ಸರಿಯಾದ ಮಾಹಿತಿ ಮತ್ತು ಜನಜಾಗೃತಿ ಇಲ್ಲದಿರುವುದು. ದೃಶ್ಯ ಮಾಧ್ಯಮಗಳೂ ಸಹ ಅಪರಾಧ ಹೆಚ್ಚಾಗಲು ಕಾರಣವಾಗಿವೆ ಎಂದರೆ ಅತಿಶಯೋಕ್ತಿಯೇನಲ್ಲ. ದೃಶ್ಯ ಮಾಧ್ಯಮಗಳು ಅತ್ಯಾಚಾರ ಪ್ರಕರಣಕ್ಕೆ ಪ್ರಚಾರ ಕೊಟ್ಟು ಮುನ್ನೆಲೆಗೆ ಬರುವಂತೆ ಮಾಡಲು ಎಷ್ಟು ಕಾರಣವಾಗಿವೆವೋ, ಅನ್ಯಾಯ, ಅಕ್ರಮ, ಅತ್ಯಾಚಾರಗಳಂತಹ ಹೇಯ ಕೃತ್ಯಗಳು ನಡೆಯಲೂ ಅಷ್ಟೇ ಕಾರಣವಾಗಿವೆ.

ಇಂದಿನ ಅಸಂಖ್ಯಾತ ಚಾನಲ್ಲುಗಳ ಸೀರಿಯಲ್ಲುಗಳಲ್ಲಿ, ಜಾಹೀರಾತುಗಳಲ್ಲಿ, ಕೆಟ್ಟ ಸಿನೆಮಾಗಳಲ್ಲಿ, ರಿಯಾಲಿಟಿ ಷೋಗಳಲ್ಲಿ ಹೆಣ್ಣನ್ನು ಒಂದು ರುಚಿಯಾದ ತಿನಿಸು ಎಂಬಂತೆ ಪ್ರತಿಬಿಂಬಿಸುತ್ತಿರುವುದೇ ಇದಕ್ಕೆಲ್ಲಾ ಕಾರಣ. ಕೆಟ್ಟದ್ದನ್ನು ಒಳ್ಳೆಯದನ್ನಾಗಿ, ಅನವಶ್ಯಕವಾದುದನ್ನು ಅವಶ್ಯಕವನ್ನಾಗಿ, ಅಶ್ಲೀಲವನ್ನು ಶೀಲವನ್ನಾಗಿ, ಅನರ್ಥವನ್ನು ಅರ್ಥವನ್ನಾಗಿಸಿ ಅಹಿತಕರವಾದುದನ್ನು ವೈಭವೀಕರಿಸಿ ತೋರಿಸುತ್ತಿರುವುದೇ ಮಾನವ ಹಕ್ಕುಗಳ ಉಲ್ಲಂಘನೆಯಾಗಲು ಕಾರಣ.

ಅಪರಾಧಗಳು ಹೆಚ್ಚಲು ಅಂತರ್ಜಾಲ ತಾಣಗಳೂ ಸಹ ಕಾರಣವಾಗಿವೆ. ಅಶ್ಲೀಲ ಜಾಲತಾಣ ವೀಕ್ಷಣೆಯಲ್ಲಿ ಭಾರತೀಯರೇ ಮುಂದು ಎನ್ನುತ್ತದೆ ಒಂದು ಸರ್ವೆ. ಕಾಮಕೇಳಿಯ ಅಶ್ಲೀಲ ದೃಶ್ಯಗಳನ್ನು ಇಂದಿನ ಯುವಕರ ಫೇವರಿಟ್ ಹವ್ಯಾಸವಾಗಿವೆ. ಇಂತಹ ಅಶ್ಲೀಲ ದೃಶ್ಯಗಳನ್ನು ಪರಸ್ಪರ ಹಂಚಿಕೊಳ್ಳಲು ಅನೇಕ ಆ್ಯಪ್‌ಗಳಿವೆ. ಇವೆಲ್ಲವೂ ಅಪರಾಧ ಹೆಚ್ಚಲು ಕಾರಣವಾಗುತ್ತಿವೆ. ಎಲ್ಲೆಲ್ಲಿ ಅಪರಾಧಗಳು ನಡೆಯುತ್ತವೆಯೋ ಅಲ್ಲೆಲ್ಲ ಮಾನವ ಹಕ್ಕುಗಳ ಉಲ್ಲಂಘನೆ ಆಗುತ್ತವೆ ಎಂಬುದನ್ನು ನಾವು ಗಮನಿಸಬೇಕಿದೆ.

ಮಾನವ ಹಕ್ಕುಗಳ ಕುರಿತು ಈಗ ಆಗಿರುವ ಮತ್ತು ಆಗುತ್ತಿರುವ ಕಹಿ ಘಟನೆಗಳನ್ನು ಕುರಿತು ಚಿಂತಿಸುವ ಬದಲು ಆಗಬೇಕಾದ ಕಾರ್ಯಗಳತ್ತ ಚಿತ್ತ ಹರಿಸಬೇಕಿದೆ. ಜನಪರ ಆಡಳಿತದ ಮೂಲಕ ದುಡಿದುಣ್ಣುವ ಜನರ ಬದುಕನ್ನು ಹಸನಾಗಿಸಲು ಅಗತ್ಯ ಕ್ರಮ ಕೈಗೊಳ್ಳಬೇಕಿದೆ. ಮಹಿಳೆಯರು, ಮಕ್ಕಳು, ಅದರಲ್ಲೂ ಬಾಲಕಿಯರ ಕುರಿತಂತೆ ಸಮಾಜದ ರೋಗಗ್ರಸ್ತ ಮನಃಸ್ಥಿತಿಯನ್ನು ಸರಿಪಡಿಸಬೇಕು. ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿರುವ ಗುತ್ತಿಗೆ ಪೌರಕಾರ್ಮಿಕರು, ಅಂಗನವಾಡಿ, ಆಶಾ ಕಾರ್ಯಕರ್ತರು, ಬಿಸಿಯೂಟ ಕಾರ್ಯಕರ್ತೆಯರು, ಗಾರ್ಮೆಂಟ್ಸ್ ನೌಕರರು, ಮನೆಗೆಲಸದವರು, ಬೀಡಿ ಕಟ್ಟುವವವರು, ಕಟ್ಟಡ ಕಾರ್ಮಿಕರು ಇವರಿಗೆ ಉದ್ಯೋಗ ಭದ್ರತೆ ನೀಡಬೇಕು.

ಪ್ರಜಾತಂತ್ರದ ಉಸಿರನ್ನೇ ಹತ್ತಿಕ್ಕಲು ಪ್ರಯತ್ನಿಸುವ ತುರ್ತು ಪರಿಸ್ಥಿತಿ, ಕೋಮುದಳ್ಳುರಿ, ನರಮೇಧ, ಭ್ರಷ್ಟಾಚಾರ, ಮೌಢ್ಯತೆಗಳನ್ನು ನಿರ್ಮೂಲನೆ ಮಾಡಬೇಕು. ಸರಕಾರಿ ವ್ಯವಸ್ಥೆಯನ್ನು ಅಲುಗಾಡಿಸುತ್ತಿರುವ ಖಾಸಗೀ ವ್ಯವಸ್ಥೆಗೆ ಕಡಿವಾಣ ಹಾಕಬೇಕು. ಅನ್ಯಾಯ, ಅತ್ಯಾಚಾರ, ದೌರ್ಜನ್ಯಗಳಿಂದ ನೊಂದವರಿಗೆ ಸಂವಿಧಾನ ನೀಡಿದ ಮಾನವ ಹಕ್ಕು ಕಾಯ್ದೆಯಡಿ ಪರಿಹಾರ ನೀಡಬೇಕು. ಅಶ್ಲೀಲ ಜಾಲತಾಣ ವೀಕ್ಷಣೆಗೆ ಸೂಕ್ತ ಕಡಿವಾಣ ಹಾಕಬೇಕು. ಇಲ್ಲದಿದ್ದಲ್ಲಿ ದುರಂತಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತದೆ.

ಮಾನವ ಹಕ್ಕುಗಳ ದಿನ ಕೇವಲ ಆಚರಣೆಗೆ ಮಾತ್ರ ಸೀಮಿತವಾಗಬಾರದು. ಮಾನವ ಹಕ್ಕುಗಳ ಕುರಿತ ಜಾಗೃತಿ ಅಭಿಯಾನವಾಗಬೇಕು. ಯಾರಿಗೆ ಈ ಹಕ್ಕುಗಳ ಬಗ್ಗೆ ತಿಳಿಸಿಕೊಡಬೇಕೋ ಅವರನ್ನೇ ಕಾರ್ಯಕ್ರಮಕ್ಕೆ ಆಹ್ವಾನಿಸಬೇಕು. ಅಂದರೆ ಶೋಷಿತರನ್ನು, ದೀನದಲಿತರನ್ನು, ಬಡವರನ್ನು, ನಿರ್ಗತಿಕರನ್ನು, ಅಂಗವಿಕಲರನ್ನು ಆಹ್ವಾನಿಸಿ ಅವರ ಹಕ್ಕುಗಳ ಬಗ್ಗೆ ಮಾಹಿತಿ ನೀಡಬೇಕು. ಪ್ರತಿಯೊಬ್ಬ ನಾಗರಿಕರನ್ನೂ ದೈಹಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ನೈತಿಕವಾಗಿ, ಸಾಂಸ್ಕೃತಿಕವಾಗಿ ಸಶಕ್ತರನ್ನಾಗಿಸಲು ಪಣ ತೊಡಬೇಕು. ಅಂದಾಗ ಮಾತ್ರ ಈ ಆಚರಣೆಗೆ ಒಂದು ಗಟ್ಟಿಯಾದ ನೆಲೆ, ಬೆಲೆ ಸಿಗುತ್ತದೆ. ಪ್ರತಿಯೊಂದು ಹಳ್ಳಿ , ಗ್ರಾಮ, ತಾಲೂಕು, ಜಿಲ್ಲೆ, ರಾಜ್ಯ, ದೇಶ ಹೀಗೆ ಎಲ್ಲಾ ಹಂತಗಳಲ್ಲೂ ಮಾನವ ಹಕ್ಕು ಚಳುವಳಿಯ ಕಾವು ಹೆಚ್ಚಬೇಕು. ಮಾನವ ಹಕ್ಕು ದಿನಾಚರಣೆಯು ಉತ್ತಮ ವಿಶ್ವ ಸೃಷ್ಟಿಸುವ ಮಾನವೀಯತೆಯ ಹೋರಾಟ ಎಂಬುದನ್ನು ಪ್ರತಿಯೊಬ್ಬರೂ ಅರ್ಥೈಸಿಕೊಳ್ಳಬೇಕು. ಪ್ರತಿದಿನವೂ ಎಲ್ಲ ಮಾನವರೂ ಮಾನವ ಹಕ್ಕುಗಳನ್ನು ಅನುಭವಿಸುವಂತಾಗಬೇಕು. ಅಂದಾಗ ಮಾತ್ರ ಸುಖೀ ರಾಜ್ಯದ ಕನಸು ನನಸಾಗುತ್ತದೆ.

ಆತ್ಮಬಲ ಹೆಚ್ಚಿಸಿಕೊಳ್ಳಲು ಇದು ಸಕಾಲ. ಅದಕ್ಕಾಗಿ ಪ್ರತಿಯೊಬ್ಬ ನಾಗರಿಕರೂ ಸಜ್ಜಾಗಬೇಕು, ಅಲ್ಲವೇ ? ಮಹಾನ್ ಮಾನವತಾವಾದಿ, ಚಿಂತಕ ಕಾರ್ಲ್ ಮಾರ್ಕ್ಸ್ ಹೇಳುವಂತೆ "ಮಾನವ ಕುಲದ ಒಳಿತಿಗಾಗಿ ಎಲ್ಲದಕ್ಕಿಂತ ಹೆಚ್ಚು ದುಡಿಯುವುದಕ್ಕೆ ಅವಕಾಶವಿರುವಂಥ ಕೆಲಸವನ್ನು ಆರಿಸಿಕೊಳ್ಳಲು ನಮಗೆ ಸಾಧ್ಯವಾದರೆ, ಎಂಥ ಕಷ್ಟದ ಭಾರವೂ ನಮ್ಮನ್ನು ಬಗ್ಗಿಸಲಾರದು." ಅಂದರೆ ಮಾನವ ಜನಾಂಗದ ಪ್ರಗತಿಗಾಗಿ ಸಮಾನತೆಯ ಹೋರಾಟದಲ್ಲಿ ಎಂತಹ ಕಷ್ಟಗಳು ಬಂದರೂ ಧೈರ್ಯದಿಂದ ಕೆಲಸಮಾಡುವುದೇ ಪರಮಸಂತೋಷ ಎಂಬ ಅವರ ಮಾತು ಮಾನವ ಹಕ್ಕುಗಳನ್ನು ಸಂರಕ್ಷಿಸಲು ಸ್ಫೂರ್ತಿಯ ಸೆಲೆ, ಅಲ್ಲವೇ ?

**ಆರ್. ಬಿ. ಗುರುಬಸವರಾಜ**
ಶಿಕ್ಷಕರು ಹಾಗೂ ಹವ್ಯಾಸಿ ಬರಹಗಾರರು
ಹೊಳಗುಂದಿ ಅಂಚೆ, ಹಡಗಲಿ ತಾಲೂಕು, ಬಳ್ಳಾರಿ ಜಿಲ್ಲೆ – ೫೮೩ ೨೧೯

# ಬಡವನ ಬೌದ್ಧಿಕ ಆಸ್ತಿ ಸೂಚಿಕೆಗಳಾಗಿ ಭೌಗೋಳಿಕ ಸೂಚಿಗಳು

ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಒಂದೇ ನಿರ್ದಿಷ್ಟ ಸ್ಥಳದಿಂದ ಉತ್ಪತ್ತಿಯಾಗುವ ಉತ್ಪನ್ನ ಕೇಳಿ ಸಿಗುವ ಹಣೆಪಟ್ಟಿ, ನಿರ್ದಿಷ್ಟ ಪ್ರದೇಶದಿಂದ ಹೊರಬರುವ ಉತ್ಪನ್ನವು ವಿಶಿಷ್ಟವಾದ ಗುಣವನ್ನೇ ಹೊಂದಿದ್ದು ತನ್ನದೇ ಆದ ಮಾರುಕಟ್ಟೆಯನ್ನು ಸೃಷ್ಟಿಸಿಕೊಳ್ಳುವ ಶಕ್ತಿಯನ್ನು ಹೊಂದಿರುತ್ತದೆ. ಅನೇಕ ಕಡೆಗಳಲ್ಲಿ ಇರಬಹುದಾದ ಇಂಥ ವೈಶಿಷ್ಟ್ಯಗಳನ್ನು ಗುರುತಿಸಿ ಅವುಗಳಿಗೆ ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಹಣೆಪಟ್ಟಿಯನ್ನು ಹಚ್ಚುವುದು ಮಾರುಕಟ್ಟೆಯ ದೃಷ್ಟಿಯಿಂದ ಅಗತ್ಯ ಮತ್ತು ಉಪಯುಕ್ತ.

ಮಂಜುನಾಥ ಎನ್. ಜಿ.

ಕೆಲವೊಂದು ಸರಕಾರಗಳು ಅವುಗಳು ಉತ್ಪಾದನೆಯಾಗುವ ಭೌಗೋಳಿಕ ಸ್ಥಳದಿಂದ ಗುರುತಿಸಲ್ಪಡುತ್ತವೆ ಮತ್ತು ಅವುಗಳ ಗುಣಲಕ್ಷಣಗಳು ಆಯಾ ಸ್ಥಳದ ಮೇಲೆ ನಿರ್ಧರಿತವಾಗುತ್ತವೆ. ಒಂದೊಂದು ಊರು ಒಂದೊಂದು ರೀತಿಯಲ್ಲಿ ವಿಶೇಷವಾಗಿರುತ್ತದೆ. ಬೆಳೆಯುವ ಹಣ್ಣು, ತಯಾರಿಸುವ ಪದಾರ್ಥ, ಸಿದ್ಧಪಡಿಸುವ ಉತ್ಪನ್ನ ಎಲ್ಲವೂ ಆ ನೆಲದ ಗುಣಕ್ಕೆ ತಕ್ಕಂತೆ ರೂಪ ಪಡೆದಿರುತ್ತವೆ. ಅಂಥವುಗಳನ್ನು ಗುರುತಿಸಿ ಪರಂಪರೆಯನ್ನು ಪೋಷಿಸುವ ಮತ್ತು ಅದರ ಮಾರುಕಟ್ಟೆಯನ್ನು ವಿಸ್ತರಿಸುವ ನಿಟ್ಟಿನಲ್ಲಿ ಭೌಗೋಳಿಕ ಸೂಚಿಯನ್ನು ಸಿದ್ಧಪಡಿಸಲಾಗುತ್ತದೆ. ಈ ರೀತಿಯಾಗಿ ನಿರ್ದಿಷ್ಟ ಸ್ಥಳದಿಂದ ಗುರುತಿಸಲ್ಪಡುವ ವಸ್ತುಗಳು ಭೌಗೋಳಿಕ ಸೂಚಿಕೆಗಳು ಅಥವಾ ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಎಂದು ಕರೆಯಲ್ಪಡುತ್ತವೆ. ಈ ನಿಟ್ಟಿನಲ್ಲಿ ಡಾರ್ಜಿಲಿಂಗ್ ಚಾ, ಕಾಂಚೀಪುರ ಸೀರೆ, ಕಾಶ್ಮೀರ್ ಪಶ್ಮಿನ್ ಶಾಲು, ಢಾಕಾ ಮಸ್ಲಿನ್ ಇವುಗಳು ಕೆಲವು ಉದಾಹರಣೆಗಳು. ಜಾಗತಿಕ ಸ್ತರದಲ್ಲಿ ಶಾಂಪೇನ್ ವೈನ್, ಚೀನಾ ಸಿಲ್ಕ್‌ಗಳು ಉದಾಹರಣೆಯಾಗಿವೆ. ವಸ್ತುಗಳು ಮತ್ತು ಅವುಗಳು ಬೆಳೆದು ಬಿದ್ದಿರುವ ಸ್ಥಳಗಳ ನಡುವಿನ ಸಂಬಂಧವೇ ಭೌಗೋಳಿಕ ಸೂಚಿಕೆಗಳ ನಿರೂಪಣೆಗೆ ಮೂಲಾಧಾರ. ಭಾರತದಲ್ಲಿ ಇದಕ್ಕಾಗಿ ಪ್ರತ್ಯೇಕ ಕಾನೂನು ಜಾರಿಯಲ್ಲಿದ್ದು, ಇವುಗಳ ನೋಂದಣಿ ಮತ್ತು ಸಂರಕ್ಷಣೆ ಪೇಟೆಂಟ್ ಡಿಸೈನ್ ಮತ್ತು ಟ್ರೇಡ್‌ಮಾರ್ಕ್‌ಗಳ ಮಹಾನಿಯಂತ್ರಕರು ನಿಯುಕ್ತರಾಗುವರು. ಇದೇ ರೀತಿ ವಿಶ್ವ ವ್ಯಾಪಾರ ಸಂಸ್ಥೆ ಕೂಡ ಭೌಗೋಳಿಕ ಸೂಚಿಕೆ ವಸ್ತುಗಳು ತಮ್ಮ ಗುಣಮಟ್ಟ ಮತ್ತು ಉಪಯುಕ್ತತೆಗಳನ್ನು ಉತ್ತಮಪಡಿಸಿ ತಮ್ಮದೇ ಆದ ಮಾರುಕಟ್ಟೆ ಪಾಲನ್ನು ಹೆಚ್ಚಿಸಿಕೊಳ್ಳಲು ಅನುಕೂಲವಾಗಿದೆ.

ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಒಂದೇ ನಿರ್ದಿಷ್ಟ ಸ್ಥಳದಿಂದ ಉತ್ಪತ್ತಿಯಾಗುವ ಉತ್ಪನ್ನ ಕೇಳಿ ಸಿಗುವ ಹಣೆಪಟ್ಟಿ, ನಿರ್ದಿಷ್ಟ ಪ್ರದೇಶದಿಂದ ಹೊರಬರುವ ಉತ್ಪನ್ನವು ವಿಶಿಷ್ಟವಾದ ಗುಣವನ್ನೇ ಹೊಂದಿದ್ದು ತನ್ನದೇ ಆದ ಮಾರುಕಟ್ಟೆಯನ್ನು ಸೃಷ್ಟಿಸಿಕೊಳ್ಳುವ ಶಕ್ತಿಯನ್ನು ಹೊಂದಿರುತ್ತದೆ. ಅನೇಕ ಕಡೆಗಳಲ್ಲಿ ಇರಬಹುದಾದ ಇಂಥ ವೈಶಿಷ್ಟ್ಯಗಳನ್ನು ಗುರುತಿಸಿ ಅವುಗಳಿಗೆ ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಹಣೆಪಟ್ಟಿಯನ್ನು ಹಚ್ಚುವುದು ಮಾರುಕಟ್ಟೆಯ ದೃಷ್ಟಿಯಿಂದ ಅಗತ್ಯ ಮತ್ತು ಉಪಯುಕ್ತ.

ಉತ್ಪನ್ನಗಳ ಅಧಿಕೃತತೆಯನ್ನು (ಪ್ರಮಾಣೀಕರಿಸುವ ಈ ಪದ್ಧತಿ ಗುಣಮಟ್ಟವನ್ನು ಪರೋಕ್ಷವಾಗಿ ಆದ್ಯತೆಯನ್ನಾಗಿಸುತ್ತದೆ. ನಕಲಿ ಉತ್ಪನ್ನಗಳ ಜಾಲವನ್ನು ಒಡೆಯುವುದು ಈ ಕಾನೂನಿನ ಉದ್ದೇಶವೂ ಹೌದು. ಈ ಹಿನ್ನೆಲೆಯಲ್ಲಿ ೧೯೯೯ರಲ್ಲಿ ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಆಫ್ ಗೂಡ್ಸ್ (ನೋಂದಣಿ ಮತ್ತು ರಕ್ಷಣೆ) ಕಾಯ್ದೆ ಜಾರಿಗೆ ತರಲಾಯಿತು (ಕಾರ್ಯ ರೂಪಕ್ಕೆ ಬಂದಿದ್ದು ೨೦೦೩ರಲ್ಲಿ. ಚೆನ್ನೈನಲ್ಲಿ ನೋಂದಣಿ ನಡೆಯುತ್ತದೆ). ಅದರಂತೆ ಪ್ರತಿವರ್ಷ ದೇಶದ ವಿವಿಧ ಭಾಗಗಳ ಪದಾರ್ಥಗಳು ಜಿ.ಪಿ. ಮುದ್ರೆಯನ್ನು ಪಡೆಯುತ್ತಿದ್ದು, ವಿದೇಶಿ ಮಾರುಕಟ್ಟೆಯ ಗಮನವನ್ನು ಸೆಳೆಯುತ್ತಿವೆ.

೨೦೦೩ರಲ್ಲಿ ಡಾರ್ಜಿಲಿಂಗ್ ಟೀ, ಜಿ.ಐ. ಟ್ಯಾಗ್‌ಅನ್ನು ಪಡೆದ ಮೊದಲ ಭಾರತೀಯ ಉತ್ಪನ್ನವೆನಿಸಿಕೊಂಡಿತು. ಇದುವರೆಗೂ ೨೩೫ ಉತ್ಪನ್ನಗಳು ಈ ಪಟ್ಟಿಯಲ್ಲಿ ಸೇರ್ಪಡೆಯಾಗಿವೆ.

**ಭೌಗೋಳಿಕ ಸೂಚಿಕೆಗಳು**

ಭೌಗೋಳಿಕ ಸೂಚಿ ಅಂದರೆ ಉತ್ಪನ್ನವೊಂದು ರಾಷ್ಟ್ರೀಯ ಮಟ್ಟದಲ್ಲಿ ದಾಖಲಾಗುವ ಹೆಸರು ಯಾವುದೇ ಪ್ರದೇಶದ ವಿಶಿಷ್ಟ ಉತ್ಪನ್ನಕ್ಕೆ ಕೊಡುವ ಹಕ್ಕು. ಅದು ತೋಟಗಾರಿಕೆ ಅಥವಾ ಕೃಷಿ ಆಗಿರಬಹುದು. ಕರಕುಶಲ ಇಲ್ಲವೇ ಉತ್ಪಾದನಾ ಕ್ಷೇತ್ರಗಳಾಗಿದ್ದಾಗಿರಬಹುದು. ಇವುಗಳಿಗೆ ತಮ್ಮದೇ ಆದ ವಿಶಿಷ್ಟ ಗುಣಗಳಿರುತ್ತವೆ. ಉದಾಹರಣೆಗೆ, ಭೌಗೋಳಿಕ ಬೆಳೆಗಳನ್ನು ತೆಗೆದುಕೊಂಡರೆ ಒಂದೊಂದು ಪ್ರದೇಶದ ವಾತಾವರಣ ಹಾಗೂ ಮಣ್ಣಿನ ಗುಣಧರ್ಮಗಳಲ್ಲಿ ಬೆಳೆದ ಬೆಳೆಗಳು ವಿಶಿಷ್ಟವಾಗಿರುತ್ತವೆ. ಅಂಥವುಗಳಿಗೆ ಬೇಡಿಕೆಯೂ ಹೆಚ್ಚು. ಆದರೆ ಇದೇ ಬೆಳೆಯನ್ನು ಬೇರೆ ಭೌಗೋಳಿಕ ವಾತಾವರಣವಿರುವ ಪ್ರದೇಶದಲ್ಲಿ ಬೆಳೆದರೆ ಮೂಲ ವೈಶಿಷ್ಟ್ಯ ಕಾಣುವುದಿಲ್ಲ. ಬೇರೆಡೆ ಬೆಳೆದ ಇಂಥ ಬೆಳೆಗಳನ್ನು ಇವುಗಳ ಊರಿನ ಹೆಸರಿನಲ್ಲಿ ಮಾರಾಟ ಮಾಡಿದ್ದಲ್ಲಿ ಆ ಬೆಳೆಗೆ ಇರುವ ಮೌಲ್ಯವನ್ನು ಕಡಿಮೆ ಮಾಡಿದಂತಾಗುತ್ತದೆ. ಇದನ್ನು ತಪ್ಪಿಸುವ ಉದ್ದೇಶದಿಂದ ಇವುಗಳ ನೋಂದಣಿ ಮಾಡಿಸುವ ವ್ಯವಸ್ಥೆ ಮಾಡಲಾಗಿದೆ. ಇಲ್ಲಿನ ಮಾನದಂಡಗಳನ್ನು ಹೊಂದಿದ್ದರೆ ಸಾಕು, ಭೌಗೋಳಿಕ ಹಿನ್ನೆಲೆಯುಳ್ಳ ಬೆಳೆಗಳು (ಜಿ.ಐ. ಕ್ರಾಪ್ – ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಕ್ರಾಪ್) ಎಂಬ ಮುದ್ರೆ ಬೀಳುತ್ತದೆ.

ಯಾವುದೇ ಗುಣಮಟ್ಟದ ವಸ್ತು ಅಥವಾ ಸಾಮಗ್ರಿಗಳ ಮೇಲೆ ಅವುಗಳ ಮೂಲ ಘಟಕಗಳ ಪ್ರಮಾಣದೊಂದಿಗೆ ಅವು ಎಲ್ಲಿ ತಯಾರಿಸಲ್ಪಟ್ಟಿವೆ ಎಂಬ ಸ್ಥಳ ವಿವರಗಳನ್ನು ಕೂಡ ನಮೂದಿಸಲಾಗಿರುತ್ತದೆ. ಇದಕ್ಕೆ ಭೌಗೋಳಿಕ ಸೂಚಿ ಎಂದು ಕರೆಯುತ್ತಾರೆ.

* ಕೆಲವು ವಸ್ತುಗಳನ್ನು ನಿರ್ದಿಷ್ಟವಾಗಿ ಗುರುತಿಸುವ ರೀತಿಯಾಗಿದೆ.
* ಇದು ನಿರ್ದಿಷ್ಟ ಭೌಗೋಳಿಕ ಪ್ರದೇಶದಿಂದ ಬೆಳೆದು ಬಂದಿದೆ.
* ಉತ್ಪನ್ನಗಳು ಆಯಾ ನಿರ್ದಿಷ್ಟ ಸ್ಥಳದಲ್ಲೇ ಉತ್ಪಾದನೆಯಾಗಿರಬೇಕು, ಸಂರಕ್ಷಣೆಯಾಗಿರಬೇಕು ಅಥವಾ ತಯಾರಾಗಿರಬೇಕು.
* ಈ ವಸ್ತುಗಳಿಗೆ ವಿಶಿಷ್ಟ ಗುಣಮಟ್ಟದ ಪ್ರಖ್ಯಾತ ಅಥವಾ ಇತರ ವಿಶೇಷ ಗುಣಲಕ್ಷಣಗಳಿರಬೇಕು.

**ಯಾರು ನೋಂದಣಿ ಮಾಡಬಹುದು ?**

ಯಾವುದೇ ಸಂಘಟನೆಯ ವ್ಯಕ್ತಿ, ಉತ್ಪಾದಕ, ಸಮೂಹ ಉತ್ಪಾದಕರು ನೋಂದಣಿ ಮಾಡಿಸಿಕೊಳ್ಳಬಹುದು. ಆದರೆ ಅವುಗಳು ಜಿ.ಐ.ನ ನೀತಿ–ನಿರೂಪಣೆ ಗೊಳಪಟ್ಟಿರಬೇಕು. ಆ ಭಾಗದವರೇ ನೋಂದಣಿಗೆ ಅರ್ಹರಾಗಿದ್ದು ಅಧಿಕೃತ ಹಕ್ಕುದಾರರು ಮಾತ್ರ ಅರ್ಜಿ ಸಲ್ಲಿಸಬೇಕು. ಸ್ಥಾಪಿಸಲ್ಪಟ್ಟ ಸಂಘ–ಸಂಸ್ಥೆಗಳು ನೋಂದಾಯಿತ ಮಾಲೀಕನಾಗಬಹುದು. ನೋಂದಾಯಿತನ ಮೂಲಕ ಹೆಸರನ್ನೇ ಅರ್ಜಿಯಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.

* ಭೌಗೋಳಿಕ ಸೂಚಿಕೆಗಳ ನೋಂದಣಿ.
* ಭೌಗೋಳಿಕ ಸೂಚಿಕೆಗಳ ನೋಂದಣಿಗೆ ಉತ್ಪಾದಕರು ಯಾವುದೇ ವ್ಯಕ್ತಿಗಳ ಸಂಘಟನೆ, ಕಾನೂನು ರೀತ್ಯಾ ಸ್ಥಾಪಿಸಲ್ಪಟ್ಟ ಸಂಘ–ಸಂಸ್ಥೆಗಳು ನೋಂದಣಿಗೆ ಅರ್ಜಿ ಹಾಕಬಹುದು.
* ಅರ್ಜಿದಾರರು ಉತ್ಪಾದಕರ ಹಿತಾಸಕ್ತಿಯನ್ನು ಪ್ರತಿನಿಧಿಸಬೇಕು.
* ಅರ್ಜಿಯು ನಿಗದಿತ ನಮೂನೆಯಲ್ಲಿ ಬರಹದ ರೂಪದಲ್ಲಿರಬೇಕು. ಅರ್ಜಿಯನ್ನು ರಿಜಿಸ್ಟ್ರಾರ್, ಜಿಯಾಗ್ರಫಿಕಲ್ ಇಂಡಿಕೇಷನ್ಸ್ ಇವರಿಗೆ ಸಂಬಂಧಿಸಿದಂತೆ ನಿಗದಿತ ನೋಂದಣಿ ಶುಲ್ಕದೊಡನೆ ಸಲ್ಲಿಸಬೇಕು.
* ಅರ್ಜಿಯಲ್ಲಿ ನಮೂದಿಸಲ್ಪಟ್ಟ ವ್ಯಕ್ತಿ, ವ್ಯಕ್ತಿಗಳ ಸಂಘಟನೆ ಕಾನೂನು ರೀತ್ಯಾ ಭೌಗೋಳಿಕ ಸೂಚಿಕೆಯ ನೋಂದಾಯಿತ ಮಾಲೀಕರಾಗುವರು.
* ನೋಂದಾಯಿತ ಅನುಭೋಗದಾರನು ಮೃತನಾದಾಗ ಅವನ ಅಧಿಕೃತ ವಾರಸುದಾರನು ನೋಂದಾಯಿತ ಹಕ್ಕುದಾರನಾಗಿರುತ್ತಾನೆ.
* ಇಲ್ಲಿ ಒಂದು ಬಾರಿ ಜಿ.ಐ. ಹಕ್ಕು ಪಡೆದರೆ ಸಾಕೇ ಎಂಬ ಪ್ರಶ್ನೆ ಮೂಡುವುದು ಸಹಜ. ಇಲ್ಲ, ಜಿ.ಐ. ಹಕ್ಕಿನ ಅವಧಿ ೧೦ ವರ್ಷ ಮಾತ್ರ. ಅನಂತರ ಮತ್ತೆ ಅರ್ಜಿ ಸಲ್ಲಿಸಬೇಕು. ಆಗಿನ ವಸ್ತುಸ್ಥಿತಿ ನೋಡಿಕೊಂಡು ಪುನಃ ಮಾನ್ಯತೆ ನೀಡಬೇಕೇ ಬೇಡವೇ ಎಂಬುದು ನಿರ್ಧಾರವಾಗುತ್ತದೆ. ಇದು ಪ್ರತಿ ಹತ್ತು ವರ್ಷಕ್ಕೊಮ್ಮೆ ನಡೆಯುವ ಪ್ರಕ್ರಿಯೆ. ಹಸಿರು ನಿಶಾನೆ ದೊರೆತರೆ ಮತ್ತು ೧೦ ವರ್ಷದವರೆಗೆ ಯಾವ ಸಮಸ್ಯೆಯೂ ಇಲ್ಲ. ಇಲ್ಲದಿದ್ದರೆ ಜಿ.ಐ. ಪಟ್ಟಿಯಿಂದ ಹೆಸರನ್ನು ತೆಗೆದುಹಾಕಲಾಗುತ್ತದೆ. ಆದರೆ ಒಮ್ಮೆ ಸ್ವಾಮ್ಯತೆ ಸಿಕ್ಕ ಬಳಿಕ ಆ ಹಕ್ಕನ್ನು ಬೇರೆ ಯಾರಿಗೂ ಹಸ್ತಾಂತರಿಸಲು ಬರುವುದಿಲ್ಲ.
* ಭೌಗೋಳಿಕ ಸೂಚಿಕೆಗಳ ನೋಂದಣಿಯನ್ನು ನವೀಕರಿಸಬೇಕಾಗುತ್ತದೆ. ನವೀಕರಿಸದಿದ್ದರೆ ನೋಂದಣಿ ದಾಖಲೆಯಿಂದ ಕಿತ್ತುಹಾಕಲಾಗುತ್ತದೆ.
* ನೋಂದಣಿ ಪಡೆದ ಭೌಗೋಳಿಕ ಸೂಚಿಕೆಗಳನ್ನು ಪರಭಾರೆ ಅಥವಾ ವರ್ಗಾವಣೆ ಮಾಡಲು ಸಾಧ್ಯವಿಲ್ಲ. ನೋಂದಣಿಯು ಸಂಬಂಧಿಸಿದ ಉತ್ಪಾದಕರ ಸಾರ್ವಜನಿಕ ಸ್ವಾಮ್ಯದ ಸ್ವತ್ತು. ಈ ನೋಂದಣಿಯನ್ನು ಪರಭಾರೆ, ವರ್ಗಾವಣೆ, ಅಡಮಾನ ಲೈಸನ್ಸಿಂಗ್ ಮುಂತಾದ ಕರಾರುಗಳಿಗೆ ಒಳಪಡಿಸಲು ಸಾಧ್ಯವಿಲ್ಲ.
* ಭೌಗೋಳಿಕ ಸೂಚಿಕೆಯು ವ್ಯಾಪಾರ ಚಿಹ್ನೆ (ಟ್ರೇಡ್ ಮಾರ್ಕ್)ಯಿಂದ ಬೇರೆಯಾಗಿದೆ. ಹೇಗೆಂದರೆ ವ್ಯಾಪಾರ ವ್ಯವಹಾರಗಳಲ್ಲಿ ಒಂದು ಉದ್ಯಮದ ಉತ್ಪನ್ನ ಮತ್ತು ಸೇವೆಗಳನ್ನು ಪ್ರತ್ಯೇಕವಾಗಿ ಗುರುತಿಸುವ ಚಿಹ್ನೆಯೇ ಟ್ರೇಡ್ ಮಾರ್ಕ್. ಆದರೆ ಭೌಗೋಳಿಕ ಸೂಚಿಕೆಯು ಒಂದು ನಿರ್ದಿಷ್ಟ ಸ್ಥಳದಲ್ಲಿ ಬೆಳೆದು ಬಂದಿರುವ ವಿಶಿಷ್ಟ ಗುಣಲಕ್ಷಣಗಳಿಂದ ಕೂಡಿರುವ ಉತ್ಪನ್ನಗಳನ್ನು ಗುರುತಿಸುವ ವಿಧಾನ.
* ಭೌಗೋಳಿಕ ವಸ್ತುವಿಗೆ ಸಂಬಂಧಿಸಿದಂತೆ ಅವುಗಳ ಉತ್ಪಾದಕ.

**ಈ ಕೆಳಗೆ ಸೂಚಿಸಿರುವ ನಾಲ್ಕು ರೀತಿಯ ವಸ್ತುಗಳ ಉತ್ಪಾದನಾ ಪ್ರಕ್ರಿಯೆಗೆ ಸಂಬಂಧಿಸಿದಂತೆ ಉತ್ಪಾದಕನ ಬಗ್ಗೆ ನಿರ್ಧರಿಸಲಾಗುತ್ತದೆ :**

* ಕೃಷಿ ಉತ್ಪನ್ನಗಳ ಬೆಳೆಸುವಿಕೆ, ಸಂಸ್ಕರಣೆ ಮತ್ತು ವ್ಯಾಪಾರ ಅಥವಾ ವ್ಯವಹಾರ.
* ನೈಸರ್ಗಿಕ ವಸ್ತುಗಳ ಉತ್ಪಾದನೆ ಮತ್ತು ವ್ಯಾಪಾರ ಅಥವಾ ವ್ಯವಹಾರ.
* ಕರಕುಶಲ ಅಥವಾ ಕೈಗಾರಿಕಾ ವಸ್ತುಗಳ ರಚನೆ, ಉತ್ಪಾದನೆ ಮತ್ತು ವ್ಯಾಪಾರ ಅಥವಾ ವ್ಯವಹಾರ.
* ಆಹಾರ ಪದಾರ್ಥಗಳ ತಯಾರಿಸುವಿಕೆ ಮತ್ತು ವ್ಯಾಪಾರ ಅಥವಾ ವ್ಯವಹಾರ.

**ಭೌಗೋಳಿಕ ಸೂಚಿಕೆಗಳ ಗುಣಲಕ್ಷಣಗಳು**

ಭೌಗೋಳಿಕ ಸೂಚಿಕೆಗಳು ತಮ್ಮದೇ ಆದ ವಿಶಿಷ್ಟ ಗುಣಸ್ವಭಾವ, ಲಕ್ಷಣ ಹಾಗೂ ಆಯಾ ಸ್ಥಳದಲ್ಲಿ ಆದ ವಿಶಿಷ್ಟ ಗುಣಗಳನ್ನು ಹೊಂದಿರುತ್ತವೆ. ಉದಾಹರಣೆ ಬಾಸುಮತಿ ಅಕ್ಕಿಯ ವಿಶೇಷ ಪರಿಮಳ, ಪೋಚಂಪಲ್ಲಿ ಸೀರೆಯ ವಿಶಿಷ್ಟ ವರ್ಣವಿನ್ಯಾಸ ಇತ್ಯಾದಿ.

**ಭೌಗೋಳಿಕ ಸೂಚನೆಗಳನ್ನು ನೋಂದಣಿ ಮಾಡಿಸುವುದರಿಂದ ಉಪಯೋಗ**

ಜಿ.ಐ. ಹಕ್ಕನ್ನು ನಿರ್ಲಕ್ಷ್ಯ ಮಾಡಿದರೆ ನಷ್ಟವಾಗುವುದು ಆ ಭೌಗೋಳಿಕ ಪ್ರದೇಶದ ಉತ್ಪನ್ನದ ಮಾಲೀಕರಿಗೇ ವಿನಾ ಬೇರಾರಿಗೂ ಅಲ್ಲ. ಕಾರಣ ಈ ಪ್ರದೇಶಗಳ ಹೆಸರನ್ನು ಹೇಳಿಕೊಂಡು ನಕಲಿ ಮಾರಾಟ ದಂಧೆ ಹೆಚ್ಚುತ್ತಾ ಹೋಗುತ್ತದೆ. ಆಗ ಮೂಲ ಉತ್ಪನ್ನ ಅಥವಾ ಬೆಳೆಯ ಮೌಲ್ಯ ಕುಸಿಯುತ್ತದೆ. ಆದರೆ ಒಮ್ಮೆ ಜಿ.ಐ.ನಲ್ಲಿ ನೋಂದಣಿಯಾದರೆ ಕಾನೂನು ರೀತಿ ಇವುಗಳಿಗೆ ರಕ್ಷಣೆ ಸಿಕ್ಕಂತೆ. ಆಗ ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಈ ಹೆಸರಿನಲ್ಲಿ ಅಕ್ರಮವಾಗಿ ಮಾರಾಟ ಮಾಡಿದರೆ ಕಂಬಿ ಎಣಿಸುವಂತೆ ಮಾಡಬಹುದು. ಸೂಕ್ತ ಮೊತ್ತವನ್ನು ದಂಡದ ರೂಪದಲ್ಲಿ ಪಡೆಯಬಹುದು. ಏಕೆಂದರೆ ಕಾನೂನು ಮಾನ್ಯತೆಯನ್ನು ಈ ಮೂಲಕ ಪಡೆದಿರಲಾಗುತ್ತದೆ. ಜತೆಗೆ, ತಮ್ಮ ಉತ್ಪನ್ನಗಳಿಗೆ ಒಂದು ಬ್ರ್ಯಾಂಡ್ ಸೃಷ್ಟಿಯಾಗುತ್ತದೆ. ಇದು ರಫ್ತು ವಹಿವಾಟಿಗೂ ಅನುಕೂಲ. ಇದು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಆಧಿಪತ್ಯ ಸಾಧಿಸಲು ನೆರವಾಗುತ್ತದೆ.

* ಬೆಳೆಗಾರರ ಅಭಿವೃದ್ಧಿಗೆ ಪೂರಕವಾದ ವಿಶೇಷ ಪ್ಯಾಕೇಜ್ ಜಾರಿಗೊಳ್ಳುತ್ತದೆ. ಇದರಿಂದ ಸ್ಥಳೀಯ ಬೆಳೆಗಾರರು ತಾವು ಬೆಳೆಯುವ ಉತ್ಪನ್ನಗಳನ್ನು ದೇಶ–ವಿದೇಶಗಳಿಗೂ ನೇರವಾಗಿ ರವಾನಿಸಲು ಅವಕಾಶವಿರುತ್ತದೆ.
* ಭಾರತದಲ್ಲಿ ಈ ವಸ್ತುಗಳಿಗೆ ಕಾನೂನು ರೀತ್ಯಾ ರಕ್ಷಣೆ ದೊರೆಯುತ್ತದೆ.
* ನೋಂದಾಯಿತ ವಸ್ತುಗಳನ್ನು ಬೇರೆಯವರು ಅನಧಿಕೃತವಾಗಿ ಬಳಸುವುದನ್ನು ತಡೆಗಟ್ಟಬಹುದು.
* ಭೌಗೋಳಿಕ ಸೂಚನೆಗಳಿಗೆ ಕಾನೂನಿನ ರಕ್ಷಣೆ ದೊರೆತು ರಫ್ತು ಮಾರುಕಟ್ಟೆ ಹೆಚ್ಚುತ್ತದೆ.
* ಸಂಬಂಧಿಸಿದ ಭೌಗೋಳಿಕ ಪ್ರದೇಶದಲ್ಲಿ ಆಯಾ ವಸ್ತುಗಳ ಉತ್ಪಾದಕರ ಆರ್ಥಿಕ ಪರಿಸ್ಥಿತಿ ಉತ್ತಮಗೊಂಡು ಆ ಪ್ರದೇಶದ ಆರ್ಥಿಕ ಅಭಿವೃದ್ಧಿಗೆ ಉತ್ತೇಜನ ಸಿಕ್ಕಿದಂತಾಗುತ್ತದೆ.

**ಭೌಗೋಳಿಕ ಸೂಚಿಕೆಗಳು ವಿದೇಶದಲ್ಲಿ ಹೇಗೆ ಸಂರಕ್ಷಿಸಲ್ಪಡುತ್ತವೆ ?**

ಬೇರೆ ಬೇರೆ ದೇಶಗಳಲ್ಲಿ ಭೌಗೋಳಿಕ ಸೂಚಿಕೆಗಳನ್ನು ರಕ್ಷಿಸುವ ಅವುಗಳದ್ದೇ ಆದ ಪ್ರತ್ಯೇಕ ವ್ಯವಸ್ಥೆಯಿದೆ. ಕೆಲವು ದೇಶಗಳು ತಮ್ಮಲ್ಲಿ ಪ್ರಚಲಿತವಿರುವ ಟ್ರೇಡ್‌ಮಾರ್ಕ್ ಕಾನೂನು ಗ್ರಾಹಕ ರಕ್ಷಣಾ ಕಾಯಿದೆ. ಪೈಪೋಟಿ ಕಾಯಿದೆಗಳ ಮೂಲಕ ರಕ್ಷಣೆ ನೀಡಿದರೆ ಇನ್ನು ಕೆಲವು ದೇಶಗಳಲ್ಲಿ ಪ್ರತ್ಯೇಕ ಕಾನೂನು ಇದೆ. ಇನ್ನೂ ಕೆಲವು ದೇಶಗಳಲ್ಲಿ ಭಾರತದಲ್ಲಿರುವಂತೆ ನೋಂದಣಿ ವ್ಯವಸ್ಥೆಯಿದೆ. ಭಾರತದ ಭೌಗೋಳಿಕ ಸೂಚಿಕೆಯ ನೋಂದಾಯಿತ ಮಾಲೀಕನು ಆಯಾ ದೇಶದಲ್ಲಿ ಪ್ರಚಲಿತವಿರುವ ವ್ಯವಸ್ಥೆಗೆ ಅನುಗುಣವಾಗಿ ರಕ್ಷಣೆ ಪಡೆಯಬೇಕಾಗಿರುತ್ತದೆ. ವಿಶ್ವ ವ್ಯಾಪಾರ ಸಂಸ್ಥೆಯ (ಡಬ್ಲ್ಯು.ಟಿ.ಒ.) ಇನ್ನಿತರ ಸದಸ್ಯ ರಾಷ್ಟ್ರಗಳು ಕೂಡ ಆಯಾ ಭೌಗೋಳಿಕ ಸೂಚಿಕೆಗಳನ್ನು ಉತ್ಪಾದಿಸುವ ದೇಶದಲ್ಲಿ ದೊರೆಯುವ ರೀತಿಯಲ್ಲಿ ರಕ್ಷಣೆ ನೀಡಲು ಬದ್ಧವಾಗಿವೆ. (ಟ್ರಿಪ್ಸ್ ಒಪ್ಪಂದದ ಅನುಚ್ಛೇದ ೨೨, ೨೩ ಮತ್ತು ೨೪ ಭೌಗೋಳಿಕ ಸೂಚಿಕೆಗಳ ರಕ್ಷಣೆ ಮತ್ತು ಅಂತರರಾಷ್ಟ್ರೀಯ ಸಂಧಾನ ಅಪವಾದಗಳ ಬಗ್ಗೆ ಹೇಳುತ್ತದೆ.)

ಔದ್ಯಮಿಕ ಸಂಪತ್ತು (ಆಸ್ತಿ) ರಕ್ಷಣೆ ಕುರಿತಾದ ಪ್ಯಾರಿಸ್ ಸಮಾವೇಶದ ೧ (೨) ಮತ್ತು ೧೧ನೇ ಕಲಂಗಳಲಂತೆ ವಸ್ತುಗಳ ಮೇಲೆ ಸ್ಥಳ ನಮೂದಿಸುವುದು ಬೌದ್ಧಿಕ ಆಸ್ತಿ ಹಕ್ಕಿನ ಒಂದು ಅಂಶ. ಇದು ಉರುಗ್ವೆ ಸುತ್ತಿನ ಗ್ಯಾಟ್ (ಗ್ಯಾಟ್ ಮಾತುಕತೆಯಲ್ಲಿ ಬರಲಾದ ಟಿಪ್ಸ್ ವ್ಯಾಪಾರ ಸಂಬಂಧಿ ಬೌದ್ಧಿಕ ಆಸ್ತಿ ಹಕ್ಕು) ಒಪ್ಪಂದ ಅಡಿಯಲ್ಲಿಯೂ ಬರುತ್ತದೆ. ೧೯೬೭ರ ವಿಶ್ವ ಬೌದ್ಧಿಕ ಆಸ್ತಿಯ ಸಂಘಟನೆ ಮೂಲಕವೂ ಭೌಗೋಳಿಕ ಸೂಚಿ ಸಂರಕ್ಷಿಸಲ್ಪಡುತ್ತಿದೆ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಮ್ಯಾಡ್ರಿಡ್ ಒಪ್ಪಂದ (೧೮೯೧ ಮತ್ತು ೧೯೮೯) ಕೂಡ ಭೌಗೋಳಿಕ ಸೂಚಿಕೆಗಳ ನೋಂದಣಿ ಮತ್ತು ಸಂರಕ್ಷಣೆ ಬಗ್ಗೆ ಹೇಳುತ್ತದೆ. ಅದೇ ರೀತಿ ವಿಶ್ವ ವಾಣಿಜ್ಯ ಸಂಘಟನೆಯ ಸದಸ್ಯ ರಾಷ್ಟ್ರವಾಗಿರುವ ಭಾರತ ಸರಕುಗಳ ಭೌಗೋಳಿಕ ಸೂಚಿ (ನೋಂದಣಿ ಮತ್ತು ಸಂರಕ್ಷಣೆ) ಕಾಯ್ದೆ (೧೯೯೯)ಯನ್ನು ರೂಪಿಸಿ ೧೫ ಸೆಪ್ಟೆಂಬರ್, ೨೦೦೩ರಂದು ಜಾರಿಗೊಳಿಸಿದೆ.

**ರಾಜ್ಯವಾರು ಭೌಗೋಳಿಕ ಸೂಚಿಕೆಗಳ ನೋಂದಣಿಯ ಕೊಡುಗೆ**




ಜಿ.ಐ. ವ್ಯವಸ್ಥೆಯ ಸದುಪಯೋಗಪಡಿಸಿಕೊಂಡ ರಾಜ್ಯಗಳಲ್ಲಿ ಕರ್ನಾಟಕ ಮೊದನೆಯ ಸ್ಥಾನದಲ್ಲಿದೆ. ರಾಜ್ಯದ ೩೩ ಉತ್ಪನ್ನಗಳು ಜಿ.ಐ. ಖಾತೆಯಲ್ಲಿ ಸೇರಿವೆ. ೨ನೇ ಸ್ಥಾನದಲ್ಲಿ ನೆರೆಯ ತಮಿಳುನಾಡು ಇದ್ದು, ಇದರ ೨೪ ಉತ್ಪನ್ನಗಳು ಜಿ.ಐ. ಪಟ್ಟಿಯಲ್ಲಿ ನೋಂದಣಿಯಾಗಿವೆ. ನಂತರದ ಸ್ಥಾನದಲ್ಲಿ ಆಂಧ್ರಪ್ರದೇಶ, ಕೇರಳ, ಗುಜರಾತ್, ರಾಜಸ್ಥಾನ, ಮಹಾರಾಷ್ಟ್ರ, ಪಶ್ಚಿಮ ಬಂಗಾಳ, ಒಡಿಶಾ, ಉತ್ತರಪ್ರದೇಶ ಸೇರಿದಂತೆ ಹಲವು ರಾಜ್ಯಗಳಿವೆ.

**ಕರ್ನಾಟಕದ ನೋಂದಣಿಯಾದ ಭೌಗೋಳಿಕ ಸೂಚಿಕೆಗಳು**
**(೨೦೦೪ರಿಂದ ೨೦೧೫ ಮಾರ್ಚ್‌ವರೆಗೆ)**

| ಕ್ರಮ ಸಂಖ್ಯೆ | ಭೌಗೋಳಿಕ ಸೂಚಿಕೆ | ವಸ್ತುಗಳು (ಜಿ.ಐ. ಆ್ಯಕ್ಟ್ ೧೯೯೯, ಕಲಂ ೨ (ಎಫ್) ಪ್ರಕಾರ |
|---|---|---|
| ೧ | ಮೈಸೂರು ರೇಷ್ಮೆ | ಕರಕುಶಲ |
| ೨ | ಮೈಸೂರು ಅಗರಬತ್ತಿ | ಉತ್ಪಾದನೆ |
| ೩ | ಬಿದ್ರಿ ಕಲೆ (ಲೋಹಕಲೆ), ಬೀದರ್ | ಕರಕುಶಲ |
| ೪ | ಚನ್ನಪಟ್ಟಣದ ಬೊಂಬೆ ಆಟಿಕೆಗಳು | ಕರಕುಶಲ |
| ೫ | ಮೈಸೂರು ರೋಸ್‌ವುಡ್ ಕೆತ್ತನೆಗಳು | ಕರಕುಶಲ |
| ೬ | ಮೈಸೂರು ಗಂಧದ ಎಣ್ಣೆ | ಉತ್ಪಾದನೆ |
| ೭ | ಮೈಸೂರು ಗಂಧದ ಸಾಬೂನು | ಉತ್ಪಾದನೆ |
| ೮ | ಕಸೂತಿ ಎಂಬ್ರಾಯಿಡರಿ | ಕರಕುಶಲ |
| ೯ | ಮೈಸೂರು ಸಾಂಪ್ರದಾಯಿಕ ಚಿತ್ರಕಲೆ | ಕರಕುಶಲ |
| ೧೦ | ಕೊಡಗಿನ ಕಿತ್ತಳೆ | ಕೃಷಿ ಉತ್ಪನ್ನ |
| ೧೧ | ಮೈಸೂರು ವೀಳ್ಯೆದೆಲೆ | ಕೃಷಿ ಉತ್ಪನ್ನ |
| ೧೨ | ನಂಜನಗೂಡು ರಸಬಾಳೆ | ಕೃಷಿ ಉತ್ಪನ್ನ |
| ೧೩ | ಮೈಸೂರು ಮಲ್ಲಿಗೆ | ಕೃಷಿ ಉತ್ಪನ್ನ |
| ೧೪ | ಉಡುಪಿ ಮಲ್ಲಿಗೆ | ಕೃಷಿ ಉತ್ಪನ್ನ |
| ೧೫ | ಹಡಗಲಿ ಮಲ್ಲಿಗೆ | ಕೃಷಿ ಉತ್ಪನ್ನ |
| ೧೬ | ಇಳಕಲ್ ಸೀರೆ (ಬಾಗಲಕೋಟೆ) | ಕರಕುಶಲ |
| ೧೭ | ಮೈಸೂರು ಗಂಜೀಫಾ ಕಲೆ | ಕರಕುಶಲ |
| ೧೮ | ನವಲಗುಂದದ ದರಿ (ಧಾರವಾಡ) | ಕರಕುಶಲ |
| ೧೯ | ಕರ್ನಾಟಕದ ಕಂಚಿನ ಸಾಮಾನು | ಕರಕುಶಲ |
| ೨೦ | ಮೊಳಕಾಲ್ಮೂರು ಸೀರೆ (ಚಿತ್ರದುರ್ಗ) | ಕರಕುಶಲ |
| ೨೧ | ಮಳೆಗಾಲದ ಮಲಬಾರ್ ಅರೇಬಿಕಾ ಕಾಫಿ | ಕೃಷಿ ಉತ್ಪನ್ನ |
| ೨೨ | ಮಳೆಗಾಲದ ಮಲಬಾರ್ ರೋಬಸ್ಟಾ ಕಾಫಿ | ಕೃಷಿ ಉತ್ಪನ್ನ |
| ೨೩ | ಕೊಡಗಿನ ಹಸಿರು ಏಲಕ್ಕಿ | ಕೃಷಿ ಉತ್ಪನ್ನ |
| ೨೪ | ಧಾರವಾಡ ಪೇಡ | ಖಾದ್ಯ ವಸ್ತು (ಆಹಾರ ಪದಾರ್ಥ) |
| ೨೫ | ದೇವನಹಳ್ಳಿ ಚಕೋತಾ | ಕೃಷಿ ಉತ್ಪನ್ನ |
| ೨೬ | ಸಾಗರದ ಅಪ್ಪೆಮಿಡಿ ಮಾವು | ಕೃಷಿ ಉತ್ಪನ್ನ |
| ೨೭ | ಕಮಲಾಪುರದ ಕೆಂಪು ಬಾಳೆ | ಕೃಷಿ ಉತ್ಪನ್ನ |
| ೨೮ | ಸಂಡೂರಿನ ಲಂಬಾಣಿ ಕಸೂತಿ | ಕರಕುಶಲ |
| ೨೯ | ಬ್ಯಾಡಗಿ ಮೆಣಸಿನಕಾಯಿ | ಕೃಷಿ ಉತ್ಪನ್ನ |
| ೩೦ | ಉಡುಪಿ ಮಟ್ಟುಗೊಳ್ಳ ಬದನೆ | ಕೃಷಿ ಉತ್ಪನ್ನ |
| ೩೧ | ಕಿನ್ನಾಳ ಬೊಂಬೆಗಳು (ಕೊಪ್ಪಳ) | ಕರಕುಶಲ |
| ೩೨ | ಬೆಂಗಳೂರು ನೀಲಿ ದ್ರಾಕ್ಷಿ | ಕೃಷಿ ಉತ್ಪನ್ನ |
| ೩೩ | ಬೆಂಗಳೂರು ಕೆಂಪು ಈರುಳ್ಳಿ | ಕೃಷಿ ಉತ್ಪನ್ನ |

ಜಿ.ಐ.ನಲ್ಲಿ ನೋಂದಣಿ ಮಾಡಿಕೊಳ್ಳಲು ರೈತರು ಮೊದಲು ತಮ್ಮದೇ ಆದ ಅಸೋಸಿಯೇಷನ್‌ಅನ್ನು ಮಾಡಿಕೊಳ್ಳಬೇಕು. ಆಗ ಅವರು ಆ ಉತ್ಪನ್ನಗಳಿಗೆ ಮಾಲೀಕರಾಗುತ್ತಾರೆ. ಅರ್ಜಿಯನ್ನು ಚೆನ್ನೈನಲ್ಲಿರುವ ಜಿಯಾಗ್ರಫಿಕಲ್ ಇಂಡಿಕೇಷನ್ಸ್ ರಿಜಿಸ್ಟ್ರಿ ಸಂಸ್ಥೆಗೆ ಕಳುಹಿಸಬೇಕು. ನ್ಯೂನತೆಗಳಿದ್ದರೆ ಅಲ್ಲಿಂದ ಮಾಹಿತಿಯನ್ನು ಪುನಃ ಪಡೆಯುತ್ತಾರೆ. ಮಾಹಿತಿ ಪೂರಕವಾಗಿದ್ದರೆ ಜಿ.ಐ. ಮಾನ್ಯತೆ ದೊರೆಯುತ್ತದೆ.

ಚೆನ್ನೈನಲ್ಲಿರುವ ಜಿಯಾಗ್ರಫಿಕಲ್ ರಿಜಿಸ್ಟ್ರಿಯಲ್ಲಿ ನೋಂದಣಿಯಾದ ಮೇಲೆ ಕಾನೂನು ಪ್ರಕ್ರಿಯೆಗಳು ಇರುತ್ತವೆ. ಅರ್ಜಿ ಪುರಸ್ಕೃತವಾದ ಮೇಲೆ ಗೆಜೆಟ್ ನೋಟಿಫಿಕೇಶನ್‌ನಲ್ಲಿ ಆ ವಸ್ತುಗಳ ಬಗ್ಗೆ ಮಾಹಿತಿ ಪ್ರಕಟಿಸಲಾಗುತ್ತದೆ. ನಂತರ ೪ ತಿಂಗಳ ಅವಧಿಯಲ್ಲಿ ಯಾರದ್ದೂ ಆಕ್ಷೇಪಣೆಗಳು ಬಾರದಿದ್ದಲ್ಲಿ ಮುಂದಿನ ಪ್ರಕ್ರಿಯೆ ಪ್ರಾರಂಭವಾಗುತ್ತದೆ. ಮಾನ್ಯತೆ ನೀಡಬಹುದೇ, ಬೇಡವೇ ಎಂಬುದರ ಬಗ್ಗೆ ಪರೀಕ್ಷಿಸಲು ೭ ಜನರ ಉನ್ನತ ಮಟ್ಟದ ಸಮಿತಿ ಇರುತ್ತದೆ. ಸಮಿತಿ ಸದಸ್ಯರು ಪರೀಕ್ಷೆಗೊಳಪಟ್ಟ ಬಳಿಕ ರಿಜಿಸ್ಟ್ರಾರ್‌ಗೆ ವರದಿ ಸಲ್ಲಿಸುತ್ತಾರೆ. ಬಳಿಕ ರಿಜಿಸ್ಟ್ರಾರ್ ಅವರು ಆ ವರದಿಯನ್ನು ಪರೀಕ್ಷೆಗೆ ಕಳುಹಿಸಿ ಮುಂದಿನ ಕ್ರಮ ಕೈಗೊಳ್ಳಲು ಸೂಚಿಸುತ್ತಾರೆ.

**ಮಂಜುನಾಥ ಎನ್. ಜಿ.**
ಕಾನೂನು ಸಂಶೋಧಕರು, ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ, ಹುಬ್ಬಳ್ಳಿ
ಮತ್ತು
ಕಾನೂನು ಸಹಾಯಕ ಪ್ರಾಧ್ಯಾಪಕರು, ವಿದ್ಯೋದಯ ಕಾನೂನು ಕಾಲೇಜು, ತುಮಕೂರು



ನಭಾವಲೋಕನ

# ಸಂಜೆಗೊಂದು ಗ್ರಹ

ಎಲ್ಲ ಗ್ರಹಗಳೂ ಮುಂಜಾವಿನ ಆಕಾಶದಲ್ಲಿ ಕಲೆ ಹಾಕಿಕೊಂಡಿರುವುದರಿಂದ ಸಂಜೆಯ ಆಕಾಶದಲ್ಲಿ ನಕ್ಷತ್ರಗಳದ್ದೇ ವೈಭವ. ಆಕಾಶವೂ ಶುಭ್ರವಾಗಿರುವುದರಿಂದ ನಕ್ಷೆಯ ಸಹಾಯದಿಂದ ಪುಂಜಗಳನ್ನು ಗುರುತು ಮಾಡಿಕೊಳ್ಳಬಹುದು. ಚಂದ್ರನ ಓಟವೇ ಇಲ್ಲಿ ಸಹಕಾರಿಯಾಗುವುದು. ನೆತ್ತಿಯಲ್ಲೇ ಕಾಣುವ ಮಹಾವ್ಯಾಧ, ವಿಜಯಸಾರಥಿ, ಮಿಥುನ ಇವುಗಳ ವಿನ್ಯಾಸಗಳನ್ನು ಪಶ್ಚಿಮದತ್ತ ನಕುಲ, ಮೇಷ ಇವುಗಳನ್ನು ಗುರುತಿಸುವುದನ್ನು ಕಲಿಸಿಕೊಡಲು ಇದೇ ಸುಸಮಯ. ಆಕಾಶ ಗಂಗೆಯ ಹರಿವನ್ನೂ ಗಮನಿಸಬಹುದು.

ರಾತ್ರಿ ೮ ಗಂಟೆಯ ನಂತರ ಪೂರ್ವದಲ್ಲಿ ಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಗುರುಗ್ರಹ. ೨೪ರಂದು ಚಂದ್ರನ ಪ್ರಖರ ಬೆಳಕಿನಲ್ಲಿಯೂ ಅದರ ಪಕ್ಕ ಈ ಗ್ರಹವನ್ನು ಕಾಣಬಹುದು. ದೂರದರ್ಶಕ, ದುರ್ಬೀನುಗಳಿಂದ ಗುರುಗ್ರಹದ ಉಪಗ್ರಹಗಳನ್ನು ಗುರುತಿಸಿ ಅವುಗಳ ಚಲನೆಯನ್ನು ದಾಖಲು ಮಾಡುವ ಅಭ್ಯಾಸ ಆರಂಭಮಾಡಬಹುದು.

೨೨ರ ಹುಣ್ಣಿಮೆಯಂದು ಚಂದ್ರ ಮಘ ನಕ್ಷತ್ರದ ಸಮೀಪ ಇರುವುದರಿಂದ ಚಾಂದ್ರಮಾನದಲ್ಲಿ ಈ ತಿಂಗಳಿಗೆ ಮಾಘಮಾಸ ಎಂಬ ಹೆಸರಿದೆ.

ಪ್ಯಾನ್‌ಸ್ಟಾರ್ಸ್ (೨೦೧೩ x ೧) ಎಂಬುದೊಂದು ಧೂಮಕೇತು ವಿಚಿತ್ರವಾದ ಪಥದಲ್ಲಿ ಹೊರಟು ಸೂರ್ಯನನ್ನು ಸುತ್ತಲಿದೆ. ವಿಚಿತ್ರ ಏಕೆ? ಇದು ಪೂರ್ವಕ್ಕಾಗಲೀ, ಪಶ್ಚಿಮಕ್ಕಾಗಲೀ ಚಲಿಸುತ್ತಿಲ್ಲ. ದಕ್ಷಿಣಕ್ಕೆ ಚಲಿಸುತ್ತಿದೆ. ನಕುಲ (ಪೆಗಸಸ್) ಚೌಕವನ್ನು ಹಾದುಹೋಗಿರುವ ಇದು ಮೀನ ರಾಶಿಯ ಮೀನನ್ನು ಮಾರ್ಚ್ ಹೊತ್ತಿಗೆ ತಲುಪುವುದು. ಆ ಮುಂದೆ ಏಪ್ರಿಲ್‌ನಲ್ಲಿ ಸೂರ್ಯನನ್ನು ಬಳಸಿ ಬರುವುದರಿಂದ ಉದ್ದನೆಯ ಬಾಲ ಬೆಳೆಸಿಕೊಂಡಲ್ಲಿ ಮಾತ್ರ ಗೋಚರವಾಗುವುದು. ಅದು ಇನ್ನೂ ದಕ್ಷಿಣಕ್ಕೆ ಸರಿದು ಕುಂಭರಾಶಿಯನ್ನು ಹಾದು ಜೂನ್‌ನಲ್ಲಿ ದಕ್ಷಿಣ ಮೀನ (ಪೈಸಿಸ್ ಆಸ್ಟ್ರಿನಸ್) ತಲುಪುವುದು.

ಮುಂಜಾವಿನ ಆಕಾಶದಲ್ಲಿ ಗ್ರಹಗಳ ಓಟವನ್ನು ಗುರುತಿಸಲು ಸದವಕಾಶವಿದೆ. ೧ ಮತ್ತು ೨೯ರಂದು ಮಂಗಳ–ಚಂದ್ರ ಜೋಡಿಯಾಗುತ್ತವೆ. ೩ರಂದು ಶನಿಯ ಜೊತೆಗೂಡುವ ಚಂದ್ರ ೬ರಂದು ಶುಕ್ರ ಮತ್ತು ಬುಧಗಳ ಜೊತೆ ಪುಟ್ಟ ಗುಂಪನ್ನೇ ಮಾಡುತ್ತದೆ. ೬ ಮತ್ತು ೭ರಂದು ಚಂದ್ರ, ಬುಧ, ಶುಕ್ರ ಇವುಗಳ ಸ್ಥಾನಗಳನ್ನು ನಕ್ಷೆ ಮಾಡಿಟ್ಟುಕೊಂಡರೆ ಪರಸ್ಪರ ಚಲನೆಯ ವೇಗವನ್ನು ಅಂದಾಜು ಮಾಡಬಹುದು. ಬುಧ ಗ್ರಹವನ್ನು ಹೀಗೆ ಪತ್ತೆ ಮಾಡಬಹುದು. ಅಂದೇ ಬುಧದ ಗರಿಷ್ಠ ಎತ್ತರ. ಆ ನಂತರ ಅದು ಕ್ರಮೇಣ ದಿಗಂತದತ್ತ ಸರಿಯುವುದು.



ಫೆಬ್ರವರಿ ೭ರ ಮುಂಜಾವು ಬುಧ, ಚಂದ್ರ, ಶುಕ್ರ – ಪುಟ್ಟ ಗುಂಪು




**ಫೆಬ್ರವರಿ ತಿಂಗಳ ಖಗೋಳ ದಿನಚರಿ**

| | |
|---|---|
| ೧ | ಚಾಂದ್ರಮಾಸದ ಕೊನೆಯಪಾದ. ಮಂಗಳ–ಚಂದ್ರ ನಡುವೆ ೪ ಡಿಗ್ರಿ ಅಂತರ* |
| ೩ | ಶನಿ–ಚಂದ್ರ ಜೋಡಿ* |
| ೬–೭ | ಬುಧ, ಚಂದ್ರ ಮತ್ತು ಶುಕ್ರ – ಪುಟ್ಟ ಗುಂಪು* |
| ೭ | ಬುಧ ಗ್ರಹದ ಗರಿಷ್ಠ ಕೋನೋನ್ನತಿ* |
| ೮ | ಅಮಾವಾಸ್ಯೆ ಸಂಜೆ ೮:೦೯ ಗಂಟೆಗೆ |
| ೧೧ | ಚಂದ್ರ ಪುರಭೂ ಬಿಂದುವಿನಲ್ಲಿ |
| ೧೫ | ಚಾಂದ್ರಮಾಸದ ಮೊದಲ ಪಾದ |
| ೧೬ | ರೋಹಿಣಿ – ಚಂದ್ರ ಜೋಡಿ (ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ) |
| ೨೨ | ಹುಣ್ಣಿಮೆ ೨೩:೫೦ ಗಂಟೆಗೆ. ಚಂದ್ರ–ಮಘ ಜೋಡಿ* |
| ೨೪ | ಚಂದ್ರ – ಗುರು ಜೋಡಿ* |
| ೨೬ | ಚಿತ್ರಾ – ಚಂದ್ರ ಜೋಡಿ |
| ೨೭ | ಚಂದ್ರ ಅಪಭೂ ಬಿಂದುವಿನಲ್ಲಿ |
| ೨೯ | ಚಂದ್ರ – ಮಂಗಳ ಜೋಡಿ* |

** ಛಾಯಾಗ್ರಹಣಕ್ಕೆ ಸದವಕಾಶ*

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು



# ಪದ್ಧತಿಗೆ ಎದಿರು ನಿಂತಾಗ

ಡಾ॥ ಶ್ರೀಕಂಠ ಕೂಡಿಗೆ

ನಮ್ಮ ವಿಚಾರಬುದ್ಧಿ ಅನೇಕ ತೊಡಕುಗಳನ್ನು ಸೃಷ್ಟಿಸುವುದನ್ನು ಮನೆ ಕಟ್ಟುವಾಗ ಕಂಡಿದ್ದೇನೆ. ಮನೆಯ ಆರಂಭಕ್ಕೆ ಮಾಡುವ ಗುದ್ದಲಿ ಪೂಜೆ, ದ್ವಾರಬಾಗಿಲು ಪೂಜೆಯಿಂದ ತಪ್ಪಿಸಿಕೊಳ್ಳಲು ನಾನು ಮತ್ತು ನನ್ನ ಪತ್ನಿ ಸುಳ್ಳು ನೆಪ ಹೇಳಿ ಊರಿನಿಂದಲೇ ಹೊರಹೋಗಿಬಿಟ್ಟೆವು. ಮನೆಯ ಯಜಮಾನರು ಇಲ್ಲದೆ ದ್ವಾರಬಾಗಿಲು ಪೂಜೆ ಮಾಡುವುದು ಸರಿಯೇ ಎಂಬ ಗೊಂದಲಕ್ಕೆ ನಮ್ಮ ಮೇಸ್ತ್ರಿ ಬಿದ್ದರು. ಅವರು ನಮ್ಮ ಗೈರುಹಾಜರಿಯಲ್ಲಿ ನನ್ನ ಪತ್ನಿಯ ಅಕ್ಕ–ಭಾವ ಇಬ್ಬರನ್ನೂ ನಿಲ್ಲಿಸಿ ಅವರಿಂದ ಪೂಜೆ ಮಾಡಿಸಿ ಬಾಗಿಲನ್ನು ಸ್ಥಾಪಿಸಿದರು. ಮೇಸ್ತ್ರಿಗೆ ನಾವೇ ನೇರವಾಗಿ 'ಪೂಜೆ ನಮಗೆ ಇಷ್ಟವಿಲ್ಲ' ಎಂದು ಹೇಳಿ ಗೈರುಹಾಜರಾಗಬಹುದಿತ್ತು. ಮನೆ ಕಟ್ಟುವ ಧಾರ್ಮಿಕ ಆಚರಣೆಯಲ್ಲಿ ಅಪಾರ ನಂಬಿಕೆ ಇಟ್ಟುಕೊಂಡ ಇಂಥ ಮೇಸ್ತ್ರಿಗಳು ನಾಳೆ ಏನಾದರೂ ಎಡಟ್ಟಾದರೆ ನಮ್ಮ ತಲೆಗೆ ಕಟ್ಟುತ್ತಾರೆ. ನಾವು ಪೂಜೆ ಪುನಸ್ಕಾರ ಮಾಡದಿದ್ದರಿಂದ ಹೀಗಾಯಿತು ಎಂದು ಹೇಳುವುದು ಸಾಮಾನ್ಯ.

ಪದ್ಧತಿ 'ಪದಹತಿ'ಯಿಂದ ನಿಷ್ಪನ್ನವಾದುದು. ಬೇರೆಯವರು ಈ ಮೊದಲೆ ಮಾಡಿದ ದಾರಿಯಲ್ಲಿ ನಡೆಯುವುದು ಸುಲಭ. ದಾರಿಯಲ್ಲಿ ಕಲ್ಲು ಮುಳ್ಳುಗಳು ಇರುವುದಿಲ್ಲ. ಹಾಗಾಗಿ ಹಾದಿ ಸುಗಮ. ನಾವೇ ಹೊಸದಾಗಿ ದಾರಿ ಮಾಡಿಕೊಂಡು ಹೋಗುವುದು ಸವಾಲಿನ ಕೆಲಸ. ಅದಕ್ಕಾಗಿ ಬಹುಮಂದಿ ಈ ಹೊಸಹಾದಿಯ ಸಹವಾಸವೇ ಬೇಡವೆಂದು ಪದ್ಧತಿಯನ್ನೇ ಹಿಡಿಯುತ್ತಾರೆ. ಅದು ಅವರಿಗೆ ಕ್ಷೇಮದ ಹಾದಿ.

೧೯೮೫ನೇ ಇಸವಿಯ ಮಧ್ಯಭಾಗ. ಮನೆ ಕಟ್ಟುವ ಹಂಬಲ ಮನಸ್ಸಿನಲ್ಲಿ ಉಂಟಾಯ್ತು. ಈಗಾಗಲೇ ಮನೆ ಕಟ್ಟಿ ಅನುಭವವಿದ್ದವರನ್ನು ಕೇಳಿದರೆ, ಒಬ್ಬೊಬ್ಬರದು ಒಂದೊಂದು ಅನುಭವ. ಕೆಲವರು ದುಡ್ಡನ್ನು ಎಲ್ಲಾದರೂ ತರಬಹುದು, ಕೆಲಸ ಮಾಡಿಸುವುದು ಮಾತ್ರ ಬಹಳ ಕಷ್ಟ ಎಂದರೆ ಇನ್ನು ಕೆಲವರು ಮನೆಯನ್ನು ಹೇಗಾದರೂ ಕಟ್ಟಬಹುದು, ಮರದ್ದೇ ಸಮಸ್ಯೆ ಎನ್ನುತ್ತಾರೆ. ಒಳ್ಳೆಯ ಮರ ಸಿಕ್ಕರೂ ಮರಗೆಲಸದವರದ್ದು ಸಮಸ್ಯೆ, ಗಾರೆಯವರು ಸಿಕ್ಕರೆ ಅವರು ಕುಶಲ ಕೆಲಸಗಾರರಾಗಿರುವುದಿಲ್ಲವೆಂಬ ಸಮಸ್ಯೆ. ಅವರು ಒಂದು ದಿನ ಬಂದು ಮತ್ತೊಂದು ದಿನ ಕೈಕೊಡುತ್ತಾರೆಂಬ ಸಮಸ್ಯೆ. ಇಂಥ ಸಮಸ್ಯೆಗಳ ಸರಮಾಲೆಯಲ್ಲಿ ನಾನು ಮನೆಗೆ ಬೇಕಾದ ಮರದ ಸಮಸ್ಯೆಯಲ್ಲಿ ಮೊದಲು ಸಿಕ್ಕಿಕೊಂಡೆ.

ಮರ ಹೊರಗೆ ಕೊಂಡರೆ ದುಬಾರಿ. ಒಳ್ಳೆಯ ಮರ ಸಿಕ್ಕರೂ ಸಿಗಬಹುದು. ಇಲ್ಲದೆಯೂ ಇರಬಹುದು. ಹಾಗಾಗಿ ಹಳ್ಳಿಯ ಮನೆಯಲ್ಲಿ ಬೆಳೆದ ಮರಗಳನ್ನು ತಂದರೆ ಹೇಗೆ ಎಂಬ ಆಲೋಚನೆ ಹೊಳೆದದ್ದೇ ತಡ ಕಾರ್ಯಪ್ರವೃತ್ತನಾದೆ. ಗ್ರಾಮ ಲೆಕ್ಕಾಧಿಕಾರಿ, ವಲಯ ಅರಣ್ಯ ಅಧಿಕಾರಿ ಜಿಲ್ಲಾ ಅರಣ್ಯ ಅಧಿಕಾರಿಯವರೆಗೆ ಆಗಬೇಕಾದ ಕೆಲಸಗಳ ಪ್ರಕ್ರಿಯೆಯಲ್ಲಿ ತೊಡಗಿಕೊಂಡೆ. ಮರ 'ಸ್ವಂತ ಬಳಕೆಗೆ' ಎಂಬ ನಿಯಮದಡಿಯಲ್ಲಿ ಅವುಗಳ ಉದ್ದ, ಸುತ್ತಳತೆ ಎಲ್ಲ ದಾಖಲಿಸಿ ವಲಯ ಅರಣ್ಯಾಧಿಕಾರಿಗಳು ಜಿಲ್ಲಾ ಅರಣ್ಯಾಧಿಕಾರಿಗಳ ಅನುಮೋದನೆ ಮತ್ತು ಮರ ಕಡಿತಲೆ ಆಜ್ಞೆಗಾಗಿ ಕಳುಹಿಸಿಕೊಟ್ಟರು. ಹಲವು ವಾರಗಳು ಕಳೆದರೂ ಆಜ್ಞೆ ಸಿಗಲಿಲ್ಲ. ವಿಚಾರಿಸಿದಾಗ ಡಿ.ಎಫ್.ಓ ಅವರು ತುಂಬ ನಿಯಮಬದ್ಧವಾಗಿ ಕೆಲಸ ಮಾಡುವವರೆಂದೂ, ಮರ ಕಡಿತಲೆಗೆ ಶಿಫಾರಸ್ಸಾದ ಎಂಟು ಮರಗಳಲ್ಲಿ ಮೂರು ನಿರೀಕ್ಷಿತ ಬೆಳವಣಿಗೆ ಹೊಂದಿಲ್ಲವೆಂದೂ, ಅವನ್ನು ರದ್ದುಗೊಳಿಸಿದ್ದಾರೆಂದು ತಿಳಿದುಬಂತು. ಕಛೇರಿಯ ಗುಮಾಸ್ತನೊಬ್ಬ ನನ್ನನ್ನು ಸಂಪರ್ಕಿಸಿ ಒಂದಿಷ್ಟು ಹಣ ಕೊಟ್ಟರೆ ಎಲ್ಲ ಮರಗಳಿಗೆ ಅನುಮೋದನೆ ಕೊಡಿಸುವುದಾಗಿ ತಿಳಿಸಿದ. ನಾನು, "ನಿಮ್ಮ ಸಾಹೇಬರು ಕಾನೂನುಬದ್ಧವಾಗಿಯೆ ಮಾಡಿದ್ದಾರೆ. ನಿನ್ನ ಸಹಾಯ ಬೇಕಿಲ್ಲ" ಎಂದು ತಿರಸ್ಕರಿಸಿದೆ. ಈ ಹಿಂದೆ ನಾನು ವ್ಯವಹರಿಸಿದ ಯಾರೂ ಹಣದ ಬೇಡಿಕೆ ಇಟ್ಟಿರಲಿಲ್ಲವಾದ್ದರಿಂದ ಮತ್ತು ಲಂಚ ಕೊಡಬಾರದೆಂಬ ನನ್ನ ನಂಬಿಕೆಗೆ ಅನುಗುಣವಾಗಿ ನಡೆದುಕೊಳ್ಳಲು ನಿರ್ಧರಿಸಿದ್ದೆ.

ಕೆಲವು ದಿನಗಳು ಕಳೆದ ನಂತರ ಅರಣ್ಯ ಇಲಾಖೆಯ ಒಬ್ಬ ಸಜ್ಜನ ಅಧಿಕಾರಿಯಿಂದ ನನಗೆ ಸೂಚನೆ ಬಂತು. ಮರ ಕಡಿತಲೆ ಆಜ್ಞೆ ಸಿದ್ಧವಿದೆಯೆಂದೂ, ಅದನ್ನು ಅಂಚೆಯಲ್ಲಿ ಶೀಘ್ರ ಕಳುಹಿಸಲಾಗುವುದೆಂದು ತಿಳಿಸಿದ್ದರು. ಆದರೆ ಅದು ಅಂಚೆ ಮೂಲಕ ಬರುವುದು



ತಡವಾಗುತ್ತದೆಂದು ನಾನೇ ಮುದ್ದಾಂ ತೆಗೆದುಕೊಳ್ಳಲು ಕಛೇರಿಗೆ ಹೋದೆ. ಮಾಹಿತಿ ಕೊಟ್ಟ ಅಧಿಕಾರಿಯನ್ನು ಸಂಧಿಸಿ 'ಕಡಿತಲೆ ಆಜ್ಞೆ'ಯನ್ನು ಅಂಚೆಗೆ ಕಳುಹಿಸದೆ ಕೈಯಲ್ಲಿ ನೀಡಿದರೆ ಉಪಕಾರವಾಗುತ್ತದೆಂದು ವಿನಂತಿಸಿದೆ. ಅವರು ಅದಕ್ಕೆ ಸಮ್ಮತಿಸಿ, ದೂರದಲ್ಲಿ ಟೇಬಲ್ಲಿನ ಮೇಲೆ ಕುಳಿತಿದ್ದ ಗುಮಾಸ್ತರೊಬ್ಬರನ್ನು ತೋರಿಸಿದರು. ಅವರ ಹತ್ತಿರ ಹೋಗಿ ಪಡೆದುಕೊಳ್ಳಿ ಅಂದರು. ನಾನು ಅವರಲ್ಲಿಗೆ ಹೋದೆ. ಆತ ಆಗುವುದಿಲ್ಲ, ಅಂಚೆ ಮೂಲಕವೇ ಕಳುಹಿಸುತ್ತೇನೆಂದು ಹಟ ಹಿಡಿದ. ನಾನು ಅಂಚೆ ಚೀಟಿ ಖರ್ಚು ಸರ್ಕಾರಕ್ಕೆ ಉಳಿಯುತ್ತದೆ, ಮುದ್ದಾಂ ಕೊಡಿ ಅಂತ ಹೇಳಿ ಕಡೆಗೂ ಒಪ್ಪಿಸಿದೆ. ಆತ ಒಲ್ಲದ ಮನಸ್ಸಿನಿಂದ, ನನ್ನ ಮುಖವನ್ನೂ ನೋಡದೆ, ತಲೆ ತಗ್ಗಿಸಿ ಫೈಲ್ ನೋಡುತ್ತಾ, ಇಳಿದನಿಯಲ್ಲಿ ಏನಾದರೂ ಕೊಡಿ ಎಂದ. ನನಗೆ ಕೋಪ ತಡೆಯಲು ಆಗಲಿಲ್ಲ. ಈತನಿಗೆ ಬುದ್ಧಿ ಕಲಿಸಬೇಕೆಂದು ಕಛೇರಿಯ ಎಲ್ಲರಿಗೂ ಕೇಳಿಸುವಂತೆ 'ನೋಡ್ರಿ ಇವರಿಗೆ ಹಣ ಬೇಕಂತೆ, ಕೊಡುತ್ತಿದ್ದೇನೆ' ಎನ್ನುತ್ತ ನೂರು ರೂಪಾಯಿ ನೋಟನ್ನು ಕೈಯಲ್ಲಿ ಹಿಡಿದು ಎಲ್ಲರಿಗೂ ಕಾಣಿಸುವಂತೆ ಕೈ ಎತ್ತಿದೆ. ಗಾಬರಿಯಾದ ಗುಮಾಸ್ತ ಕುರ್ಚಿ ಬಿಟ್ಟು ಹೊರಗೆ ಓಡಿದ. ಅಧಿಕಾರಿಯ ಮಧ್ಯಪ್ರವೇಶದಿಂದ ನನಗೆ ಆಜ್ಞೆಯ ಪ್ರತಿ ಸಿಕ್ಕಿತು. ಪ್ರಜಾವಾಣಿ ಪತ್ರಿಕೆಯ 'ಸತ್ಯಮೇವ ಜಯತೆ' ಅಂಕಣದಲ್ಲಿ ಈ ಅನುಭವವನ್ನು ಹಿಂದೆ ನಾನು ದಾಖಲಿಸಿದ್ದೆ.

ನಮ್ಮ ವಿಚಾರಬುದ್ಧಿ ಅನೇಕ ತೊಡಕುಗಳನ್ನು ಸೃಷ್ಟಿಸುವುದನ್ನು ಮನೆ ಕಟ್ಟುವಾಗ ಕಂಡಿದ್ದೇನೆ. ಮನೆಯ ಆರಂಭಕ್ಕೆ ಮಾಡುವ ಗುದ್ದಲಿ ಪೂಜೆ, ದ್ವಾರಬಾಗಿಲು ಪೂಜೆಯಿಂದ ತಪ್ಪಿಸಿಕೊಳ್ಳಲು ನಾನು ಮತ್ತು ನನ್ನ ಪತ್ನಿ ಸುಳ್ಳು ನೆಪ ಹೇಳಿ ಊರಿನಿಂದಲೇ ಹೊರಹೋಗಿಬಿಟ್ಟೆವು. ಮನೆಯ ಯಜಮಾನರು ಇಲ್ಲದೆ ದ್ವಾರಬಾಗಿಲು ಪೂಜೆ ಮಾಡುವುದು ಸರಿಯೇ ಎಂಬ ಗೊಂದಲಕ್ಕೆ ನಮ್ಮ ಮೇಸ್ತ್ರಿ ಬಿದ್ದರು. ಅವರು ನಮ್ಮ ಗೈರುಹಾಜರಿಯಲ್ಲಿ ನನ್ನ ಪತ್ನಿಯ ಅಕ್ಕ-ಭಾವ ಇಬ್ಬರನ್ನೂ ನಿಲ್ಲಿಸಿ ಅವರಿಂದ ಪೂಜೆ ಮಾಡಿಸಿ ಬಾಗಿಲನ್ನು ಸ್ಥಾಪಿಸಿದರು. ಮೇಸ್ತ್ರಿಗೆ ನಾವೇ ನೇರವಾಗಿ 'ಪೂಜೆ ನಮಗೆ ಇಷ್ಟವಿಲ್ಲ' ಎಂದು ಹೇಳಿ ಗೈರುಹಾಜರಾಗಬಹುದಿತ್ತು. ಮನೆ ಕಟ್ಟುವ ಧಾರ್ಮಿಕ ಆಚರಣೆಯಲ್ಲಿ ಅಪಾರ ನಂಬಿಕೆ ಇಟ್ಟುಕೊಂಡ ಇಂಥ ಮೇಸ್ತ್ರಿಗಳು ನಾಳೆ ಏನಾದರೂ ಎಡವಟ್ಟಾದರೆ ನಮ್ಮ ತಲೆಗೆ ಕಟ್ಟುತ್ತಾರೆ. ನಾವು ಪೂಜೆ ಪುನಸ್ಕಾರ ಮಾಡದಿದ್ದರಿಂದ ಹೀಗಾಯಿತು ಎಂದು ಹೇಳುವುದು ಸಾಮಾನ್ಯ. ಮನೆ ಕಟ್ಟಡ ಕಾರ್ಯ ಮುಗಿಯುವವರೆಗೆ ಸತ್ಯವನ್ನು ಹೇಳದೆ ಸಮಯ ಬಂದಾಗಲೆಲ್ಲಾ ಗೈರುಹಾಜರಿಯ ನಾಟಕ ಆಡಬೇಕಿತ್ತು.

ಅಂಧಶ್ರದ್ಧೆ, ಮೂಢನಂಬಿಕೆಯನ್ನು ಮನೆಕಟ್ಟುವವರು ತಮಗೆ ಗೊತ್ತಿಲ್ಲದಂತೆ ಆಚರಿಸುತ್ತಿರುತ್ತಾರೆ. ಹೊಸ ಮನೆಗೆ ಕೆಟ್ಟ ಕಣ್ಣು ಬೀಳದಿರಲೆಂದು ಬಣ್ಣಬಣ್ಣದ ಮುಖದ, ಕೋರೆ ದಾಡೆಯ ಮುಖವಾಡಗಳನ್ನು ನೇತುಹಾಕುವುದು ಅಥವಾ ಹುಲ್ಲು ತುಂಬಿದ ಮನುಷ್ಯಾಕೃತಿಯ ಬೆರ್ಚಪ್ಪಗಳನ್ನು ನಿಲ್ಲಿಸುವುದು ಸಾಮಾನ್ಯ ರೂಢಿ. ಗೋವಿಂದಸ್ವಾಮಿ ಎಂಬ ತಮಿಳು ಭಾಷಿಕ ವ್ಯಕ್ತಿ ನನ್ನ ಮನೆಯ ಕಾವಲುಗಾರನಾಗಿದ್ದ. ನಾನು ಆತನಿಗೆ ಊಟದ ಬಿಡುವು ಕೊಡಲು ಸಂಜೆ ಹೊತ್ತಿಗೆ ಮನೆಯ ಕಡೆ ಹೋಗುತ್ತಿದ್ದೆ. ಆತ ಜಾಗ ಖಾಲಿಮಾಡಿದ ಕೂಡಲೆ ಮನೆಯ ಮಹಡಿ ಏರಿ ನೇತುಹಾಕಿದ್ದ ಬೆರ್ಚಪ್ಪನನ್ನು ಕಿತ್ತು ಪಕ್ಕದ ಕನ್‌ಸರ್‌ವೆನ್ಸಿಗೆ ಎಸೆಯುತ್ತಿದ್ದೆ. ಗೋವಿಂದಸ್ವಾಮಿ ಬೆಳಿಗ್ಗೆ ಎದ್ದು ಬೆರ್ಚಪ್ಪನನ್ನು ಹುಡುಕಿ ತಂದು ಮರುಸ್ಥಾಪಿಸುತ್ತಿದ್ದ. ನಾನು ಅದನ್ನು ಗೊತ್ತಿಲ್ಲದಂತೆ ಕಿತ್ತು ಎಸೆಯುವುದು, ಆತ ಮತ್ತೆ ತಂದು ಕಟ್ಟುವುದು ನಡೆದೇ ಇತ್ತು. ಒಂದು ದಿನ ನಾನು ಉಚ್ಚಾಟಿಸಿದ್ದ ಆ ಬೆದರುಗೊಂಬೆಯನ್ನು ಆತ ತಂದುಕಟ್ಟುವ ಹೊತ್ತಿಗೆ ಅನಿರೀಕ್ಷಿತವಾಗಿ ಹೋದೆ. ಆತ ಸಿಟ್ಟಿನಿಂದ ಗೊಣಗುತ್ತಾ, "ನೋಡಿ ಚಾಮಿ ! ಯಾವನೊ ಚೂಳೆಮಗ ನಾನು ಕಟ್ಟಿದ್ದನ್ನು ದಿನಾ ಕಿತ್ತೆಸೆಯುತ್ತಾನೆ. ರಂಬ ಕಷ್ಟ ಚಾಮಿ" ಎಂದ. ನಾನು ಸತ್ಯ ಹೇಳಿದರೆ ಎಲ್ಲಿ ಎಡವಟ್ಟಾಗಿ ಆತ ಬಿಟ್ಟು ಹೋಗುತ್ತಾನೆಂಬ ಭಯದಿಂದಾಗಿ ಸುಮ್ಮನಿದ್ದೆ. ಮನೆ ಮುಗಿಯುವವರೆಗೆ ನಾನು 'ಚೂಳೆಮಗ'ನಾಗಿಯೇ ಉಳಿಯಬೇಕಾಯ್ತು.

ಮನೆ ಕಟ್ಟಿದ ಮೇಲೆ ಬಾಡಿಗೆಗೆ ಕೊಡಬೇಕಾದ ಸನ್ನಿವೇಶ ಬಂತು. ನಾನು ಈ ಹೊಸ ಮನೆ ಕಟ್ಟುವಾಗ ಗುದ್ದಲಿ ಪೂಜೆ ಮಾಡಲಿಲ್ಲ. ದ್ವಾರಬಾಗಿಲು ಪೂಜೆ ಮಾಡಲಿಲ್ಲ. ಹೋಮ ಹವನ ಕಾರ್ಯ ನಡೆಸಲಿಲ್ಲ. ಸಾಂಪ್ರದಾಯಿಕವಾಗಿ ಗೃಹಪ್ರವೇಶ ಮಾಡಲಿಲ್ಲ ದೇವರ ಕೋಣೆ ಕಟ್ಟಿಸಲಿಲ್ಲ. ಮನೆ ಬಾಡಿಗೆ ಕೇಳಿಕೊಂಡು ಬಂದವರು ಕಟ್ಟಾ ಸಂಪ್ರದಾಯವಾದಿ ಬ್ರಾಹ್ಮಣರಾಗಿದ್ದರು. ಮನೆ ಬಾಗಿಲು ಪಶ್ಚಿಮಕ್ಕಿದೆ, ವಾಸ್ತು ಪಾಲಿಸಿಲ್ಲ, ಬರುವುದೊ ಬೇಡವೊ ಎಂಬ ಅನುಮಾನದಿಂದ ನಾಳೆ ಹೇಳುತ್ತೇವೆ ಎನ್ನುತ್ತ ಹೊರಟುಹೋದರು.

ಮಾರನೆಯ ದಿನ ಮತ್ತೆ ಬಂದರು. ಮನೆಯ ಈ ಎಲ್ಲ ಕೊರತೆಗಳನ್ನು ಪಟ್ಟಿ ಮಾಡಿದರು. ಬೇಕಾದರೆ ಬರಲಿ, ಬೇಡವಾದರೆ ಬಿಡಲಿ ಎನ್ನುವ ನಿರ್ಲಿಪ್ತ ಭಾವನೆಯಿಂದ ನಾನೂ ಸುಮ್ಮನೆ ಇದ್ದೆ. ಕೊನೆಯ ಪಕ್ಷ ಪುಟ್ಟ ದೇವರ ಕೋಣೆಯನ್ನಾದರೂ ಕಟ್ಟಿಸಿಕೊಡಿ ಅಂದರು. ನಾನು ಒಪ್ಪಲಿಲ್ಲ.

"ನಿಮ್ಮ ಧಾರ್ಮಿಕ ಗ್ರಂಥಗಳು ಹೇಳುವಂತೆ ದೇವರು ಸರ್ವಾಂತರ್ಯಾಮಿ. ಅವನು ಅಣುರೇಣು ತೃಣ ಕಾಷ್ಠಗಳಲ್ಲಿ ಇರುತ್ತಾನೆ ಎಂಬುದು ನಂಬಿಕೆ. ನೀವು ನಂಬುವ ಭಕ್ತ ಪ್ರಹ್ಲಾದನ ಕಥೆಯೂ ಇದನ್ನೇ ಹೇಳುತ್ತದೆ ಅಲ್ಲವೆ ?" ಎಂದು ಅವರನ್ನು ಕೇಳಿದೆ. ಅಂಥ ದೇವರು ೧೦ x ೧೦ ಅಡಿ ಅಮೃತಶಿಲೆಯ ಕೋಣೆಯಲ್ಲಿ ಬಂಧಿತನಾಗಿರಬೇಕಿಲ್ಲ. ಬೇಕಾದರೆ ವಿಶಾಲವಾದ ಹಾಲಿನಲ್ಲೇ ಇರಲಿ ಎಂದು ತಮಾಷೆ ಮಾಡಿದೆ.

ಬಾಡಿಗೆದಾರರು ಒಲ್ಲದ ಮನಸ್ಸಿನಲ್ಲೇ ಮನೆಯಲ್ಲಿರಲು ಒಪ್ಪಿದರು. ವರ್ಷ ಕಳೆದಂತೆ ನಷ್ಟದಲ್ಲಿದ್ದ ಅವರ ವ್ಯಾಪಾರ ಕುದುರಿತು. ಇದ್ದ ಮೂವರು ಹೆಣ್ಣುಮಕ್ಕಳು ವೈದ್ಯರಾಗಿ ಉತ್ತಮ ಸ್ಥಿತಿ ಕಂಡುಕೊಂಡರು. ಈ ಮನೆಗೆ ಬಂದಮೇಲೆಯೆ ತಮ್ಮ ಸ್ಥಿತಿ ಉತ್ತಮವಾಯಿತು ಎಂಬ ನಂಬಿಕೆ ಅವರಲ್ಲಿ ಬಲವಾಯಿತು. ಒಂದು ದಿನ, "ನಿಮಗೆ ಬೇರೆ ನಮ್ಮದೊಂದು ಸೈಟು ಕೊಡುತ್ತೇವೆ, ಅದರಲ್ಲಿ ಮನೆ ಕಟ್ಟಿಸಿಕೊಳ್ಳಿ. ಈ ಮನೆಯನ್ನು ನಮಗೆ ಕೊಡಿ" ಎಂದು ದುಂಬಾಲು ಬಿದ್ದರು. ಹೀಗೆ ನನ್ನ ವಿಚಾರವಾದ ಮೇಲುಗೈ ಸಾಧಿಸಿದ ಸಂತೋಷ ಉಳಿದಿದೆ.

**ಡಾ॥ ಶ್ರೀಕಂಠ ಕೂಡಿಗೆ**
ವಿಶ್ರಾಂತ ಕನ್ನಡ ಪ್ರಾಧ್ಯಾಪಕ, ಕುವೆಂಪು ವಿಶ್ವವಿದ್ಯಾಲಯ, ನಂ. ೧೨, 'ತಕ್ಷಶಿಲಾ', ಜೈಲುರಸ್ತೆ
೩ನೇ ಕ್ರಾಸ್, ಶಿವಮೊಗ್ಗ – ೫೭೭ ೨೦೧



# ರೈತರ ಆತ್ಮಹತ್ಯೆ ತಡೆ

ಚೆನ್ನವೀರ ಕಣವಿ

ಇಂದು ಸಂಭವಿಸುತ್ತಿರುವ ರೈತರ ಸರಣಿ ಆತ್ಮಹತ್ಯೆಯ ಭೀಕರ ಪರಿಸ್ಥಿತಿಯನ್ನು ನೋಡಿದಾಗ ನಾನು ಬಾಲ್ಯದಲ್ಲಿ (ಮೂವತ್ತರ ದಶಕ) ಕಂಡ ರೈತರ ಜೀವನ ಕಣ್ಣ ಮುಂದೆ ಬರುತ್ತದೆ. ಹಿಂದಿನ ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಒಂದು ಚಿಕ್ಕ ಹಳ್ಳಿ ಶಿರುಂದ. ಬಯಲು ಸೀಮೆಯ ಆ ಊರಿನಲ್ಲಿ ಒಕ್ಕಲುತನವೇ ಮುಖ್ಯ ಉದ್ಯೋಗ. ಶೇ. ೬೦ರಷ್ಟು ಜನಕ್ಕೆ ಸಣ್ಣ–ದೊಡ್ಡ ಪ್ರಮಾಣದ ಹೊಲಗಳಿದ್ದು, ಅದಕ್ಕೆ ತಕ್ಕಂತೆ ಸ್ವಂತ ಕಮತಗಳೂ ಇದ್ದವು. ಕೂಲಿ ಮಾಡಿ ಹೊಟ್ಟೆ ತುಂಬಿಸಿ ಕೊಳ್ಳುವವರು ಶೇ. ೨೦ರಷ್ಟಿರಬೇಕು. ಉಳಿದವರು ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಕೊಂಡವರು. ಬಡಿಗ, ಕಮ್ಮಾರ, ಕುಂಬಾರ, ಅಕ್ಕಸಾಲಿ, ಕ್ಷೌರಿಕರೇ ಅಲ್ಲದೆ ವ್ಯಾಪಾರಕ್ಕಾಗಿ ಅಂಗಡಿಗಳನ್ನಿಟ್ಟವರು, ಒಡ್ಡರು, ಮಾದರು, ಹೊಲೆಯರು ಮುಂತಾದವರು. ಅವರ ಕೇರಿಗಳೆಲ್ಲ ಊರ ಹೊರಗೇ ಇರುತ್ತಿದ್ದವು. ಒಂದಲ್ಲ ಒಂದು ದೃಷ್ಟಿಯಿಂದ ಬೇರೆ ಬೇರೆ ವೃತ್ತಿಯ ಜನ ಒಕ್ಕಲಿಗರಿಗೆ ಸಹಾಯಕರೇ ಆಗಿದ್ದರು. ಸುಗ್ಗಿಯ ಕಣದಲ್ಲಿಯೇ ಆಯಗಾರರಿಗೆ ಕಾಳು–ಕಡಿ ಸಂದಾಯವಾಗುತ್ತಿತ್ತು.

ಊರಲ್ಲಿ ಹನುಮಂತ, ಕಲ್ಮೇಶ್ವರ, ಗುಡಿಗಳಿದ್ದು, ಗ್ರಾಮದೇವತೆ ಕಟಗೇರವ್ವನ ಗುಡಿಯ ಉಸ್ತುವಾರಿಯನ್ನು ಮಗ್ಗುಲದಲ್ಲಿಯೇ ಮನೆ ಮಾಡಿದ್ದ ಗೌಡರು (ಕುರುಬರು) ನೋಡಿಕೊಳ್ಳುತ್ತಿದ್ದರು. ನಾಲ್ಕನೆಯ ಇಯತ್ತಿನವರೆಗಿದ್ದ ಏಕೋಪಾಧ್ಯಾಯ ಶಾಲೆ. ತಿಂಗಳಿಗೊಮ್ಮೆ ಪಗಾರ ಶಿಪಾಯಿ (ಮಾಸ್ತರ ಪಗಾರ ಕೊಡಲು), ವಾರಕ್ಕೊಮ್ಮೆ ಪೋಸ್ಟ್‌ಮನ್ ಬರುತ್ತಿದ್ದರು. ಗುಡ್ಡದ ಮೇಲೆ ಹಾಳುಬಿದ್ದ ಹುಡೆ, ಸುತ್ತಲೂ ದಟ್ಟವಾದ ಡಬಗಳ್ಳಿ. ಒಂದೇ ಒಂದು ಚಹಾದಂಗಡಿಯಿಂದ ಕೇಳಿಬರುವ ಗ್ರಾಮಾಫೋನ್ ಹಾಡು.

ಮಸಾರಿ ಭೂಮಿಯೇ ಹೆಚ್ಚಾಗಿದ್ದರೂ ಎರೆಭೂಮಿಯೂ ಕೆಲ ಭಾಗದಲ್ಲಿತ್ತು. ಮಸಾರಿಯಲ್ಲಿ ಜೋಳ, ಶೇಂಗಾ, ತೊಗರಿ, ನವಣೆ, ಸಾವಿ ಹಾಗೂ ಸ್ವಲ್ಪಮಟ್ಟಿಗೆ ರಾಗಿ ಬೆಳೆದರೆ ಎರೆ ಹೊಲದಲ್ಲಿ ಹತ್ತಿ, ಗೋಧಿ, ಕುಸುಬೆ, ಬದುವಿನಲ್ಲಿ ಅಗಸಿ, ಗುರೆಳ್ಳು ಕಾಣುತ್ತಿದ್ದವು. ಮೆಣಸಿನಕಾಯಿ, ಉಳ್ಳಾಗಡ್ಡಿಯನ್ನೂ ಬೆಳೆಯುತ್ತಿದ್ದರು. ಜೋಳದ ಬೆಳೆಯ ನಡುವೆಯೇ ಅಕ್ಕಡಿ ಬಳ್ಳಿ (ಹೆಸರು, ಮಡಕಿ, ಅಲಸಂದೆ) ಗಳಿರುತ್ತಿದ್ದವು. ಅಂದರೆ, ಪ್ರತಿಯೊಬ್ಬ ಒಕ್ಕಲಿಗನ ಮನೆಯಲ್ಲಿ ಇಡೀ ವರುಷಕ್ಕೆ ಸಾಲುವಷ್ಟು ದವಸಧಾನ್ಯಗಳಿರುತ್ತಿದ್ದವಲ್ಲದೆ, ಅತಿವೃಷ್ಟಿ–ಅನಾವೃಷ್ಟಿ ಕಾರಣದಿಂದ ಒಮ್ಮೊಮ್ಮೆ ಬರಗಾಲ ಕಾಣಿಸಿಕೊಂಡರೂ ಹಿಂದಿನ ವರ್ಷದ ಧಾನ್ಯ ಸಾಕಾಗುತ್ತಿತ್ತು. ಹೆಚ್ಚು ಬೆಳೆದವರು ಕಾಳಿನ ಸಂಗ್ರಹಕ್ಕೆ ಹಗೇವುಗಳನ್ನು ಉಪಯೋಗಿಸುತ್ತಿದ್ದರು. ಬಡವರ ಹಾಗೂ

**ನಮ್ಮ ಸರಕಾರಗಳು, ಜನಪ್ರತಿನಿಧಿಗಳು ಕೃಷಿಯ ನೈಜ ಅಭಿವೃದ್ಧಿಯನ್ನು ನಿರ್ಲಕ್ಷಿಸಿರುವುದು ಎದ್ದು ಕಾಣುತ್ತಿದೆ. ಈಗಾಗಲೇ ಬಹಳ ಜನರು ಕೃಷಿಕ್ಷೇತ್ರದಿಂದ ದೂರವಾಗಿರುವಾಗ ಭೂಸ್ವಾಧೀನ ಕಾಯ್ದೆಯ ವಿಚಾರ ಕೇಂದ್ರ ಸರಕಾರದ ತಲೆಹೊಕ್ಕಿರುವುದು ವಿಷಾದನೀಯ. ಅದೇನೋ ಸದ್ಯಕ್ಕೆ ಸ್ಥಗಿತ. ರೈತರಿಗೆ ಆಧಾರಸ್ತಂಭವಾಗಬೇಕಾಗಿದ್ದ ರೈತ ಸಂಘಟನೆ ಒಡೆದು ಎರಡು ಮೂರು ಹೋಳಾಗಿದೆ. ಸಾಲ ಕೊಡಿಸಿದ ಮಧ್ಯವರ್ತಿಗಳ ಮುಷ್ಟಿಯಲ್ಲಿ ರೈತರ ಭವಿಷ್ಯ ಸಿಕ್ಕುಬಿದ್ದಿದೆ. ಉತ್ಪಾದನಾ ವೆಚ್ಚಕ್ಕನುಗುಣವಾಗಿ ಬೆಲೆ ನಿಗದಿಯಾಗುವ ಪದ್ಧತಿ ಬರುವವರೆಗೂ ರೈತರ ಆತ್ಮಹತ್ಯೆ ನಿಲ್ಲುವದಿಲ್ಲವೆಂಬ ವಿಚಾರ ಸರಿ ಎನಿಸುತ್ತದೆ.**





ಕೂಲಿಕಾರರ ಪರಿಸ್ಥಿತಿ ಎಲ್ಲ ಕಾಲಕ್ಕೂ ದಾರುಣವಾಗಿದ್ದರೂ ಕೆಲಸ ಸಿಗುವದೆಂಬ ಸಮಾಧಾನವಾದರೂ ಆಗ ಇರುತ್ತಿತ್ತು. ಆಗ ಆಳುಗಳ ಕೊರತೆ ಇರುತ್ತಿರಲಿಲ್ಲ. ಹೆಣ್ಣಾಳು ಹತ್ತಿ ಬಿಡಿಸುವದು, ಸೇಂಗಾಕಾಯಿ ಹರಿಯುವದು, ಕಳೆ ತೆಗೆಯುವದು, ದನಗಳಿಗೆ ಹುಲ್ಲು ಮಾಡುವದು ಮುಂತಾದ ಕೆಲಸಗಳನ್ನು ಸಲೀಸಾಗಿ ಮಾಡುತ್ತಿದ್ದರು. ಒಮ್ಮೊಮ್ಮೆ ಹತ್ತೀ ಕಟಿಗಿ ಕಿತ್ತು ಹೊರೆ ಹೊತ್ತು ತರುತ್ತಿದ್ದುದೂ ಉಂಟು. ಹೆಣ್ಣಾಳು ಗಂಡಾಳಿನಷ್ಟೇ ಕೆಲಸ ಮಾಡಿದರೂ ಕೂಲಿ ಮಾತ್ರ ಕಡಿಮೆಯೇ ಇರುತ್ತಿತ್ತು.

ಅಷ್ಟೊಂದು ಚಿಕ್ಕ ಹಳ್ಳಿಯಲ್ಲಿಯೂ ಮೂರು ಎಲೆದೋಟಗಳಿದ್ದು, ಎಲೆವಳಿಯ ಆಸರಕ್ಕೆ ಬೊಗಚಿ ಗಿಡಗಳಿದ್ದವು. ಅಲ್ಲಲ್ಲಿ ತೆಂಗು, ಬಾಳೆ, ನುಗ್ಗೆ ಗಿಡಗಳೂ ಇದ್ದು, ತೋಟದ ಬಾವಿಗಳಲ್ಲಿ ನೀರು ಯಥೇಚ್ಛವಾಗಿರುತ್ತಿತ್ತು. ಕಪ್ಪಲಿ ಹೊಡೆದು ನೀರು ಹಾಯಿಸುತ್ತಿದ್ದರು. ತೋಟದ ಬದಿಯ ಹೊಲದಲ್ಲಿ ಕೆಲವರು ಕಬ್ಬನ್ನೂ ಬೆಳೆದು ಗಾಣವಾಡಿಸಿ ಬೆಲ್ಲ ತಯಾರಿಸುತ್ತಿದ್ದರು. ನೀರಿನ ಅನುಕೂಲವಿದ್ದಲ್ಲಿ ಕಾಯಿಪಲ್ಲೆಯೂ ತಕ್ಕಷ್ಟು ಕಂಡುಬರುತ್ತಿತ್ತು. ಸಾಮಾನ್ಯವಾಗಿ ಒಕ್ಕಲಿಗರು ದನಕರುಗಳನ್ನು ಸಾಕುತ್ತಿದ್ದುದರಿಂದ ಊರ ಹೊರಗೆ ಅಥವಾ ಹಿತ್ತಲುಗಳಲ್ಲಿನ ತಿಪ್ಪೆಗಳಲ್ಲಿ ಸೆಗಣಿ, ಗೊಬ್ಬರ ತಯಾರಾಗುತ್ತಿತ್ತು. ಪ್ರತಿವರ್ಷ ಬೇಸಗೆಯಲ್ಲಿ ಹೊಲಗಳಿಗೆ ಗೊಬ್ಬರ ಹೊರುವ ಕಾರ್ಯವೂ ನಡೆಯುತ್ತಿತ್ತು. ಇದೇ ಕೆಲಸಕ್ಕೆ ಕೆಲವರು ಹೊಲಗಳಲ್ಲಿ ಕುರಿಮಂದೆಯನ್ನು ತರುಬುತ್ತಿದ್ದರು. ಹೆಚ್ಚಿನ ರೈತರು ಜೋಳ, ಗೋಧಿ ತುಂಬಿದ ಚೀಲಗಳನ್ನು, ಹತ್ತಿ ಅಂಡಿಗೆಗಳನ್ನು ಚಕ್ಕಡಿಗಳಲ್ಲಿ ಹೇರಿ ಗದಗಿನ ಮಾರುಕಟ್ಟೆಗೆ ಸಾಗಿಸುತ್ತಿದ್ದರು.

ಊರಿಗೆ ಆಗಿನ್ನೂ ವಿದ್ಯುಚ್ಛಕ್ತಿ ಬಂದಿರಲಿಲ್ಲ. ಪಂಪ್‌ಸೆಟ್ಟುಗಳ ಸುದ್ದಿಯೇ ಇರಲಿಲ್ಲ. ಬೋರು ಬೇಕಿರಲಿಲ್ಲ. ಕೆರೆಗಳು ತುಂಬಿರುತ್ತಿದ್ದರಿಂದ ಬಾವಿ ಸೆಲೆ ಬತ್ತುತ್ತಿರಲಿಲ್ಲ. ಬರಬರುತ್ತ ಅಪರೂಪಕ್ಕೊಬ್ಬರು ಕಬ್ಬಿಣ ರಂಟೆಯನ್ನು ಉಪಯೋಗಿಸುತ್ತಿದ್ದರು. ಹಬ್ಬ-ಹುಣ್ಣಿಮೆಗಳನ್ನು ಸಾಂಪ್ರದಾಯಿಕವಾಗಿ ಸಂಭ್ರಮದಿಂದಲೇ ಆಚರಿಸುತ್ತಿದ್ದರು. ಸಮೀಪದ ಶಿರಹಟ್ಟಿ ಫಕೀರಸ್ವಾಮಿ ಜಾತ್ರೆಯದೇ ಹೆಚ್ಚಿನ ಆಕರ್ಷಣೆ. ಜಾತ್ರೆಯ ಜೊತೆಗೆ ದನದ ಪರಿಷೆಯೂ ತಿಂಗಳವರೆಗೆ ಕೂಡುತ್ತಿದ್ದುದರಿಂದ ಮೂರು ನಾಲ್ಕು ನಾಟಕ ಕಂಪನಿಗಳೂ ತಳ ಊರಿ ಸಾಕಷ್ಟು ಮನರಂಜನೆ ನೀಡುತ್ತಿದ್ದವು. ಇಡೀ ವರುಷಕ್ಕೆ ಬೇಕಾಗುವ ಒಕ್ಕಲುತನದ ಉಪಕರಣಗಳನ್ನು ಮತ್ತು ಮನೆಗೆ ಬೇಕಾಗುವ ಸಾಮಾನುಗಳನ್ನು ಕೊಂಡುಕೊಳ್ಳಲು ಜಾತ್ರೆ ರೈತರಿಗೆ ದೊಡ್ಡ ಅವಕಾಶ ಒದಗಿಸುತ್ತಿತ್ತು. ಸುಗ್ಗಿಯ ನಂತರದ ಒಂದೆರಡು ತಿಂಗಳ ಬಿಡುವು ಬಯಲಾಟಗಳಿಗೆ ಮೀಸಲಾಗುತ್ತಿತ್ತು.

ಇದೆಲ್ಲ ಸುಮಾರು ಎಂಬತ್ತು ವರುಷಗಳ ಹಿಂದಿನ ಮಾತು. ಈಗಿನ ಬದಲಾವಣೆಗಳು ದಿಗ್ಭ್ರಮೆಯುಂಟುಮಾಡುತ್ತವಲ್ಲದೆ ಸಮಸ್ಯೆಗಳನ್ನು ಹೆಚ್ಚು ಗೋಜಲುಗೊಳಿಸಿವೆ. ಇಂದು ರೈತರ ಬದುಕಿನ ಶೈಲಿಯೇ ಬದಲಾಗಿಹೋಗಿದೆ. ಸಾಲ ಮಾಡುವುದು ಬಾಳುವೆ ಮಾಡುವ ರೀತಿಯಲ್ಲ ಎಂದು ಆಗ ಭಾವಿಸಲಾಗುತ್ತಿತ್ತು. ಇತ್ತೀಚೆಗಂತೂ ರೈತರು ಸರ್ಕಾರದ ಅಥವಾ ಇತರ ಮೂಲಗಳ ಸಾಲವನ್ನೇ ನಂಬಿ ವ್ಯವಸಾಯ ಪ್ರಾರಂಭಿಸುತ್ತಾರೆ. ಯಾಂತ್ರೀಕರಣ, ನಗರೀಕರಣಗಳಿಂದಾಗಿ ಹೊಸಬಗೆಯ ಆರ್ಥಿಕತೆಗೆ ಒಳಪಟ್ಟು ಅನೇಕ ಬಿಕ್ಕಟ್ಟುಗಳನ್ನೂ ಎದುರಿಸುವಂತಾಗಿದೆ. ಸುಗ್ಗಿಯ ಕಣಗಳು ಮಾಯವಾಗಿ ಟಾರು ರಸ್ತೆಗಳನ್ನು ಅದಕ್ಕೆ ಕೆಟ್ಟದಾಗಿ ಬಳಸಲಾಗುತ್ತಿದೆ. ಹಿಂದಿನ ಕಾಲದಲ್ಲಿ ರೈತರ ಆತ್ಮಹತ್ಯೆ ಎಂಬ ಮಾತೇ ಇರಲಿಲ್ಲ. ಸಾಂಸಾರಿಕ ಕಷ್ಟಕೋಟಲೆಗಳಿಂದ ಆಗೀಗ ಹೆಣ್ಣುಮಕ್ಕಳು ಆತ್ಮಹತ್ಯೆಗೆ ಒಳಗಾಗುತ್ತಿದ್ದುದುಂಟು. ಇಂದಿನ ರೈತರ ಆತ್ಮಹತ್ಯೆಗೆ ಬೆಳೆಗಳ ನಾಶ, ಸಾಲ ಬಾಧೆ, ಸಮರ್ಪಕ ಬೆಲೆ ಬರದಿರುವುದು ಮೊದಲಾದ ಕಾರಣಗಳನ್ನು ನೀಡುವುದುಂಟು. ಆದರೆ ಇವತ್ತಿನ ಜೀವನಶೈಲಿಯೇ ಅದಕ್ಕೆ ಕಾರಣವಾಗಿರಬಹುದೇ ಎಂದು ಯಾರೂ ಯೋಚನೆ ಮಾಡಿದಂತೆ ಕಾಣುವದಿಲ್ಲ.



**ಹಾರೈಕೆ**

ಸೂರ್ಯ ಮುಳುಗಿದನೆಂದು
ಅಳದಿರು ಚಂದಿರ
ಇದೋ ನಿನ್ನನಪ್ಪಿಕೊಳ್ಳಲು
ಅದೆಷ್ಟು –
ತಾರೆ – ನೀರೆಯರು ?!

**ಶೋಭಾ ಪ್ರಮೋದ್**
ಮನ್‌ಗಾಂವ್, ಮಹಾರಾಷ್ಟ್ರ

ಈ ಹಿಂದೆ ಕೃಷಿತಜ್ಞ ಡಾ॥ ವೀರೇಶ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿ ರೈತರ ಆತ್ಮಹತ್ಯೆಗಳಿಗೆ ಕಾರಣಗಳನ್ನು ಕಂಡುಹಿಡಿಯಲು ಹೇಳಿದರೆ, ಆ ತಜ್ಞರು ಪರಿಹಾರ ರೂಪದಲ್ಲಿ ದೊರೆವ ಲಕ್ಷ ರೂಪಾಯಿಗಳ (ಈಗ ಐದು ಲಕ್ಷ) ಆಶೆಗಾಗಿ ಅವರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆಂದು ಹೇಳಿದರು. ಅವರ ವರದಿ ಸಮಗ್ರ ವಿವೇಚನೆಯಾಗಿರದೆ ವಿವಾದಾಸ್ಪದ ಸಂಗತಿಗೆ ಎಡೆಮಾಡಿಕೊಟ್ಟಿತು. ಅದೇ ಸಮಿತಿ, ರೈತರು ಕೇವಲ ಕೃಷಿಗಾಗಿ ಸಾಲ ಮಾಡುವದಿಲ್ಲ; ಮದುವೆ, ಮನೆ ಕಟ್ಟಡ, ಮಕ್ಕಳ ವಿದ್ಯಾಭ್ಯಾಸ... ಹೀಗೆ ವಿವಿಧ ಕಾರಣಗಳಿಗೆ ಸಾಲ ಮಾಡುತ್ತಾರೆಂದೂ ಹೇಳಿತು. ಕೆಲಮಟ್ಟಿಗೆ ಇದು ನಿಜವೂ ಇರಬಹುದು. ಏನೇ ಇರಲಿ, ಒಟ್ಟಾರೆ ಕೃಷಿಕರು ಒಳ್ಳೆಯ ಸ್ಥಿತಿಯಲ್ಲಿಲ್ಲ ಎನ್ನುವದಂತೂ ನಿಜ.

ಹಿರಿಯ ಸಮಾಜವಾದಿ ಹಾಗೂ ಸ್ವತಃ ರೈತರಾದ (ಇವರಿಂದ ರಚಿತವಾದ 'ಕಾಡಿನ ಜಾಡು ಹಿಡಿದು' ಎಂಬ ಆತ್ಮಕಥೆ ಪ್ರಸಿದ್ಧವಾಗಿದೆ) ಕಡಿದಾಳ ಶಾಮಣ್ಣನವರನ್ನು 'ಹೊಸ ಮನುಷ್ಯ'ದ (ಆಗಸ್ಟ್ ೨೦೧೫ ವಾರ್ಷಿಕ ವಿಶೇಷ ಸಂಚಿಕೆ) ಸಂಪಾದಕರು ರೈತರ ಸರಣಿ ಆತ್ಮಹತ್ಯೆಗೆ ಸಂಬಂಧಪಟ್ಟಂತೆ ಕೆಲವು ಪ್ರಶ್ನೆಗಳನ್ನು ಕೇಳಿದಾಗ ಶಾಮಣ್ಣನವರು ಕೊಟ್ಟ ಕೆಲವು ಉತ್ತರಗಳು ರೈತ ಸಮುದಾಯದ ಕಣ್ಣು ತೆರೆಸುವಂತಿವೆ. ಅವರು ಹೇಳಿದ್ದು: "ದುಂದು ವೆಚ್ಚಮಾಡಿ ನಾನು ಸಾಲ ಮಾಡಲು ಹೋಗಿಲ್ಲ. ಕಾರಣ ನಾನು ನನ್ನ ಮಿತಿ ಅರಿತೇ ಬೇಸಾಯ ಮಾಡಿದ್ದೇನೆ; ಬದುಕು ನಡೆಸಿದ್ದೇನೆ. ನಾನು ರೈತನೆಂಬ, ಹಳ್ಳಿಗನೆಂಬ ಹೆಮ್ಮೆಯಿದೆ. ನಾನು ಗೊಬ್ಬರ, ಕೀಟನಾಶಕ, ಟೆಲ್ಲರ್, ಟ್ರ್ಯಾಕ್ಟರ್‌ಗಳಿಗೆ ಎಂದಿಗೂ ಮೊರೆಹೋಗಲಿಲ್ಲ. ಅಧಿಕ ಇಳುವರಿಯ ಬೆನ್ನು ಹತ್ತಲಿಲ್ಲ, ನನಗೆ ಬೇಕಾದುದನ್ನೆಲ್ಲ ನಾನೇ ಬೆಳೆದುಕೊಂಡು ಮಿಕ್ಕಿದ್ದನ್ನು ಮಾರಿ ಬದುಕುತ್ತಿದ್ದೇನೆ. ನನ್ನದು ಅಡಕೆ ಬೆಳೆಯೂ ಸೇರಿ ಸಾವಯವ ಕೃಷಿ. ಎರಡು ಕುಟುಂಬಗಳ ಸಹಾಯ ಪಡೆದು, ನಾವೂ ಅವರೊಂದಿಗೆ ದುಡಿಯುತ್ತ ಅವರ ಕುಟುಂಬಗಳನ್ನು ಸಾಕುತ್ತ ಪ್ರಕೃತಿಯ ಮಧ್ಯೆ ಯಾವ ತರಲೆ-ತಾಪತ್ರಯಗಳೂ (ಅಬ್ಬರದ ಮದುವೆ-ಮುಂಜಿ, ದುಬಾರಿ ಹಬ್ಬ-ಹರಿದಿನ, ದೇವರು-ದಿಂಡಿರು, ವಾಸ್ತು-ಹರಕೆ ಇತ್ಯಾದಿ) ಇಲ್ಲದೆ, ಆರಾಮವಾಗಿ ನೆಮ್ಮದಿಯಿಂದ ಬದುಕುತ್ತಿದ್ದೇವೆ. ನಗರದ ಯಾವ ಆಕರ್ಷಣೆಯೂ ನಮಗಿಲ್ಲ. ರೈತರಿಗೆ ಸಾಲ ಸಿಗುವ ವ್ಯವಸ್ಥೆ ಜಾಸ್ತಿಯಾಗಿರುವುದು ಈ ಪರಿಸ್ಥಿತಿಗೆ ಒಂದು ಕಾರಣವಿರಬಹುದು."

ನಮ್ಮ ಸರಕಾರಗಳು, ಜನಪ್ರತಿನಿಧಿಗಳು ಕೃಷಿಯ ನೈಜ ಅಭಿವೃದ್ಧಿಯನ್ನು ನಿರ್ಲಕ್ಷಿಸಿರುವುದು ಎದ್ದುಕಾಣುತ್ತಿದೆ. ಈಗಾಗಲೇ ಬಹಳ ಜನರು ಕೃಷಿಕ್ಷೇತ್ರದಿಂದ ದೂರವಾಗಿರುವಾಗ ಭೂಸ್ವಾಧೀನ ಕಾಯ್ದೆಯ ವಿಚಾರ ಕೇಂದ್ರ ಸರಕಾರದ ತಲೆಹೊಕ್ಕಿರುವುದು ವಿಷಾದನೀಯ. ಅದೇನೋ ಸದ್ಯಕ್ಕೆ ಸ್ಥಗಿತ. ರೈತರಿಗೆ ಆಧಾರ ಸ್ತಂಭವಾಗಬೇಕಾಗಿದ್ದ ರೈತ ಸಂಘಟನೆ ಒಡೆದು ಎರಡು ಮೂರು ಹೋಳಾಗಿದೆ. ಸಾಲ ಕೊಡಿಸಿದ ಮಧ್ಯವರ್ತಿಗಳ ಮುಷ್ಟಿಯಲ್ಲಿ ರೈತರ ಭವಿಷ್ಯ ಸಿಕ್ಕುಬಿದ್ದಿದೆ. ಉತ್ಪಾದನಾ ವೆಚ್ಚಕ್ಕನುಗುಣವಾಗಿ ಬೆಲೆ ನಿಗದಿಯಾಗುವ ಪದ್ಧತಿ ಬರುವವರೆಗೂ ರೈತರ ಆತ್ಮಹತ್ಯೆ ನಿಲ್ಲುವದಿಲ್ಲವೆಂಬ ವಿಚಾರ ಸರಿ ಎನಿಸುತ್ತದೆ.

ಒಟ್ಟಿನಲ್ಲಿ ಸರಕಾರ, ಜನಪ್ರತಿನಿಧಿಗಳು, ಸಾರ್ವಜನಿಕರು, ಕೃಷಿ ವಿಶ್ವವಿದ್ಯಾಲಯಗಳು ಎಲ್ಲರೂ ಸೇರಿ ಉಲ್ಬಣಿಸುತ್ತಿರುವ ಈ ಸಮಸ್ಯೆಗೆ ಶಾಶ್ವತ ಪರಿಹಾರ ಕಂಡುಕೊಳ್ಳುವದು ತುರ್ತಿನ ಸಂಗತಿಯಾಗಿದೆ. ರಾಷ್ಟ್ರದಲ್ಲಿಯೇ ಹೆಸರು ಮಾಡಿದ ಕರ್ನಾಟಕ ರೈತ ಚಳುವಳಿ ಮತ್ತೆ ಶಕ್ತಿಶಾಲಿಯಾಗಿ, ಕಾರ್ಯೋನ್ಮುಖವಾಗಿ ಅನ್ನದಾತನ ಅನಾಥಪ್ರಜ್ಞೆಯನ್ನು ನಿವಾರಿಸಬೇಕು.

**ಚೆನ್ನವೀರ ಕಣವಿ**
'ಚೆಂಬೆಳಕು', ೯ನೇಯ ಅಡ್ಡರಸ್ತೆ. ಕಲ್ಯಾಣನಗರ, ಧಾರವಾಡ – ೫೮೦ ೦೦೭

# ಟಾಲ್‌ಸ್ಟಾಯ್ ರಚಿಸಿರುವ ಆರ್ಡಿಯಲ್ ಕಾದಂಬರಿಯ ಕನ್ನಡ ರೂಪ 'ಉಗ್ರಪರೀಕ್ಷೆ'

ಡಾ॥ ಎಂ. ಎಸ್. ವಿಜಯ

ಹೊಸಗನ್ನಡ ಕಥಾಸಾಹಿತ್ಯದಲ್ಲಿ ಶ್ರೀನಿವಾಸರ ನಂತರ ಪ್ರಮುಖವಾಗಿ ಗುರುತಿಸಬಹುದಾದ ಹೆಸರು 'ಆನಂದ' (ಅಜ್ಜಂಪುರ ಸೀತಾರಾಮ್ ೧೯೦೨ – ೧೯೬೩) ಅವರದು. ಆನಂದರ ಬರವಣಿಗೆ ಸಣ್ಣಕತೆಗಳ ರಚನೆಗಷ್ಟೇ ಸೀಮಿತವಾಗಿಲ್ಲ. ವಚನ, ಪ್ರಬಂಧ ರಚನೆಯಲ್ಲದೆ, ಕೆಲವು ಪಾಶ್ಚಾತ್ಯ ಕತೆ ಕಾದಂಬರಿ, ನಾಟಕಗಳನ್ನೂ ಅನುವಾದಿಸಿದ್ದಾರೆ. ರಷ್ಯ ದೇಶದ ಖ್ಯಾತ ಬರಹಗಾರ ಅಲೆಕ್ಸಿ ಟಾಲ್‌ಸ್ಟಾಯ್ ರಚಿಸಿರುವ ಆರ್ಡಿಯಲ್ ಎಂಬ ಬೃಹತ್ ಕಾದಂಬರಿಯನ್ನು ಆನಂದರು 'ಉಗ್ರಪರೀಕ್ಷೆ' ಎಂಬ ಹೆಸರಿನಲ್ಲಿ ಅನುವಾದಿಸಿ, ೧೯೫೮ರಲ್ಲಿ ವಿಶ್ವಸಾಹಿತ್ಯ ಪ್ರಕಾಶನದ ಮೂಲಕ ಪ್ರಕಟಿಸಿದರು. ಟಾಲ್‌ಸ್ಟಾಯ್ ಆರ್ಡಿಯಲ್ ಕಾದಂಬರಿಯನ್ನು 'ದಿ ಸಿಸ್ಟರ್ಸ್' '೧೯೧೮' ಮತ್ತು 'ಬ್ಲೀಕ್ ಮಾರ್ನಿಂಗ್' ಎಂದು ಮೂರು ಭಾಗಗಳಲ್ಲಿ ರಚಿಸಿದ್ದರೆ, ಆನಂದರು 'ಉಗ್ರಪರೀಕ್ಷೆ' ಕಾದಂಬರಿಯನ್ನು 'ಸೋದರಿಯರು', '೧೯೧೮' ಮತ್ತು 'ಬೇಸರದ ಬೆಳಗು' ಎಂದು ಮೂರು ಭಾಗಗಳಲ್ಲಿ ಅನುವಾದಿಸಿದ್ದಾರೆ.

ರಷ್ಯದಲ್ಲಿ ಜರುಗಿದ ಅಕ್ಟೋಬರ್ ಕ್ರಾಂತಿ ಜಯಮುಖವಾಗಿ ಪರ್ಯವಸಾನಗೊಂಡಿತ್ತು. ಸಮಾಜವಾದಿ ಜೀವನದ ಹೊಸಬಾಳನ್ನು ತಮ್ಮದಾಗಿ ಮಾಡಿಕೊಳ್ಳುವಂತಹ ಮಹತ್ವಪೂರ್ಣ ವಿಚಾರವು ಪ್ರತಿಯೊಬ್ಬ ಸೋವಿಯತ್ ಪ್ರಜೆಯ ಬಾಳಿನಲ್ಲೂ ಪ್ರವಹಿಸುತ್ತಿತ್ತು. ಹಳತು, ಹೊಸತರ ಹೊಯ್ದಾಟದ ನಡುವೆ ಹೊಮ್ಮಿಬಂದ ಸಮಾಜವಾದಿ ಬೃಹತ್ ಪರಿವರ್ತನೆ ಸೋವಿಯತ್ ಜನತೆಯ ಪಾಲಿಗೆ ಒಂದು ಉಗ್ರಪರೀಕ್ಷೆಯೇ ಆಗಿತ್ತು. ಸೋವಿಯತ್ ಇತಿಹಾಸದಲ್ಲಿಯೇ ಅತ್ಯಂತ ಮಾರ್ಮಿಕವಾದ ಈ ಪರ್ವಕಾಲದ ಹೃದಯಸ್ಪರ್ಶಿ ಚಿತ್ರಣವನ್ನು ಟಾಲ್‌ಸ್ಟಾಯ್ ಅವರ ಆರ್ಡಿಯಲ್ ಕಾದಂಬರಿಯಲ್ಲಿ ಕಾಣಬಹುದಾಗಿದೆ.

ರಣಕಹಳೆಗಳ ಕೂಗು, ಕ್ರಾಂತಿಯ ಘೋಷ ಎಲ್ಲವೂ ಶಮನಗೊಳ್ಳಬೇಕು, ಕಡೆಗೂ ಅಳಿಯದೆ ಉಳಿಯುವುದೆಂದರೆ ವ್ಯಕ್ತಿ-ವ್ಯಕ್ತಿಯ ನಡುವಣ ಪವಿತ್ರ ಪ್ರೇಮವೊಂದೇ ಎಂಬ ಭಾವಮುದ್ರೆಯೊಡನೆ ಈ ಬೃಹತ್ ಕಾದಂಬರಿಯ ಮೊದಲ ಭಾಗ ಮುಕ್ತಾಯವಾಗುತ್ತದೆ. ಈ ಭಾವನೆ ಸಾಮಾಜಿಕ ಶಕ್ತಿಗಳೊಡನೆ ಘರ್ಷಿಸಿದಾಗ ಅದರ ವ್ಯಾಪ್ತಿಯು ಮತ್ತಷ್ಟು ವಿಸ್ತಾರಗೊಂಡು, ವೈಯಕ್ತಿಕ ಘಟ್ಟವು ಸಾಮಾಜಿಕ ಘಟ್ಟವನ್ನು ಮುಟ್ಟುವ ಭವ್ಯ ನಿರೂಪಣೆಯನ್ನು ಕಾದಂಬರಿಯ ಎರಡನೆಯ ಭಾಗದಲ್ಲಿ ಕಾಣಬಹುದಾಗಿದೆ. ದೌರ್ಜನ್ಯ, ದಬ್ಬಾಳಿಕೆ, ಅಸಮಾನತೆಯ ವಿರುದ್ಧ ಪ್ರತಿಭಟಿಸಲು ಉದ್ಯುಕ್ತವಾದ ಸೋವಿಯತ್ ನಾಡಿನಲ್ಲಿ ಸಮಾಜವಾದಿ ಆಡಳಿತವನ್ನು ಸ್ಥಿರಗೊಳಿಸಲು, ಸಾರ್ವತ್ರಿಕ ಸುಖಜೀವನಕ್ಕಾಗಿ ರಷ್ಯ ದೇಶವನ್ನು ಪುನರ್‌ವ್ಯವಸ್ಥೆಗೊಳಿಸಲು, ವೀರಸಂಕಲ್ಪ ಕೈಗೊಂಡು ಆತ್ಮವಿಶ್ವಾಸದಿಂದ ಯುದ್ಧವನ್ನು ಸ್ವಾಗತಿಸುವ ಜನತೆಯ ಚಿತ್ರಣವನ್ನು ಕಾದಂಬರಿಯ ಮೂರನೇ ಭಾಗ ನಿರೂಪಿಸುತ್ತದೆ.

೧೯೧೯ರಲ್ಲಿ ಟಾಲ್‌ಸ್ಟಾಯ್ ಆರ್ಡಿಯಲ್ ಕಾದಂಬರಿಯನ್ನು ಬರೆಯಲು ತೊಡಗಿದಾಗ ಕಥಾವಸ್ತು ಅಂದಿನ ಕಾಲಕ್ಕೆ ಅತ್ಯಂತ ಪ್ರಸ್ತುತವೆನಿಸಿತ್ತು. ರಷ್ಯ ಅನೇಕ ಸಂಕಷ್ಟಗಳನ್ನು ಎದುರಿಸಿತ್ತು. ಜರ್ಮನಿಯೊಡನೆ ಅದೇ ತಾನೇ ಯುದ್ಧ ಮುಗಿದಿತ್ತು. ಕ್ರಾಂತಿಯೂ ಯಶಸ್ವಿಯಾಗಿತ್ತು. ಅವುಗಳ ಪರಿಣಾಮವಾಗಿ ನೋವೂ ಹಸಿಯಾಗಿಯೇ ಇತ್ತು. ಇವೆಲ್ಲವನ್ನೂ ಕಂಡ ಟಾಲ್‌ಸ್ಟಾಯ್‌ಗೆ ಸಹಜವಾಗಿ ಆ ದಿನಗಳು ರಷ್ಯದ ಗತವೈಭವದತ್ತ ಕೊಂಡೊಯ್ಯುತ್ತಿರುವಂತೆ ಭಾಸವಾಯಿತು. ಇತಿಹಾಸದ ಬೆಳಕು ಕಾದಂಬರಿಗೆ ಅನಿವಾರ್ಯ ಅಗತ್ಯವಾಯಿತು. ಪ್ರಾರಂಭದ ಹಂತದಲ್ಲಿ ಇತಿಹಾಸದ ದನಿ ಸಣ್ಣದಾಗಿದದ್ದು, ಕ್ರಮೇಣ ಸ್ಪಷ್ಟವಾಗಿ, ಉಳಿದೆಲ್ಲಾ ಅಂಶಗಳಿಗಿಂತಲೂ ಪ್ರಧಾನವಾಗಿ ವ್ಯಾಪಿಸಿದುದನ್ನು ಕಾದಂಬರಿಯಲ್ಲಿ ಗುರುತಿಸಬಹುದು. ಕಾದಂಬರಿಯ ಮೊದಲ ಭಾಗದಲ್ಲಿ ಇತಿಹಾಸದ ಅಂಶಗಳು ಗೌಣವಾಗಿ ಮಾನವೀಯ ಸಂಬಂಧಗಳು, ಕಾರ್ಯಾಚರಣೆಗಳು ಪ್ರಧಾನವಾಗುತ್ತವೆ. ಎರಡನೇ ಭಾಗದಲ್ಲಿ ಇತಿಹಾಸದ ಅಂಶಗಳೇ ಪ್ರಧಾನವಾಗಿ, ಉಳಿದೆಲ್ಲವೂ ಗೌಣವಾಗುತ್ತವೆ. ಇಲ್ಲಿ ಮಹಾಕ್ರಾಂತಿ, ಅದನ್ನು ನಡೆಸಿದ ಸಾಹಸಿಗಳು, ಪ್ರತಿಗಾಮಿ ಪ್ರಗತಿಗಾಮಿ ಶಕ್ತಿಗಳ ನಡುವಣ ಹೋರಾಟ, ಇವುಗಳ ಮೇಲೆ ಹೊಸ ಬೆಳಕನ್ನು ಚೆಲ್ಲಲಾಗಿದೆ. ರಷ್ಯದಲ್ಲಾದ ಐತಿಹಾಸಿಕ ಅಲ್ಲೋಲಕಲ್ಲೋಲಗಳಿಂದಾದ ಬದಲಾವಣೆಗಳು ಕಾದಂಬರಿಯಲ್ಲಿ ನೆಲೆ ತಪ್ಪಿ ಅಲೆದಾಡುವ ನಾಯಕ ನಾಯಕಿಯರ ಜೀವನದ ಮೇಲೂ ಉಗ್ರ ಪರಿಣಾಮವನ್ನು ಬೀರುತ್ತವೆ. ೧೯೪೧ರಲ್ಲಿ ಟಾಲ್‌ಸ್ಟಾಯ್ ಈ ಮಹತ್ತರ ಕಾದಂಬರಿಯ ಮೂರನೇ ಭಾಗವನ್ನು ಬರೆದು ಮುಗಿಸುವ ವೇಳೆಗೆ ಯುದ್ಧದ ಘೋಷಣೆಯಾಗಿರುತ್ತದೆ. ರಷ್ಯದ ಜನತೆ ಮನುಷ್ಯ ಮನುಷ್ಯರ ನಡುವಣ ದಬ್ಬಾಳಿಕೆಯನ್ನು ಹತ್ತಿಕ್ಕುವ, ವಿದ್ಯುದೀಕರಣದಿಂದ ಅಭಿವೃದ್ಧಿಹೊಂದುವ ದೃಢಸಂಕಲ್ಪ ಮಾಡಿ, ಯುದ್ಧವನ್ನು ಆತ್ಮವಿಶ್ವಾಸದಿಂದ ಸ್ವಾಗತಿಸುತ್ತಾರೆ. ಚೈತನ್ಯ ತುಂಬಿದ ರಷ್ಯ ಸುಖಜೀವನದ ಹೊಂಗನಸು ಕಾಣುತ್ತದೆ. ಟಾಲ್‌ಸ್ಟಾಯ್ ಪಕ್ವ ಅನುಭವದಿಂದ ರಷ್ಯದ ಐತಿಹಾಸಿಕ ಸಂಗತಿಗಳನ್ನು ಅರಗಿಸಿಕೊಂಡು ವಸ್ತುವಿನ ಪ್ರತಿಪಾದನೆ ಮಾಡಿರುವುದು ಕಾದಂಬರಿಯಲ್ಲಿ ನಿಚ್ಚಳವಾಗಿ ಗೋಚರಿಸುತ್ತದೆ. ಕಾದಂಬರಿಯ ವಸ್ತು, ಇಪ್ಪತ್ತೆರಡು ವರ್ಷಗಳ ದೀರ್ಘಕಾಲ ಟಾಲ್‌ಸ್ಟಾಯ್‌ನ ಮನಸ್ಸಿನಲ್ಲಿ ಜೀವಂತವಾಗಿ ರೂಪುಗೊಂಡು ಅವನ ಕಲ್ಪನಾ ಲೋಕದಲ್ಲಿ ಬೃಹತ್ತಾಗಿ ಬೆಳೆದು ನಂತರ ಕಾದಂಬರಿಯ ಸ್ವರೂಪ ಪಡೆಯಿತು.

'ಆರ್ಡಿಯಲ್' ಒಂದು ಚಾರಿತ್ರಿಕ ಕಾದಂಬರಿ. ಏಕೆಂದರೆ, ರಷ್ಯದ ಭವಿಷ್ಯವನ್ನು ಕುರಿತು ಪ್ರಜ್ಞಾಪೂರ್ವಕವಾದ ಚಿಂತನೆ ಅಲ್ಲಿ ಕಂಡುಬರುತ್ತದೆ. ಅಲ್ಲದೆ ರಷ್ಯದ ಇತಿಹಾಸವನ್ನು ತಿಳಿಯಬಯಸುವ ಆಸಕ್ತರಿಗೆ ಮಾರ್ಗದರ್ಶಿಯಂತಿದೆ. ಕಾದಂಬರಿಯ ಮೊದಲ ಭಾಗ 'ದಿ ಸಿಸ್ಟರ್ಸ್' ಮಾನವ ಪ್ರೇಮವನ್ನು ಚಿತ್ರಿಸಬಯಸುವ ಆಧುನಿಕ ಕಾದಂಬರಿಯಂತೆ ಕಂಡರೂ, ಮುಂದಿನ ಭಾಗಗಳಲ್ಲಿ ಚಾರಿತ್ರಿಕ ಮಜಲುಗಳೇ ಪ್ರಮುಖವಾಗಿ, ರಷ್ಯದ ಭವಿಷ್ಯವೇ ಪ್ರಧಾನ ಪ್ರಶ್ನೆಯಾಗಿ, ಬೃಹತ್ ಐತಿಹಾಸಿಕ ಕೃತಿಯಾಗಿ ರೂಪುಗೊಂಡಿರುವುದನ್ನು ಗಮನಿಸಬಹುದು. ರಷ್ಯದ ಹೃದಯದಲ್ಲಡಗಿದ್ದ ಸುಯ್ಯುವ ಬಿಸಿಯುಸಿರಿನಂತಹ ವಾತಾವರಣ ಓದುಗರನ್ನು ಉದ್ವಿಗ್ನಗೊಳಿಸುತ್ತದೆ. ಭಾವೋದ್ರಿಕ್ತರಾಗಿ, ಕಲ್ಪನಾಜೀವಿಗಳಾಗಿ, ಕುಶಾಗ್ರಮತಿಗಳಾಗಿ, ಕಷ್ಟಸಹಿಷ್ಣುಗಳಾಗಿ, ಸಂದರ್ಭಕ್ಕೆ ತಕ್ಕಂತೆ ವರ್ತಿಸುವ ಸಮಯಪ್ರಜ್ಞೆಯುಳ್ಳ ಪ್ರಜೆಗಳಾಗಿ ರಷ್ಯನ್ನರು ಚಿತ್ರಿತರಾಗಿರುವುದನ್ನು ಇಲ್ಲಿ ಕಾಣಬಹುದು.

ಆರ್ಡಿಯಲ್ ಒಂದು ಚಾರಿತ್ರಿಕ ಕಾದಂಬರಿ. ಏಕೆಂದರೆ, ರಷ್ಯದ ಭವಿಷ್ಯವನ್ನು ಕುರಿತು ಪ್ರಜ್ಞಾಪೂರ್ವಕವಾದ ಚಿಂತನೆ ಅಲ್ಲಿ ಕಂಡುಬರುತ್ತದೆ. ಅಲ್ಲದೆ, ರಷ್ಯದ ಇತಿಹಾಸವನ್ನು ತಿಳಿಯಬಯಸುವ ಆಸಕ್ತರಿಗೆ ಮಾರ್ಗದರ್ಶಿಯಂತಿದೆ. ಕಾದಂಬರಿಯ ಮೊದಲ ಭಾಗ 'ದಿ ಸಿಸ್ಟರ್ಸ್' ಮಾನವ ಪ್ರೇಮವನ್ನು ಚಿತ್ರಿಸಬಯಸುವ ಆಧುನಿಕ ಕಾದಂಬರಿಯಂತೆ ಕಂಡರೂ, ಮುಂದಿನ ಭಾಗಗಳಲ್ಲಿ ಚಾರಿತ್ರಿಕ ಮಜಲುಗಳೇ ಪ್ರಮುಖವಾಗಿ, ರಷ್ಯದ ಭವಿಷ್ಯವೇ ಪ್ರಧಾನ ಪ್ರಶ್ನೆಯಾಗಿ, ಬೃಹತ್ ಐತಿಹಾಸಿಕ ಕೃತಿಯಾಗಿ ರೂಪುಗೊಂಡಿರುವುದನ್ನು ಗಮನಿಸಬಹುದು. ರಷ್ಯದ ಹೃದಯದಲ್ಲಡಗಿದ್ದ ಸುಯ್ಯುವ ಬಿಸಿಯುಸಿರಿನಂತಹ ವಾತಾವರಣ ಓದುಗರನ್ನು ಉದ್ವಿಗ್ನಗೊಳಿಸುತ್ತದೆ. ಭಾವೋದ್ರಿಕ್ತರಾಗಿ, ಕಲ್ಪನಾಜೀವಿಗಳಾಗಿ, ಕುಶಾಗ್ರಮತಿಗಳಾಗಿ, ಕಷ್ಟಸಹಿಷ್ಣುಗಳಾಗಿ, ಸಂದರ್ಭಕ್ಕೆ ತಕ್ಕಂತೆ ವರ್ತಿಸುವ ಸಮಯಪ್ರಜ್ಞೆಯುಳ್ಳ ಪ್ರಜೆಗಳಾಗಿ ರಷ್ಯನ್ನರು ಚಿತ್ರಿತರಾಗಿರುವುದನ್ನು ಇಲ್ಲಿ ಕಾಣಬಹುದು. "ಓ! ರಷ್ಯನ್ ಲ್ಯಾಂಡ್" ಎಂದೇ ಕಾದಂಬರಿ ಪ್ರಾರಂಭವಾಗುತ್ತದೆ. ರಷ್ಯ ದೇಶವು ಅನೇಕ ಕಠಿಣ ಸಂದರ್ಭಗಳನ್ನು ಎದುರಿಸಬೇಕಾಗುತ್ತದೆ. ಹೀಗಾಗಿ ಇಲ್ಲಿನ ಪಾತ್ರಗಳೂ ಕಷ್ಟಕೋಟಲೆಗಳ ಶೃಂಖಲೆಯಲ್ಲೇ ಸುತ್ತುತ್ತಿರಬೇಕಾಗುತ್ತದೆ. ಈ ದೃಷ್ಟಿಯಿಂದಲೂ ಕಾದಂಬರಿಯ ಶೀರ್ಷಿಕೆ 'ಆರ್ಡಿಯಲ್' (ಉಗ್ರಪರೀಕ್ಷೆ) ಅರ್ಥಪೂರ್ಣವೆನಿಸುತ್ತದೆ.

ಕಾದಂಬರಿಯ ಮೊದಲ ಭಾಗ 'ದಿ ಸಿಸ್ಟರ್ಸ್' (ಸೋದರಿಯರು) ಮೊದಲನೇ ಮಹಾಯುದ್ಧದ ಮುಂಚಿನ ರಷ್ಯದ ಸೇಂಟ್ ಪೀಟರ್ಸ್‌ಬರ್ಗ್‌ನ ಸ್ಥಿತಿಗತಿಗಳನ್ನು ವರ್ಣಿಸುತ್ತದೆ. ಪೀಟರ್ಸ್‌ಬರ್ಗ್‌ನಲ್ಲಿದ್ದ ಆಧ್ಯಾತ್ಮಿಕ, ಸಾಹಿತ್ಯಕ ವಲಯಗಳು ಸ್ಸಾರರ ರಾಜಧಾನಿಯ ಚರಮಗೀತೆಯಂತಹ, ಸಂತೋಷದಿಂದ ಕೂಡಿದೆ. ಸಂಗೀತ, ನೃತ್ಯಕೂಟಗಳು ರಷ್ಯದ ಜನರ ಚಟುವಟಿಕೆಗಳ ಕೇಂದ್ರಗಳಾಗಿರುತ್ತವೆ. ಯುದ್ಧ ಮುಗಿದ ನಂತರ ಜನತೆಯಲ್ಲಿ ಆನಂದ, ಉತ್ಸಾಹಗಳಿಗೆ ಚಾಲನೆ ದೊರೆತಂತಾಗಿರುತ್ತದೆ. ಸೈನ್ಯದ ತುಕಡಿಗಳ ಸರ್ವನಾಶದಿಂದಷ್ಟೇ ಅಲ್ಲ, ಸ್ಸಾರರ ಆಡಳಿತದ ಉಚ್ಚಾಟನೆಯೂ ಇದಕ್ಕೆ ಕಾರಣವಾಗಿದ್ದಿತು. ಆದರೆ ಎಲ್ಲವೂ ಯಥಾಸ್ಥಿತಿಯಲ್ಲೇ ಇವೆ, ಯಾವ ಬದಲಾವಣೆಯೂ ಆಗಿಲ್ಲವೆಂಬ ಭಾವನೆಯೊಂದಿಗೆ ಮೊದಲನೆಯ ಭಾಗ ಮುಗಿಯುತ್ತದೆ.

ಕಾದಂಬರಿಯ ಎರಡನೆಯ ಭಾಗ ೧೯೧೮ರಲ್ಲಿ ಪ್ರಮುಖ ಘಟನೆಗಳು ರಷ್ಯದ ದಕ್ಷಿಣ ಭಾಗದಲ್ಲಿ ಜರುಗುತ್ತವೆ. ರಷ್ಯ ಯುದ್ಧದಿಂದ ತತ್ತರಿಸಿಹೋಗುತ್ತದೆ. ಜನಜೀವನ ಅಸ್ತವ್ಯಸ್ತವಾಗುತ್ತದೆ. ಕ್ರೆಮ್ಲಿನ್ನಿನ ಸ್ಸಾರರು ಹೋರಾಡುವುದು ಪ್ರಥಮ ಬಾರಿಗೆ ಕಾದಂಬರಿಯಲ್ಲಿ ಕಂಡುಬರುತ್ತದೆ. ಕಾಕಸಸ್, ಸಮಾರಾಗಳು ಕನ್‌ಸ್ಟಿಟ್ಯುಯೆಂಟ್ ಅಸೆಂಬ್ಲಿ, ಕ್ಯುಬಾನ್, ಕೊಸ್ಸಾಕ್ ಸರ್ಕಾರ ಇವೆಲ್ಲವೂ

## ಕಾವ್ಯಲೋಕ



# ಸೆಲ್ಫಿಯ ಭಂಟರುಗಳಿ



ಸೆಲ್ಫೀ ಹಿಡಿದು ಸಂಭ್ರಮಿಸುತ್ತಿರುವ ಅವರು
ನಮ್ಮ ನಾಡಿನವರಲ್ಲ ಬಿಡು ಭಂಟನೆ।
ಇಂದು ಜುಲೈ ಐದು ಎರಡು ಸಾವಿರದ ಹದಿನೈದು
ಬದುಕಿದ್ದರೆ ಕೌಸರ್‌ಬಾನು ಅವಳ ಮಗುವಿಗೆ
ಈಗ ಹದಿಮೂರರ ಹರೆಯ ಮೂಡುತ್ತಿತ್ತು.
ಬಿಸಿಲನಾಡು ಗುಲಬರ್ಗಾದಿಂದ ಗುಳೆ ಹೋದಳು
ಹೊಟ್ಟೆಪಾಡಿನ ಹೆಣ್ಣುಮಗಳು ಕೌಸರ್‌ಬಾನು.

ಇಪ್ಪತ್ತೆರಡರ ಹರೆಯದ ತುಂಬು ಗರ್ಭಿಣಿ
ಕೌಸರಳ ಹೊಟ್ಟೆಗೆ ತ್ರಿಶೂಲದಿಂದ ತಿವಿದು
ಮಗುವ ಬಗೆದು ತ್ರಿಶೂಲಕ್ಕೆ ಸಿಕ್ಕಿಸಿ ಕುಣಿದರು
ಅವರು ನಿನ್ನ ರಕ್ಷೆಯಲ್ಲಿರುವ ಭಂಟರು.
ತನ್ನ ಮಗುವಿನೊಂದಿಗೆ ಸೆಲ್ಫೀ ಕ್ಲಿಕ್ಕಿಸಲು
ಕೌಸರ್‌ಬಾನು ಕೈಬೀಸಿ ಕರೆಯುತ್ತಿದ್ದಾಳೆ
ಹೋಗಲು ನಿನಗೆ ಮುಖವಿದೆಯೇ ಭಂಟನೇ?

ಸಂದರ್ಶನದಲ್ಲಿ "ಮನ್ ಕಿ ಬಾತ್" ಹೇಳುತ್ತೀ
ನಿನ್ನ ದಿಲ್ ಕೆ ಅಂದರ್ ಒಮ್ಮೆ ಇಣುಕಿ ನೋಡು
ಹೊಟ್ಟೆ ಸೀಳಿಸಿಕೊಂಡು ಒದ್ದಾಡುತ್ತಿದ್ದಾಳೆ ಕೌಸರ್
ಮಾನ ಪ್ರಾಣ ಉಳಿಸಲು ಮೊರೆಯಿಡುತ್ತಿದ್ದಾಳೆ.
ರಕ್ತದ ಮಡುವಿನಲ್ಲಿ ಉರುಳಾಡುತ್ತಿದ್ದಾಳೆ.
ನಿನ್ನ ಕರ್ಣಗಳೇನು ಕಿವುಡಾದವೇ ನಾಯಕನೇ
ಅವಳೊಂದಿಗೆ ಒಂದು ಸೆಲ್ಫೀ ಕ್ಲಿಕ್ಕಿಸಬಾರದೇ?

ದುಡಿದು ತಿನ್ನುವ ಕೌಸರಳ ಪಾಡು ಇಂತಾಯ್ತು
ಶಾಸಕ ಎಹ್ಸಾನ್ ಜಾಫ್ರೀಯವರನ್ನೂ ಕೊಂದಿರಿ
ಅವರ ಮಗಳು ತೀಸ್ತಾ ಕಟಕಟೆಗೆ ಕರೆಯುತ್ತಿದ್ದಾಳೆ
ಗುಜರಾತಿನ ಸೇತುವೆಯಡಿ ಶವಗಳ ಬೆಟ್ಟವಿದೆಯಲ್ಲ
ಆ ಕೊಳೆತ ಮೂಳೆಗಳು ಕೈಬೀಸಿ ಕರೆಯುತ್ತಿವೆ.
ಅವರೊಂದಿಗೆ ಒಂದು ಬಾರಿ ಸೆಲ್ಫೀ ಕ್ಲಿಕ್ಕಿಸುತ್ತೀರಾ?

ಬೆಸ್ಟ್ ಬೇಕರಿಯ ಸುಟ್ಟ ಶವಗಳ ಹೊಗೆಯಲ್ಲಿ
ಕೆಟ್ಟ ಕಮಟು ವಾಸನೆಗೆ ಹೊಟ್ಟೆಯಲ್ಲಿ ತಳಮಳ
ಕೋಮು ಗಲಭೆಗಳಲಿ ನೊಂದವರ ಕಣ್ಣೀರು
ಇಂದಿಗೂ ನಿಂತಿಲ್ಲ ದುಃಖದಲೆಗಳ ಅಬ್ಬರ
ನಿಮ್ಮ ಸೆಲ್ಫೀಯಲ್ಲಿ ಅವರ ಕಣ್ಣೀರು
ಮೂಡಿ ಬರಲಾರದೇ ಹೇಳಿ ನಾಯಕರೇ?

**ಡಾ॥ ಕೆ. ಷರೀಫಾ**
ನಂ.೫ 'ಎ' ಒಂದನೇ ಮಹಡಿ, ಒಂದನೇ ಬ್ಲಾಕ್, ೨ನೇ ಮುಖ್ಯರಸ್ತೆ
ಆರ್.ಟಿ.ನಗರ, ಬೆಂಗಳೂರು – ೫೬೦ ೦೩೨

ಸೋವಿಯತ್ ರಾಷ್ಟ್ರವನ್ನು ತಮ್ಮ ಆಧಿಪತ್ಯಕ್ಕೊಳ ಪಡಿಸಿಕೊಳ್ಳಲು ತಮ್ಮದೇ ಆದ ರೀತಿಯಲ್ಲಿ ನಾಟಕಗಳನ್ನಾಡುತ್ತವೆ. ಮಹಾಕ್ರಾಂತಿ ಮತ್ತು ಅದನ್ನು ನಡೆಸಿದ ಸಾಹಸಿಗರು, ಪ್ರತಿಗಾಮಿ – ಪ್ರಗತಿಗಾಮಿ ಶಕ್ತಿಗಳ ನಡುವಣ ಹೋರಾಟ, ಉಕ್ರೇನಿನಲ್ಲಿ ಜರ್ಮನ್ನರ ತುಕಡಿಗಳು ಕಾರ್ಯೋನ್ಮುಖವಾಗುವುದು, ಇವು ರಷ್ಯದ ಇತಿಹಾಸದ ಪುಟಗಳಲ್ಲಿ ಮಹತ್ತರ ವೃತ್ತಾಂತಗಳಾಗಿ ಪರಿಣಮಿಸುವುದು, ಇವೆಲ್ಲವುಗಳ ಚಿತ್ರಣವನ್ನು ಕಾದಂಬರಿಯ ಎರಡನೆಯ ಭಾಗದಲ್ಲಿ ರೋಮಾಂಚಕಾರಿಯಾಗಿ ನಿರೂಪಿಸಿದ್ದಾನೆ ಟಾಲ್‌ಸ್ಟಾಯ್.

ಕಾದಂಬರಿಯ ಮೂರನೆಯ ಭಾಗ 'ಬ್ಲೀಕ್ ಮಾರ್ನಿಂಗ್' (ಬೇಸರದ ಬೆಳಗು)... ಆದರೆ 'ಬ್ಲೀಕ್' ಎಂಬುದು ಮಬ್ಬು ಕವಿದ ವಾತಾವರಣದಂತೆ, ನಿರಾಶಾದಾಯಕ ಸ್ಥಿತಿಯನ್ನು ಸೂಚಿಸುವುದಿಲ್ಲ. ಅದಕ್ಕೆ ಬದಲು ಉಗ್ರಪರೀಕ್ಷೆಯಲ್ಲಿ ಪರಿಶುದ್ಧರಾಗಿ ಬಂದ ಜನತೆಯ ಮುಂದಿದ್ದ ಕಠಿಣ ನಿರ್ಬಂಧಗಳೊಡನೆಯೂ, ಹೊಸ ಸೋವಿಯತ್ ರಾಷ್ಟ್ರದ ನಿರ್ಮಾಣ ಕಾರ್ಯದಲ್ಲಿ ತೊಡಗುವ ರಷ್ಯನ್ನರ ನವೋತ್ಸಾಹದ ಪರಿಯನ್ನು ಸೂಚಿಸುತ್ತದೆ. ರಷ್ಯನ್ನರಿಗಿದ್ದ ಧ್ಯೇಯೋದ್ದೇಶಗಳ ಸ್ಪಷ್ಟ ಚಿತ್ರವನ್ನು ಕಾದಂಬರಿಕಾರರು ನೀಡುತ್ತಾರೆ. ಅನುವಾದವೂ ಇದನ್ನು ಅರ್ಥವತ್ತಾಗಿ ಹೀಗೆ ನಿರೂಪಿಸಿದೆ :–

"ನಮ್ಮ ನಡುವೆ ಕುಳಿತಿರುವ ವ್ಲಾದಿಮಿರ್ ಇಲ್ಯಿಚ್ ಲೆನಿನ್ ಕ್ರಾಂತಿಯ ಬೆಳವಣಿಗೆಗಾಗಿ ಒಂದು ಸೂತ್ರವನ್ನು ರಚಿಸಿದ್ದಾರೆ. ಕಮ್ಯುನಿಸಮ್ ಎಂದರೆ ಸೋವಿಯತ್ ಆಡಳಿತ, ಜೊತೆಗೆ ವಿದ್ಯುತ್ಕರಣ... ರಷ್ಯದ ಅನಾದಿಕಾಲದ ನೀರವತೆಯಲ್ಲಿ; ಎಲ್ಲಿ ಬಿಲಿಯನ್ನುಗಟ್ಟಲೆ ಟನ್ನುಗಳ ಪೀಟ್ ಹುದುಗಿದೆಯೋ, ಎಲ್ಲಿ ಒಂದು ಜಲಪಾತ ಕೆಳಗೆ ಉರುಳುತ್ತಿದೆಯೋ ಅಥವಾ ಒಂದು ಪ್ರಬಲವಾದ ನದಿ ಹರಿಯುತ್ತಿದೆಯೋ, ಅಲ್ಲಿ ನಾವು ವಿದ್ಯುಚ್ಛಕ್ತಿ ಸ್ಥಾವರಗಳನ್ನು ನಿರ್ಮಿಸುತ್ತಿದ್ದೇವೆ... ಶೋಷಕರ ನೊಗವನ್ನು ರಷ್ಯ ದೇಶವು ಎಲ್ಲ ಕಾಲಕ್ಕೂ ಕಿತ್ತೊಗೆದಿದೆ. ನಿಶ್ಚಲವೂ, ಅವಿಚ್ಛಿನ್ನವೂ ಆದ ಒಂದು ವಿದ್ಯುತ್ ಶಿಬಿರಾಗ್ನಿಯ ಪ್ರಭೆಯಿಂದ ನಮ್ಮ ದೇಶವನ್ನು ಬೆಳಗುವುದು ನಮ್ಮ ಕರ್ತವ್ಯವಾಗಿದೆ. ದೇಹಶ್ರಮದ ಅಭಿಶಾಪವು ದೇಹಶ್ರಮದ ಅನುಗ್ರಹವಾಗಿ ಪರಿವರ್ತಿತವಾಗಬೇಕು."

*(ಭಾಗ – ೩ ಉಗ್ರಪರೀಕ್ಷೆ – ಆನಂದ – ಪುಟ ೫೦೪–೫೦೫)*

'ದಾಳವನ್ನೆಸೆದಾಗಿದೆ. ನಾವು ಮತ್ತು ನಮ್ಮ ಪ್ರಪಂಚದ ಉಳಿದೆಲ್ಲರ ಹಕ್ಕುಬಾಧ್ಯತೆಗಳಿಗಾಗಿ ಮತ್ತೆ, ಮಾನವನಿಂದ ಮಾನವನ ಶೋಷಣೆಯನ್ನು ಸರ್ವಕಾಲಕ್ಕೂ ಕೊನೆಗಾಣಿಸುವ ಸಲುವಾಗಿ ಅಡ್ಡಿಗಳ ಮುಂದೆ ನಿಂತು ಹೋರಾಡುತ್ತಿದ್ದೇವೆ' ಎಂಬ ರಷ್ಯನ್ನರ ವೀರಸಂಕಲ್ಪದ, ಆತ್ಮವಿಶ್ವಾಸದ ಮಾತುಗಳೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ.

ಈ ಕಾದಂಬರಿಯ ಮೂರು ಭಾಗಗಳಲ್ಲಿ ಬರುವ ಅನೇಕ ಪಾತ್ರಗಳು ಕಾದಂಬರಿಯ ವಸ್ತು ನಿರೂಪಣೆಯ ದೃಷ್ಟಿಯಿಂದ ಅನವಶ್ಯವೆನಿಸಿದರೂ, ರಷ್ಯ ದೇಶದ ಅಂದಿನ ಜನಜೀವನದ ನೈಜ ಚಿತ್ರಣವನ್ನು ಮೂಡಿಸುವಲ್ಲಿ ಅಗತ್ಯವೆನಿಸುತ್ತವೆ. ಕಾದಂಬರಿಯಲ್ಲಿ ಬರುವ ದಾಷಾ, ಕಾತ್ಯಾ, ಟೆಲಿಜಿನ್, ರಾಶ್ಚಿನ್, ಎಂಬ ನಾಲ್ಕು ಮುಖ್ಯ ಪಾತ್ರಗಳು ಜೀವನದ ಕಥೆಯ ಪ್ರತಿನಿಧಿಗಳಂತೆ ಕಂಡುಬಂದರೂ, ಬದುಕಿನಲ್ಲಿ ಹಾಸುಹೊಕ್ಕಾಗಿ ಬಂದ ಸುಖ–ದುಃಖ, ಸರಸ–ವಿರಸ, ಸಿಹಿ–ಕಹಿಗಳನ್ನು ದರ್ಶಿಸುತ್ತ, ಅವುಗಳ ನಡುವೆಯೂ ಮಾನವೀಯತೆಯನ್ನು ಮರೆಯದೆ, ಕರ್ತವ್ಯ ನಿಷ್ಠೆ, ದೇಶಭಕ್ತಿಯನ್ನೇ ಪರಮಗುರಿಯಾಗಿಟ್ಟುಕೊಂಡು ಬದುಕಲು ಹೆಣಗಾಡುವುದನ್ನು ಕಾದಂಬರಿಯ ಉದ್ದಕ್ಕೂ ಗಮನಿಸಬಹುದು. ದಾಷಾ ಮತ್ತು ಕಾತ್ಯಾ ಕಡು ಚೆಲುವೆಯರು, ಸೋದರಿಯರು. ಅವರು ತಮ್ಮ ವೇಷಭೂಷಣಗಳು, ವರ್ತನೆಗಳಿಂದ ಸಂಪ್ರದಾಯಕ್ಕೆ ಪಕ್ಕಾದ ಪ್ರಾಚೀನ ರಷ್ಯನ್ ಮಹಿಳೆಯರಂತೆ ಕಂಡುಬಂದರೂ, ಕ್ರಾಂತಿಯ ಪರಿಣಾಮವೆಂಬಂತೆ, ಕಾಲದ ಆದೇಶಕ್ಕೆ ಓಗೊಟ್ಟು, ಕಠಿಣ ಪರಿಸ್ಥಿತಿಗಳಲ್ಲಿ ಗಂಡಸರಿಗೆ, ಸರಿಸಮನಾಗಿ ದುಡಿಯುವ ಛಲ, ವಿಶಾಲದೃಷ್ಟಿಯನ್ನು, ಇತರರ ನೋವು, ದುಃಖಗಳಿಗೆ ಸ್ಪಂದಿಸುವ ಸೇವಾಮನೋಭಾವವನ್ನು ಬೆಳೆಸಿಕೊಂಡ ದಿಟ್ಟ ಮಹಿಳೆಯರೆನಿಸಿದ್ದಾರೆ.

ಪುರುಷ ಪಾತ್ರಗಳಾದ ರಾಶ್ಚಿನ್ ಮತ್ತು ಟೆಲಿಜಿನ್, ಈ ಇಬ್ಬರ ಸ್ವಭಾವಗಳಲ್ಲಿ ಆಲೋಚನೆಗಳಲ್ಲಿ ಭಿನ್ನರೀತಿ ಕಂಡುಬಂದರೂ, ರಾಷ್ಟ್ರ ಪ್ರೇಮ, ಪ್ರತಿಷ್ಠೆಗಳಿಗೆ ಕಿಂಚಿತ್ ಧಕ್ಕೆ ಬಂದರೂ ಸಹಿಸದ ಅಪ್ಪಟ ರಷ್ಯನ್ ಗುಣ. ಇಬ್ಬರಲ್ಲೂ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಮಾನ ಗುಣವೆಂಬಂತೆ ಪ್ರಕಟಗೊಳ್ಳುತ್ತದೆ. ದೇಶದಲ್ಲಿನ ಕಠಿಣ ಪರಿಸ್ಥಿತಿಗಳನ್ನು ಕಂಡು ಅನುಭವಿಸಿದ ವ್ಯಕ್ತಿ, ಸಹಜವಾಗಿ ದೇಶದ ಹಿತಕ್ಕೆ ಧಕ್ಕೆ ಬಂದಾಗ ಸಿಡಿದೇಳುವಂತೆ, ರಾಶ್ಚಿನ್, ಕ್ರಾಂತಿಗೆ ಮುನ್ನ ಬಿಳಿಯರ ಗುಂಪಿನಲ್ಲಿದ್ದು ಅಸಹನೀಯ ಯಾತನೆಯನ್ನು ಅನುಭವಿಸುತ್ತಾನೆ. ಅವನ ಜೀವನಾನುಭವವೇ ಅವನ ದಿಟ್ಟ ವ್ಯಕ್ತಿತ್ವವನ್ನು ರೂಪಿಸುತ್ತದೆ. ಉಗ್ರಪರೀಕ್ಷೆಯಲ್ಲಿ ಜಯಶೀಲನಾದ ಅವನ ಹೆಮ್ಮೆ, ಗೌರವಗಳಿಗೆ, ದೇಶದಲ್ಲಿ ಉನ್ನತ ಮೌಲ್ಯಗಳಿಗೆ ಮನ್ನಣೆ ಇಲ್ಲದಂತಹ ಸಂದರ್ಭದಲ್ಲೂ ಅವನಿಗೆ ಒಳ್ಳೆಯ ಸ್ಥಾನ ಸಿಕ್ಕು, ದೇಶದ ಭವಿಷ್ಯ ಕುರಿತು ಹೊಸ ಆಶೋತ್ತರಗಳನ್ನು ಮೂಡಿಸುತ್ತದೆ. "ವರುಷಗಳು ಉರುಳಿಹೋಗುತ್ತವೆ. ಯುದ್ಧಗಳು ನಿರ್ನಾಮವಾಗುತ್ತವೆ, ಕ್ರಾಂತಿಗಳು ಶಾಂತವಾಗುತ್ತವೆ, ಮತ್ತೆ ಒಂದು ಮಾತ್ರ ಉಳಿಯುತ್ತದೆ – ಅದು ದಯ ತುಂಬಿದ, ಮೃದುವಾದ, ಪ್ರೇಮಮಯವಾದ ಹೃದಯ" ಎಂಬ ಅವನ ಮಾತುಗಳು ದೇಶಪ್ರೇಮಿಯೊಬ್ಬನ ಮಾನವೀಯತೆ ಮತ್ತು ಹೃದಯವಂತಿಕೆಯನ್ನು ಪರಿಚಯಿಸುತ್ತವೆ.

ಟೆಲಿಜಿನ್ ನೇರ ನಡೆಯ, ಬಿಚ್ಚುಮನಸ್ಸಿನ, ಸುಂದರ ಯುವಕ. ಪರಿಸ್ಥಿತಿಗೆ ತಕ್ಕಂತೆ ಸ್ಪಂದಿಸುವ ವಾಸ್ತವವಾದಿ. ದೇಶಪ್ರೇಮಿಯಾದ ಅವನು ರೆಡ್ ಆರ್ಮಿಯಲ್ಲಿ ಎದುರಿಸುವ ಕಷ್ಟ, ಅವನ ಧೈರ್ಯ, ಸಾಹಸ ಪ್ರದರ್ಶನ, ಜೊತೆ ಜೊತೆಗೆ ತೋರಿಸುವ ಪ್ರೀತಿ, ಮಾನವೀಯತೆ ವಿಶಿಷ್ಟವೆನಿಸುತ್ತವೆ. ಕಾದಂಬರಿಯ ಉದ್ದಕ್ಕೂ ಚಾರಿತ್ರಿಕ ಸಂಗತಿಗಳು, ಮಾನವೀಯತೆ, ಪ್ರೀತಿ, ಅನುಕಂಪಗಳ ಮೌಲ್ಯಗಳ ನೆಲೆ ಬೆಲೆಗಳು ಸಮರ್ಪಕವಾಗಿ ಮೇಳೈಸಿರುವುದನ್ನು ಗಮನಿಸಬಹುದು. ಟಾಲ್‌ಸ್ಟಾಯ್‌ನ ಭಾಷೆಯೂ ಇದಕ್ಕೆ ತಕ್ಕಂತೆ ಒಗ್ಗುತ್ತದೆ, ಹಿಡಿತಕ್ಕೆ ಬಗ್ಗುತ್ತದೆ, ವರ್ಣನೆಗಳಿಗೆ ತಕ್ಕಂತೆ ಹಿಗ್ಗುತ್ತದೆ. ಈ ಬೃಹತ್ ಕಾದಂಬರಿಯ ಅನುವಾದ *ಉಗ್ರಪರೀಕ್ಷೆ*, ಅನುವಾದಕರ ಸತ್ವಪರೀಕ್ಷೆಯಂತೆಯೇ ಭಾಸವಾಗುತ್ತದೆ. ರಷ್ಯ ದೇಶದ ಇತಿಹಾಸ, ಅಂದಿನ ಜನಜೀವನ, ಕ್ರಾಂತಿಯ ನಂತರದ ಜನತೆಯ ಆಶೋತ್ತರಗಳು, ಅವರ ಸಮಾಜವಾದೀ ದೃಷ್ಟಿ, ದೇಶಪ್ರೇಮ ಎಲ್ಲವನ್ನೂ ಯಥಾವತ್ತಾಗಿ ಚಿತ್ರಿಸುವಲ್ಲಿ ಅನುವಾದಕರು ಯಶಸ್ವಿಯಾಗಿದ್ದಾರಾದರೂ ಕಾದಂಬರಿಯಲ್ಲಿ ಕೆಲವೆಡೆ ಅಸಹಜ ಅನುವಾದದ ಅಂಶಗಳು ಇಣುಕಿರುವುದನ್ನೂ ಗಮನಿಸಬಹುದು. ಬಹುಶಃ ಕನ್ನಡ ಜಾಯಮಾನಕ್ಕೆ ಒಗ್ಗದ ಮಾತುಗಾರಿಕೆಯೂ ಇದಕ್ಕೆ ಕಾರಣವಾಗಬಹುದು. ಒಟ್ಟಾರೆಯಾಗಿ ಆನಂದರ ಅನುವಾದವು ಅತ್ಯಂತ ಸಹಜವಾಗಿ ಸ್ವಂತ ರಚನೆಯೆಂಬ ಭಾವನೆ ಬರುವಂತೆ ಮೂಡಿಬಂದಿರುವುದನ್ನು ಪ್ರಧಾನವಾಗಿ ಗಮನಿಸಬಹುದು.

ಒಟ್ಟಾರೆಯಾಗಿ, ಅನುವಾದದ ಸಫಲತೆಯಿಂದಾಗಿ, ಆನಂದರ ಶೈಲಿ ಮತ್ತು ಅವರಿಗೆ ಇಂಗ್ಲಿಷ್, ಕನ್ನಡ ಎರಡೂ ಭಾಷೆಗಳ ಮೇಲಿನ ಸಮರ್ಥ ಹಿಡಿತವಿರುವುದರಿಂದಾಗಿ *ಉಗ್ರಪರೀಕ್ಷೆ* ಒಂದು ಉತ್ತಮ ಚಾರಿತ್ರಿಕ ಕೃತಿ ಎನಿಸಿದೆ. ರಷ್ಯದ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಮಹತ್ವಪೂರ್ಣ ಕಾದಂಬರಿಯೂ ಹೌದು. ಜಗತ್ ಪ್ರಸಿದ್ಧ ಸಾಹಿತಿ ಟಾಲ್‌ಸ್ಟಾಯ್‌ನ ಉತ್ತಮ ಕಾದಂಬರಿಯೊಂದನ್ನು ಕನ್ನಡಕ್ಕೆ ಪರಿಚಯಿಸಿ. ಕಥಾಸಾಹಿತ್ಯಕ್ಕೆ ಮೌಲ್ಯಯುತ ಕೊಡುಗೆ ನೀಡಿದ ಆನಂದರು ಅಭಿನಂದನಾರ್ಹರು.

**ಡಾ॥ ಎಂ. ಎಸ್. ವಿಜಯ (ವಿಜಯ ಹರನ್)**
ನಂ. ೩೦೫೯, ೪ನೇ ಅಡ್ಡರಸ್ತೆ, ಗೋಕುಲಂ ಪಾರ್ಕ್ ರಸ್ತೆ
ವಿ. ವಿ. ಮೊಹಲ್ಲ, ಮೈಸೂರು – ೫೭೦ ೦೦೨

## ಸಂಬಂಧದ ಸೇತುವೆ

ಸಮಾಜ ಎಂಬ ಸಮುದ್ರದ ಮೇಲೆ
ಪ್ರೀತಿ ವಿಶ್ವಾಸ ನಂಬಿಕೆ ಎಂಬ ಸಂಬಂಧದ
ಸೇತುವೆ ಕಟ್ಟಿ ಆನಂದಪಡುವಾಗ
ಈ ಸಮಾಜ ಎಂಬ ಸಮುದ್ರದ ಅಲೆಗಳಿಂದ
ಬಂದ ಒಂದೇ ಹೊಡೆತಕ್ಕೆ ಕಟ್ಟಿದ
ಸೇತುವೆ ಒಡೆಯುವ ನಿರ್ಧಾರಕ್ಕೆ
ನೀ ಬಂದೆ ಹೇ ಗೆಳತಿ ನೀ
ಆ ಸೇತುವೆ ಒಡೆಯುವ ಬದಲು
ನನ್ನ ಪ್ರಾಣವನ್ನೇ ಬಲಿ ತೆಗೆದುಕೋ

**ನಿವೇದಿತಾ ಸು. ಸೋಲಾಪುರ**
ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ,
ಕ.ರಾ.ಮ.ವಿ.ವಿ., ಜ್ಞಾನಶಕ್ತಿ ಆವರಣ, ವಿಜಯಪುರ







# ಭಯೋತ್ಪಾದನೆಯ ಅಟ್ಟಹಾಸ

**ಹೊ**ಸ ವರ್ಷ ಪ್ರಾರಂಭವಾಗುತ್ತಿದ್ದ ಹಾಗೆಯೇ ಭಯೋತ್ಪಾದನೆ ಕೃತ್ಯಗಳೂ ಶುರುವಾಗಿವೆ. ಭಾರತದ ಪಠಾಣ್‌ಕೋಟ್‌ನಲ್ಲಿ, ಇಂಡೋನೇಶಿಯದ ರಾಜಧಾನಿಯಲ್ಲಿ ಭಯೋತ್ಪಾದಕರ ದಾಳಿ ನಡೆದಿದೆ. ಭಾರತದಲ್ಲಿ ಪಾಕಿಸ್ತಾನ ಪ್ರೇರಿತ ಉಗ್ರರು ದಾಳಿ ನಡೆಸಿದ್ದರೆ, ಜಕಾರ್ತಾದಲ್ಲಿ ಇಸ್ಲಾಮಿಕ್ ಸ್ಟೇಟ್ ಉಗ್ರರು ದಾಳಿ ನಡೆಸಿದ್ದಾರೆ. ಪಾಕಿಸ್ತಾನದಲ್ಲಿ ಪೇಷಾವರ್ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳ ಮೇಲೆ ತಾಲಿಬಾನ್ ಉಗ್ರರು ನಡೆಸಿದ ದಾಳಿಯಲ್ಲಿ ಇಪ್ಪತ್ತಕ್ಕೂ ಹೆಚ್ಚು ವಿದ್ಯಾರ್ಥಿಗಳ ಹತ್ಯೆಯಾಯಿತು. ಈ ಎಲ್ಲ ಪ್ರಕರಣಗಳಲ್ಲಿಯೂ ಸಾವು-ನೋವುಗಳು ಸಂಭವಿಸಿವೆ. ಇನ್ನೊಂದು ಬಗೆಯ ದೌರ್ಜನ್ಯವನ್ನೂ ಕಂಡಿದ್ದೇವೆ. ಅದು ಪ್ರಭುತ್ವವೇ ನಡೆಸಿರುವಂಥದ್ದು. ಸೌದಿ ಅರೇಬಿಯದಲ್ಲಿ ಷಿಯಾ ಮುಖಂಡರನ್ನೂ ಒಳಗೊಂಡ ಹಾಗೆ ಹಲವರನ್ನು ಗಲ್ಲಿಗೇರಿಸಲಾಯಿತು. ಇದೊಂದು ಇರಾನ್‌ಅನ್ನು ಕೆಣಕುವ ಉದ್ದೇಶದಿಂದ ಕೂಡಿದ ಕೃತ್ಯ. ಷಿಯಾ-ಸುನ್ನಿ ಹಣಾಹಣಿ ಹಿಂದಿನಿಂದ ಬಂದದ್ದು. ಸೌದಿ ಅರೇಬಿಯ ಸರಕಾರದ ಈ ಕೃತ್ಯ ಪ್ರಭುತ್ವ ನಡೆಸುವ ಭಯೋತ್ಪಾದನೆ. ಅಲ್ಲದೆ ಇಲ್ಲಿನ ರಾಜಪ್ರಭುತ್ವದ ಶ್ರೀಮಂತರು ಇಸ್ಲಾಮಿಕ್ ಸ್ಟೇಟ್ ಉಗ್ರರ ಪೋಷಕರಾಗಿದ್ದು, ಸಾಕಷ್ಟು ಹಣ ಒದಗಿಸುತ್ತಿದ್ದಾರೆ. ಅಂತೂ ಮನುಕುಲ ಮುಂದಿನ ದಿನಗಳಲ್ಲಿ ಭಯೋತ್ಪಾದನೆಯ ನೆರಳಿನಲ್ಲೇ ಬದುಕಬೇಕಾಗಿ ಬಂದಿದೆ.

ಭಾರತದ ಮಟ್ಟಿಗೆ ಪಾಕ್ ಪ್ರೇರಿತ ಭಯೋತ್ಪಾದನೆ ಹೊಸದೇನಲ್ಲ. ಸ್ವಾತಂತ್ರ್ಯಾನಂತರ ದಶಕಗಳಿಂದ ಅನುಭವಿಸುತ್ತ ಬಂದಿದ್ದೇವೆ. ಪಾಕಿಸ್ತಾನದ ಗೂಢಚಾರಿ ಸಂಸ್ಥೆ ಐಎಸ್ಐ ಪೋಷಿತ ಲಷ್ಕರಿ ತೋಯಿಬ, ಜೈಷೆ ಮಹಮದ್ ಮೊದಲಾದವು ಆಗಾಗ ಭಾರತದ ನಾನಾ ಕಡೆ ಭಯೋತ್ಪಾದಕ ಕೃತ್ಯಗಳನ್ನು ನಡೆಸುತ್ತಲೇ ಇವೆ. ಈ ಸಲ ಪಾಕ್ ಪ್ರೇರಿತ ಭಯೋತ್ಪಾದಕರು ಪಠಾಣ್‌ಕೋಟ್ ವಾಯುನೆಲೆ ಮೇಲೆ ನಡೆಸಿದ ದಾಳಿ ಭಾರತ-ಪಾಕ್ ನಡುವಿನ ಮಾತುಕತೆಗಳನ್ನು ಆಹುತಿಗೆ ತೆಗೆದುಕೊಂಡಿತು, ಏಳು ಮಂದಿ ಭದ್ರತಾ ಸಿಬ್ಬಂದಿಯ ಹತ್ಯೆಯ ಜೊತೆಗೆ. ಭಾರತ-ಪಾಕ್ ಮಾತುಕತೆಯು ಪ್ರಾರಂಭವಾಗುವ ಮೊದಲು ಇಂಥ ಕೃತ್ಯ ಜರುಗುವುದು ಸಾಮಾನ್ಯವಾಗಿಬಿಟ್ಟಿದೆ. ಕಳೆದ ಐದಾರು ವರ್ಷಗಳಿಂದ ಪಾಕಿಸ್ತಾನ ಪ್ರೇರಿತ ಭಯೋತ್ಪಾದಕರಿಂದ ಭಾರತದ ಹಲವು ಕಡೆ ದಾಳಿ ನಡೆದಿರುವುದು ನಮ್ಮ ದೇಶದ ಭದ್ರತಾ ವ್ಯವಸ್ಥೆಯ ಲೋಪವನ್ನು ಎತ್ತಿತೋರಿಸುತ್ತದೆ. ಅದು ಮುಂಬೈನ ಸರಣಿ ಬಾಂಬು ಸ್ಫೋಟವಾಗಿರಬಹುದು, ಬೆಂಗಳೂರು ಅಥವಾ ಬೇರೊಂದು ಕಡೆ ನಡೆದ ಸ್ಫೋಟವಾಗಿರಬಹುದು, ಇಲ್ಲವೇ ಪಾರ್ಲಿಮೆಂಟಿನ ಮೇಲೆ ನಡೆದ ದಾಳಿಯಾಗಿರಬಹುದು. ಇವಕ್ಕೆಲ್ಲ ಭದ್ರತಾ ವ್ಯವಸ್ಥೆಯ ಲೋಪವೇ ಕಾರಣ. ಪಾಕಿಸ್ತಾನದ ಐಎಸ್ಐ ಇಂಥ ಕೃತ್ಯಗಳನ್ನು ನಡೆಸುತ್ತದೆ ಎನ್ನುವುದು ಗೊತ್ತಿದ್ದರೂ ಕೂಡ, ಅಂಥ ದಾಳಿಗಳ ಸುಳಿವು ಲಭಿಸಿದ್ದರೂ ಕೂಡ, ಭದ್ರತಾ ವ್ಯವಸ್ಥೆಯಲ್ಲಿ ತೊಡಗಿರುವ ವಿವಿಧ ಸಂಸ್ಥೆಗಳ ನಡುವೆ, ಮುಖ್ಯವಾಗಿ ಗೂಢಚರ್ಯೆ, ಪೊಲೀಸು, ಸೇನೆ ಇವುಗಳ ಮಧ್ಯೆ ಇರುವ ಹೊಂದಾಣಿಕೆಯ ಕೊರತೆ ಸಂಭವಿಸುವ ಅನಾಹುತಗಳಿಗೆ ಮೂಲವಾಗುತ್ತದೆ. ವಿವಿಧ ಭದ್ರತಾ ಸಿಬ್ಬಂದಿಯ ನಡುವೆ ಪರಸ್ಪರ ಸಹಯೋಗ ಇಲ್ಲದಿರುವುದು ದೊಡ್ಡ ನ್ಯೂನತೆ.

ಪಠಾಣ್‌ಕೋಟ್‌ನಂಥ ಉನ್ನತ ಭದ್ರತಾ ಕೋಟೆಯೊಳಗೆ ಭಯೋತ್ಪಾದಕರು ನುಸುಳಿದ್ದಕ್ಕೆ, ಅನಾಹುತ ನಡೆಸಿದ್ದಕ್ಕೆ ಈ ಹೊಂದಾಣಿಕೆಯ ಲೋಪವೇ ಕಾರಣ. ದಾಳಿಗೆ ಒಂದು ದಿನ ಮುಂಚೆಯೇ ಸೇನೆಗೆ ಸುಳಿವು ಸಿಕ್ಕಿತ್ತು ದೂರವಾಣಿ ಸಂಪರ್ಕ ಭೇದಿಸಿದ್ದಾಗಿ. ಅದನ್ನು ಎದುರಿಸಲು ಸಿದ್ಧತೆ ಮಾಡಿಕೊಂಡಿದ್ದರೂ ಫಲಕಾರಿಯಾಗಲಿಲ್ಲ. ಸೇನೆ ಕಾರ್ಯಾಚರಣೆಗೆ ಇಳಿದದ್ದೂ ಕೂಡ ನಿಧಾನವಾಗಿ. ಭಯೋತ್ಪಾದಕರು ಅವಿತುಕೊಂಡಿದ್ದ ತಾಣದಿಂದ ಹೊರಗೆಳೆದು ಕೊಲ್ಲುವುದಕ್ಕೆ ಹಲವು ದಿನಗಳೇ ಬೇಕಾಯಿತು. ಭಯೋತ್ಪಾದಕರು ಇದ್ದದ್ದು ಆರು ಮಂದಿ. ಆತುರಾತುರವಾಗಿ ಗೃಹಸಚಿವ ರಾಜನಾಥ ಸಿಂಗ್ ಕಾರ್ಯಾಚರಣೆ ಮುಗಿಯುವುದಕ್ಕೆ ಮುಂಚೆಯೇ ಯಶಸ್ವಿಯಾಯಿತೆಂದು ಮಾಧ್ಯಮಗಳಿಗೆ ಹೇಳಿಕೆ ನೀಡಿಬಿಟ್ಟರು. ಈ ಹೇಳಿಕೆ ನೀಡಿದ ಮೂರು ದಿನಗಳ ನಂತರ ಕಾರ್ಯಾಚರಣೆ ಮುಗಿಯಿತು. ಅದಕ್ಕೆ ಪ್ರಧಾನಿ ಮೋದಿ ಗೃಹಸಚಿವರನ್ನು ಉನ್ನತಮಟ್ಟದ ಅಧಿಕಾರಿಗಳ ಸಭೆಗೆ ಆಹ್ವಾನಿಸಲಿಲ್ಲ. ಭಯೋತ್ಪಾದಕರನ್ನು ರವಾನಿಸುವ, ತರಬೇತಿ ನೀಡುವ ಸಂಸ್ಥೆಗಳು ಯಾವ ಸಾಕ್ಷ್ಯಾಧಾರಗಳೂ ಸಿಕ್ಕದಂತೆ ಎಚ್ಚರ ವಹಿಸುತ್ತವೆ. ಪಾಕಿಸ್ತಾನ ಯಾವತ್ತೂ ಭಾರತ ನೀಡುವ ಸಾಕ್ಷ್ಯಗಳನ್ನು ಅಂಗೀಕರಿಸುವುದಿಲ್ಲ. ಹೊಣೆಯಿಂದ ಜಾರಿಕೊಳ್ಳುತ್ತದೆ. ಪಠಾಣ್‌ಕೋಟ್ ದಾಳಿಯ ವಿಷಯದಲ್ಲೂ ಪಾಕ್ ಅಧಿಕಾರಿಗಳಿಂದ ಅದೇ ವಾದ.

ಮಾತುಕತೆ ಮುಂದುವರಿಯಬೇಕೆ, ಬೇಡವೆ ಎಂಬ ಜಿಜ್ಞಾಸೆ ಒಂದೆರಡು ದಿನ ನಡೆದು ಕಡೇ ಘಳಿಗೆಯಲ್ಲಿ ಅಧಿಕಾರಿಗಳ ಭೇಟಿಯನ್ನು ಮುಂದೂಡಲಾಗಿದೆ ಎಂದು ಪ್ರಕಟಿಸಲಾಯಿತು, ಅಡ್ಡಗೋಡೆಯ ಮೇಲೆ ದೀಪ ಇಟ್ಟ ಹಾಗೆ. ಈ ವಿಷಯದಲ್ಲೂ ಕೂಡ ಸರಕಾರದಲ್ಲಿ ಒಮ್ಮತವಿದ್ದ ಹಾಗೆ ತೋರಲಿಲ್ಲ. ರಕ್ಷಣಾ ಸಚಿವರು ಮುಯ್ಯಿಗೆ ಮುಯ್ಯಿ ತೀರಿಸುವ ಮಾತನಾಡಿದರೆ, ಗೃಹಸಚಿವರು ಆತುರದ ನಿರ್ಧಾರ ಸರಿಯಲ್ಲ, ಇಡೀ ಪ್ರಕರಣದಲ್ಲಿ ವಿದೇಶೀ ಸಚಿವರು ಸೊಲ್ಲೆತ್ತದೆ ಇದ್ದದ್ದು ಗಮನಾರ್ಹ. ಎಲ್ಲವೂ ಪ್ರಧಾನ ಮಂತ್ರಿ ಹಾಗೂ ಅವರ ಕಚೇರಿಯವರದ್ದೇ ಕಾರುಬಾರು. ಅಂತೂ ಸದ್ಯಕ್ಕೆ ಪಾಕಿಸ್ತಾನದ ಜೊತೆ ಯಾವ ಮಾತುಕತೆಯೂ ಇಲ್ಲ. ಆದರೆ ಪಠಾಣ್‌ಕೋಟ್ ಘಟನೆಯಿಂದ ಸರಕಾರ ಪಾಠ ಕಲಿಯುತ್ತದೆಯೇ ? ಪಾಕಿಸ್ತಾನ ಭಯೋತ್ಪಾದಕ ಸಂಸ್ಥೆಯ ಮೇಲೆ ಕ್ರಮ ಕೈಗೊಂಡಿದೆ ಎಂಬ ವರದಿ ಕೂಡ ವಿವಾದಾಸ್ಪದವೇ. ಈ ಗೊಂದಲದ ಮಧ್ಯೆಯೇ ಆಫ್ಘಾನಿಸ್ತಾನದಲ್ಲಿ ಭಾರತದ ರಾಯಭಾರಿ ಕಚೇರಿಯ ಮೇಲೆ ಉಗ್ರರು ದಾಳಿ ನಡೆಸಿದ್ದು ಗಾಯದ ಮೇಲೆ ಬರೆ ಎಳೆದಂತಾಗಿದೆ. ಈ ಘಟನೆಗಳನ್ನು, ಇದಕ್ಕೆ ಹಿಂದೆ ನಡೆದ ಘಟನೆಗಳನ್ನು ಪರಿಶೀಲಿಸಿದರೆ ಪಾಕಿಸ್ತಾನದ ವ್ಯವಹಾರದಲ್ಲಿ ಆತುರ ಸಲ್ಲ ಎನ್ನುವುದು ವೇದ್ಯವಾಗುತ್ತದೆ. ಎಲ್ಲ ವಿವಾದಗಳನ್ನು ಇತ್ಯರ್ಥಗೊಳಿಸಲು ಮಾತುಕತೆಯೊಂದೇ ಮಾರ್ಗ ಎರಡೂ ದೇಶಗಳಿಗೆ. ಅದಕ್ಕೆ ಸೂಕ್ತವಾದ ವಾತಾವರಣವನ್ನು ನಿರ್ಮಿಸಲು ಪಾಕಿಸ್ತಾನದ ಹೊಣೆಗಾರಿಕೆ ಹೆಚ್ಚು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

**ಜಗದೀಶ ಎಂ.**

ಗುಜರಾತ್‌ನ ಪಟೇಲ್ ಸಮುದಾಯದ ಮೀಸಲಾತಿ ಚಳುವಳಿಯು ಈಗಿರುವ ಮೀಸಲಾತಿ ಕುರಿತಾದ ಹಲವು ಪ್ರಶ್ನೆಗಳು ಮತ್ತು ಆಯಾಮಗಳನ್ನು ಹೊರ ಜಗತ್ತಿಗೆ ತೋರ್ಪಡಿಸಿದೆ. ಅಭ್ಯುದಯ ರಾಜಕೀಯ ನೀತಿಯಿಂದ, ಪ್ರಾರಂಭಿಸಿ ಇಂದಿನ ನವ–ಉದಾರವಾದಿ ರಾಜಕೀಯ ಚೌಕಟ್ಟಿನಲ್ಲಿ ಮೀಸಲಾತಿಯ ಪ್ರಸ್ತುತ ಸ್ಥಿತಿಗತಿಯ ಬಗ್ಗೆ ಗಂಭೀರ ಚರ್ಚೆಯಿಂದ ರಾಜಕೀಯ ಪಕ್ಷಗಳೂ ಸೇರಿದಂತೆ, ಮಾಧ್ಯಮ, ನಾಗರಿಕ ಸಮಾಜ ಉದ್ದೇಶಪೂರ್ವಕ ಅಂತರ ಕಾಯ್ದುಕೊಂಡು ಬಂದಿವೆ. ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುವ ಭಾರತದಲ್ಲಿ ನಾವು ಸಮಾನ ಅವಕಾಶದ ಸಾಮಾನ್ಯ ತತ್ವದಡಿ ಮುನ್ನಡೆಯುವ ದಾರ್ಶನಿಕತೆ ಮೂಡಲೇ ಇಲ್ಲ.

ಪ್ರಪಂಚದ ಬಹುತೇಕ ದೇಶಗಳು ವಿವಿಧ ಕಾಲಘಟ್ಟಗಳಲ್ಲಿ ಸಾಂಸ್ಕೃತಿಕ ವೈರುಧ್ಯ, ಸಾಮಾಜಿಕ ಅಸಮಾನತೆ ಮತ್ತು ಶೋಷಣೆಗಳಂತಹ ಅಮಾನವೀಯ ಸಮಸ್ಯೆಗಳನ್ನು ಕಂಡಿರುವುದನ್ನು ಇತಿಹಾಸದಲ್ಲಿ ನೋಡಬಹುದಾಗಿದೆ. ಅಮೆರಿಕಾದಲ್ಲಿನ ಆಫ್ರಿಕನ್ನರು, ಭಾರತೀಯ ಅಮೆರಿಕನ್ನರು, ಯುರೋಪಿನ ಅಲೆಮಾರಿ ಜಿಪ್ಸಿಗಳು, ಆಸ್ಟ್ರೇಲಿಯಾದ ಮೂಲನಿವಾಸಿಗಳು ಮತ್ತು ಚೀನಾದಲ್ಲಿನ ಅಲ್ಪಸಂಖ್ಯಾತ ಹಾನ್ ಸಮುದಾಯಗಳು ಆಯಾ ದೇಶದಲ್ಲಿ ನಿರಂತರವಾಗಿ ಶೋಷಣೆಗೊಳಗಾದ ದುರ್ಬಲ ವರ್ಗಗಳು. ಆದರೆ ಭಾರತದಲ್ಲಿ ವ್ಯಕ್ತಿ ಮತ್ತು ಸಮುದಾಯಗಳು ಅನುಭವಿಸುವ ಅಸಮಾನತೆಯ ಸ್ವರೂಪ ಇತರ ದೇಶಗಳಿಗಿಂತ ಭಿನ್ನವಾಗಿದೆ. ಭಾರತದಲ್ಲಿ ಹಲವಾರು ಜಾತಿಗಳು ತಮ್ಮ ಹುಟ್ಟಿನ ಕಾರಣ ಮತ್ತು ಸಾಂಪ್ರದಾಯಿಕ ಸಮಾಜದಲ್ಲಿ ಶತಶತಮಾನಗಳಿಂದಲೂ ಬೇರೂರಿರುವ ಕೃತಕ ಸಾಮಾಜಿಕ ಸ್ತರವಿನ್ಯಾಸದಿಂದಾಗಿ ಮನುಕುಲದ ಮೂಲಭೂತ ಅವಶ್ಯಕತೆಗಳಾದ ಶಿಕ್ಷಣ ಮತ್ತು ಸಾಮಾಜಿಕ ಅವಕಾಶಗಳಿಂದ ವಂಚಿತಗೊಂಡಿವೆ.

ಕೇವಲ ಕೆಲವು ಜಾತಿಗಳ ಕೈಯಲ್ಲಿ ಮಾತ್ರ ಕೇಂದ್ರೀಕರಿಸಲ್ಪಟ್ಟ ಶಿಕ್ಷಣವನ್ನು ಬಹುಸಂಖ್ಯಾತ ಕೆಳಜಾತಿಯವರಿಗೆ ಉದ್ದೇಶಪೂರ್ವಕವಾಗಿ ನಿರ್ಬಂಧಿಸಲಾಗಿತ್ತು. ಪರಿಣಾಮವಾಗಿ, ಶಿಕ್ಷಣವು ಕೆಲ ಮನೆತನಗಳ ವಂಶಪಾರಂಪರ್ಯ ಆಸ್ತಿಯಾಯಿತು. ಜಾತಿಯನ್ನು ಉದ್ಯೋಗದೊಂದಿಗೆ ಭೇದಿಸಲಸಾಧ್ಯವಾದ ರೀತಿಯಲ್ಲಿ ಸಮೀಕರಿಸಲಾಯಿತು. ಉದ್ಯೋಗವನ್ನು ಅಸ್ಪೃಶ್ಯತೆ ಮತ್ತು ಅಪವಿತ್ರತೆಯ ಚೌಕಟ್ಟಿನೊಳಗಿರಿಸಿ ನೋಡಲಾಯಿತು. ಮಾನವ ಪ್ರಜನನ ಕ್ರಿಯೆಯ ಸಹಜ ಭಾಗವಾಗಿದ್ದ ವಿವಾಹವನ್ನು ಒಂದು ಸೀಮಿತ ಜಾತಿಯೊಳಗೆ ನೆರವೇರಿಸಿ ಅಂತರ್ಜಾತಿ ವಿವಾಹವನ್ನು ನಿರ್ಬಂಧಿಸಲಾಯಿತು. ಇದಕ್ಕೆ ಪೂರಕವಾಗಿ ಸಮಾಜದಲ್ಲಿ ನಕರಾತ್ಮಕ ಧೋರಣೆಯನ್ನು ಸೃಷ್ಟಿಸಿ, ಸಾಮಾಜಿಕ ಪ್ರತ್ಯೇಕತೆಯನ್ನುಂಟುಮಾಡಲಾಯಿತು. ಈ ಎಲ್ಲ ಸಮಸ್ಯೆಗಳಿಗೆ ಬಹು ಮುಖ್ಯ ಕಾರಣ ಹುಟ್ಟಿನಿಂದ ನಿರ್ಧರಿತವಾಗುವ ವ್ಯಕ್ತಿಯೊಬ್ಬನ ಜಾತಿ.

ಭಾರತದ ಸಂದರ್ಭದಲ್ಲಿ ಜಾತಿ ಮತ್ತು ಬಡತನಗಳ ನಡುವೆ ನಿಕಟ ಸಂಬಂಧವಿದೆ. ಇಲ್ಲಿ ಹುಟ್ಟಿದ ಮಗುವಿನ ಸಾಮಾಜಿಕ ಸ್ಥಾನಮಾನವನ್ನು ಅದು ಹುಟ್ಟಿದ ಜಾತಿ ಮತ್ತು ಕುಟುಂಬದ ಆರ್ಥಿಕ ಹಿನ್ನೆಲೆಯಲ್ಲಿ ನಿರ್ಧರಿಸಲಾಗುತ್ತದೆ. ಇವುಗಳ ಮುಂದೆ ಮಗುವಿನ ಬೌದ್ಧಿಕ ಮತ್ತು ಭೌತಿಕ ಮಟ್ಟ, ಶ್ರಮ ಹಾಗೂ ಸಾಮರ್ಥ್ಯ ಗೌಣವಾಗುತ್ತವೆ. ಈ ಅಸಮಾನತೆಯು ದೇಶದ ಬಹುಸಂಖ್ಯಾತರ ಪ್ರತಿಭೆಯನ್ನು ಚಿವುಟಿಹಾಕಿದೆ. ಅಷ್ಟು ಮಾತ್ರವಲ್ಲ, ಸಾಪೇಕ್ಷ ಬಡತನ ಮತ್ತು ಸಾಮಾಜಿಕ ಹಿಂದುಳಿಯುವಿಕೆಯನ್ನು ಸೃಷ್ಟಿಸಿದೆ. ಇವೆಲ್ಲ ಕಾರಣಗಳಿಂದಾಗಿ ಅವಕಾಶಗಳ ಹಂಚಿಕೆ ಮತ್ತು ಬಳಕೆಗೆ ಜಾತಿಯನ್ನು ಮಾನದಂಡವಾಗಿರಿಸಲಾಗಿದೆ.

ಜಾತಿಯ ಮಾನದಂಡದೊಂದಿಗೆ ನೀಡಲ್ಪಟ್ಟ ಮೀಸಲಾತಿಯು ಜಾತಿಯೊಳಗಿನ ಸುಶಿಕ್ಷಿತ ಮತ್ತು ಮೇಲ್ವರ್ಗದ ಜನರಿಗೆ ಮಾತ್ರ ಸೀಮಿತವಾಗಿದೆ. ಕೆಲವು ಸುಶಿಕ್ಷಿತ ಕುಟುಂಬಗಳು ಹಲವು ತಲೆಮಾರಿನಿಂದ ಮೀಸಲಾತಿಯನ್ನು ನಿರಂತರವಾಗಿ ಅನುಭವಿಸುತ್ತಿರುವುದು ಇದಕ್ಕೆ ನಿದರ್ಶನ. ಇಂದು ಕೇಂದ್ರ ನಾಗರಿಕ ಸೇವೆಗಳಿಗೆ, ಪ್ರತಿಷ್ಠಿತ ಐಐಟಿ, ಐಐಎಂ, ರಾಷ್ಟ್ರೀಯ ಕಾನೂನು ಶಾಲೆಗಳಿಗೆ ಆಯ್ಕೆಯಾಗುವ ಅಭ್ಯರ್ಥಿಗಳಲ್ಲಿ ಬಹುತೇಕರು ಮೀಸಲಾತಿಯ ಮೂರನೇ ತಲೆಮಾರಿನ ಫಲಾನುಭವಿಗಳಾಗಿದ್ದಾರೆ. ಇದು ಸಾಮಾಜಿಕತೆಯ ಏಕಮುಖ ಚಲನೆ ಮತ್ತು ಜಾತಿಯೊಳಗಿನ ಆಂತರಿಕ ಹೊರಗುಳಿಯುವಿಕೆಯನ್ನು ದೃಢಪಡಿಸುತ್ತದೆ. ಇದು ಆರು ದಶಕಗಳ ನಂತರವೂ ಮೀಸಲಾತಿಯ ಮಾನದಂಡ ಬಡತನವೋ ಅಥವಾ ಶ್ರೀಮಂತಿಕೆಯೋ ? ಶಿಕ್ಷಿತರಿಗೋ ಅಥವಾ ಅಶಿಕ್ಷಿತರಿಗೋ ? ಎಂಬ ಕಟುಜಿಜ್ಞಾಸೆಯನ್ನು ಹುಟ್ಟುಹಾಕಿದೆ. ಮೀಸಲಾತಿಯ ಮೂಲ ಉದ್ದೇಶವಾದ ಸಮಾನತೆಯನ್ನು ವರ್ತಮಾನದ ಸನ್ನಿವೇಶದಲ್ಲಿರಿಸಿ ಅವಲೋಕಿಸಬೇಕಾಗಿದೆ. ಈ ರೀತಿಯ ಅಸಮಾನ ಅವಕಾಶವು ಸಂಘರ್ಷಾತ್ಮಕ ಸನ್ನಿವೇಶಗಳನ್ನು ಸೃಷ್ಟಿ ಮಾಡುವುದಲ್ಲದೆ, ಅವಕಾಶವಂಚಿತ ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗದ ಬಡ ಸಮೂಹವು ತಮ್ಮದೇ ಸಮುದಾಯದೊಳಗಿನ ಬಲಾಢ್ಯ ಗುಂಪಿನೊಂದಿಗೆ ಸ್ಪರ್ಧಿಸಲಾಗದೆ ವಿಮುಖರನ್ನಾಗಿಸುತ್ತಿದೆ. ಈ ನೋವು ಮತ್ತು ಅಸಮಾಧಾನ ಯಾವ ಸಂದರ್ಭದಲ್ಲಿ ಕಟ್ಟೆಯೊಡೆದು ಪ್ರವಹಿಸುತ್ತದೆಯೆಂಬುದನ್ನು ಊಹಿಸುವುದೂ ಅಸಾಧ್ಯ. ಈ ದ್ವೇಷದ ಭಾವನೆಯು ಮೀಸಲಾತಿಯಿಂದ ವಂಚಿತರಾದ ಸಮೂಹವು ಮೀಸಲಾತಿಯನ್ನು ಅನುಭವಿಸುತ್ತಿರುವ ಸಮೂಹವನ್ನು ಅನುಮಾನದಿಂದ ನೋಡುವಂತೆ ಮಾಡಿದೆ.



# ಮೀಸಲಾತಿ ನಿರೀಕ್ಷೆ ಮತ್ತು ಆಶಯ

ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳಲ್ಲೂ ಶ್ರೇಣೀಕೃತ ವ್ಯವಸ್ಥೆಯಿದ್ದು, ಕೆಳಸ್ತರದ ಬಡ ಮತ್ತು ಅರೆಶಿಕ್ಷಿತ ವರ್ಗ ಮೀಸಲಾತಿಯ ಫಲವನ್ನು ಪಡೆದಲ್ಲಿ ಸ್ವ-ಸಮುದಾಯದ ಉನ್ನತವರ್ಗಗಳ ಕಣ್ಣು ಕೆಂಪಾಗಿ, ಅಸಮಾಧಾನದ ಹೊಗೆಯಾಡುತ್ತದೆ. ಇಂತಹ ಅಸಮಾಧಾನಗಳು ಬಹುತೇಕ ಸಂದರ್ಭಗಳಲ್ಲಿ ರಾಜಕೀಯ ಆಯಾಮ ಪಡೆಯುವುದುಂಟು. ಇತ್ತೀಚೆಗೆ ನಡೆದ ಗುಜ್ಜಾರ್ ಮತ್ತು ಮೀನಾ ಸಮುದಾಯದ ಮೀಸಲಾತಿ ಚಳುವಳಿಗಳು ಇದಕ್ಕೆ ಸೂಕ್ತ ಉದಾಹರಣೆಗಳು. ಭಾರತದ ಅಭಿವೃದ್ಧಿ ಹೊಂದಿದ ರಾಜ್ಯವೆಂಬ ಹಣೆಪಟ್ಟಿ ಹೊಂದಿರುವ ಗುಜರಾತಿನ ಬಲಾಢ್ಯ ಪಟೇಲ್ ಸಮುದಾಯವು ಮೀಸಲಾತಿಯನ್ನು ರಾಷ್ಟ್ರೀಕರಣಗೊಳಿಸಿ ಎಂಬ ಬೇಡಿಕೆಯೊಂದಿಗೆ ಚಳುವಳಿಯನ್ನು ಹುಟ್ಟುಹಾಕಿದೆ.

ಮೀಸಲಾತಿಯ ಪ್ರಯೋಜನದ ಹರಿವು ಕೇವಲ ಕೆಲವು ಶಿಕ್ಷಿತ, ಸದೃಢ ಕುಟುಂಬಗಳಿಗೆ ಮಾತ್ರ ಸೀಮಿತವಾಗಿದೆಯೆಂಬುದು ಕಟುಸತ್ಯ. ನೈಜ ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿ ಮತ್ತು ಪಂಗಡಗಳು ಮೀಸಲಾತಿಯ ಕೇಂದ್ರಬಿಂದುವಿನಿಂದ ಇನ್ನೂ ಅತಿ ದೂರದಲ್ಲಿವೆ. ಇಂದರಿಂದಾಗಿ ಬಡವರ್ಗವು ಅಸಮಾಧಾನದಿಂದ ಬೇಸತ್ತು ಪ್ರಚಲಿತದಲ್ಲಿರುವ ಮೀಸಲಾತಿ ವ್ಯವಸ್ಥೆಯನ್ನು ತಮಾಷೆ ಮಾಡುತ್ತಿವೆ. ಅಸ್ತಿತ್ವದಲ್ಲಿರುವ ಮೀಸಲಾತಿ ವ್ಯವಸ್ಥೆಯು ಶೂನ್ಯ ಫಲಿತಾಂಶ ನೀಡುತ್ತಿದ್ದು, ಜಾತಿಯೊಳಗೆ ಮತ್ತೊಂದು ದುರ್ಬಲ ವರ್ಗವನ್ನು ಸೃಷ್ಟಿಸಿದೆ. ಇದರಿಂದಾಗಿ ಬಡವರಿಗೆ ಮೀಸಲಾತಿ ನಿಜವಾಗಿಯೂ ವ್ಯರ್ಥವೆನಿಸಿ, ಇದ್ದೂ ಇಲ್ಲದಂತಾಗಿದೆ. ಆದ್ದರಿಂದ ಮೀಸಲಾತಿ ಕುರಿತಂತೆ ರಾಷ್ಟ್ರವ್ಯಾಪಿಯಾಗಿ ರಚನಾತ್ಮಕ ಚರ್ಚೆಗಳು ನಡೆದು, ಅವಕಾಶಗಳು ಸಮುದಾಯದಲ್ಲಿನ ಕಟ್ಟಕಡೆಯ ವ್ಯಕ್ತಿಗೂ ಸಿಗಬೇಕಿದೆ. ಸಮಾನತೆ, ದಕ್ಷತೆ ಮತ್ತು ಸನ್ನಡತೆಯಿಂದ ಕೂಡಿದ ಮೀಸಲಾತಿ ನೀತಿ ಜಾರಿಗೆ ಬರಬೇಕಾಗಿದೆ.

ಒಂದು ಬಾರಿ ಮೀಸಲಾತಿಯ ಅವಕಾಶವನ್ನು ಅನುಭವಿಸಿದವರು ಮುಕ್ತ ಮನಸ್ಸಿನಿಂದ ತಮ್ಮದೇ ಸಮುದಾಯದ ಇತರರಿಗೆ ಬಿಟ್ಟುಕೊಡಬೇಕಾಗಿದೆ. ಈಗಾಗಲೇ ಕೇಂದ್ರ ಮತ್ತು ರಾಜ್ಯಾಡಳಿತದಲ್ಲಿ ಉದ್ಯೋಗದ ಅವಕಾಶವನ್ನು ಪಡೆದವರಿಗೆ, ಪ್ರಮುಖವಾಗಿ ಐಎಎಸ್, ಕೆಎಎಸ್, ಐಪಿಎಸ್, ಅಧಿಕಾರಿಗಳಿಗೆ, ಎಮ್‌ಎಲ್‌ಎ, ಎಮ್‌ಪಿ ಅಥವಾ ವೈದ್ಯರುಗಳ ಮಕ್ಕಳಿಗೆ ಪುನಃ ಮೀಸಲಾತಿ ಅವಕಾಶವನ್ನು ನಿರಾಕರಿಸಬೇಕು. ಇಲ್ಲದಿದ್ದಲ್ಲಿ ಮೀಸಲಾತಿಯು ಬಡವರ ಪಾಲಿಗೆ ಕನಸಾಗಿಯೇ ಉಳಿಯಬಹುದು. ಹೀಗೆ ಮೀಸಲಾತಿಯನ್ನು ನಿರಾಕರಿಸಿದ್ದೇ ಆದಲ್ಲಿ ಶಿಕ್ಷಣ ಮತ್ತು ಉದ್ಯೋಗ ಕ್ಷೇತ್ರಗಳು ಸಮಾನವಾಗಿ ಎಲ್ಲರಿಗೂ ತೆರೆದುಕೊಳ್ಳಲು ಸಾಧ್ಯವಿದೆ.



ಎರಡನೆಯದಾಗಿ, ಮೀಸಲಾತಿಗೆ ಒಳಪಡದ ಸಮೂಹಗಳ ಬಡ ಕುಟುಂಬಗಳ ಸಮಸ್ಯೆಗಳನ್ನು ಸರಕಾರವು ಪರಿಗಣನೆಗೆ ತೆಗೆದುಕೊಳ್ಳಬೇಕು. ಮುಂದುವರಿದ ಜಾತಿಗಳಲ್ಲಿನ ಬಡವರ್ಗಗಳನ್ನು ಪರಿಗಣಿಸಿ ಅಸ್ತಿತ್ವದಲ್ಲಿನ ಮೀಸಲಾತಿ ವ್ಯವಸ್ಥೆಯ ಮೇಲಿನ ಅವರ ಅಸಹನೆಯನ್ನು ನಿಯಂತ್ರಿಸಬೇಕು.

ಮೂರನೆಯದಾಗಿ, ಯಾವುದೇ ವಿದ್ಯಾರ್ಥಿಯು ಬಡತನದ ಕಾರಣದಿಂದ ಉನ್ನತ ವಿದ್ಯಾಭ್ಯಾಸದ ಅವಕಾಶದಿಂದ ವಂಚಿತನಾಗಬಾರದು. ಇದಕ್ಕಾಗಿ ಪ್ರತಿಯೊಬ್ಬರಿಗೂ ಉನ್ನತ ಶಿಕ್ಷಣದವರೆಗೂ ಉಚಿತ ಶಿಕ್ಷಣ ನೀಡಬೇಕು, ಜೊತೆಗೆ ವಿದ್ಯಾರ್ಥಿವೇತನ, ಶಿಷ್ಯವೇತನ ಮತ್ತು ಸ್ಮಾರ್ಟ್ ಲೋನ್‌ಗಳನ್ನು ನೀಡಬೇಕು. ಇದರಿಂದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ತಮ್ಮ ಭವಿಷ್ಯವನ್ನು ಯಾವುದೇ ಜಾತಿ, ಆರ್ಥಿಕ ಅಥವಾ ಸಾಮಾಜಿಕ ಹಿನ್ನೆಲೆಯ ಸಹಾಯವಿಲ್ಲದೆ ರೂಪಿಸಿಕೊಳ್ಳಲು ಸಾಧ್ಯವಾಗುತ್ತದೆ.

ಈ ಮೂರು ಸಲಹೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಿದಲ್ಲಿ ಮೀಸಲಾತಿ ಕುರಿತಂತೆ ಇರುವ ಅಸಮಾನತೆ, ಅಸಮಾಧಾನ, ದ್ವೇಷಗಳನ್ನು ನಿಯಂತ್ರಿಸಬಹುದು. ಜೊತೆಗೆ, ಖಾಸಗಿ ಕ್ಷೇತ್ರಗಳಲ್ಲೂ ಸಮಾನ ಅವಕಾಶಕ್ಕಾಗಿ ಮೀಸಲಾತಿಯನ್ನು ಜಾರಿಗೊಳಿಸಬೇಕು.

**ಜಗದೀಶ ಎಂ.**
ಸಂಶೋಧನಾ ವಿದ್ಯಾರ್ಥಿ, ಸಮಾಜಶಾಸ್ತ್ರ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ – ೫೭೪ ೧೯೯

ಕಾವ್ಯಲೋಕ



# ಹೊಸ ಸೃಷ್ಟಿ



ಹೊಸ ಹೊಸ ಅಕ್ಷರಗಳು ಬೇಕು
ಪದಗಳು ಬೇಕು
ವಾಕ್ಯಗಳು ಬೇಕು

ಹೊಸ ಹೊಸ ದೃಶ್ಯಗಳು ಬೇಕು
ಚಿತ್ರಗಳು ಬೇಕು
ಬಣ್ಣಗಳು ಬೇಕು
ಕುಂಚಗಳು ಬೇಕು

ಹೊಸ ಹೊಸ ಶಿಲೆಗಳು ಬೇಕು
ಕಲೆಗಳು ಬೇಕು
ನಾದಗಳು ಬೇಕು
ರಾಗಗಳು ಬೇಕು
ರಸಗಳು ಬೇಕು
ಭಾವಗಳು ಬೇಕು

ಹೊಸ ಸೃಷ್ಟಿಗಾಗಿ
ಪ್ರಕೃತಿಯ ಮುಂದೆ
ಹೀಗೆ ಬೇಡಿಕೆಗಳನ್ನು
ಮಂಡಿಸುತ್ತಲೇ ಹೋದೆ
ಹೊಸತನ್ನು ಬರೆಯುವುದಕ್ಕೆ
ಕೊರೆಯುವುದಕ್ಕೆ
ತೆರೆಯುವುದಕ್ಕೆ
ಸಾಮಗ್ರಿಗಳ ಪಟ್ಟಿಯಿಟ್ಟು
ಉತ್ತರಕ್ಕಾಗಿ ಕಾದೆ.
ಪ್ರಕೃತಿ ಥಟ್ಟನೆ ಹೇಳಿತು
ಮಹನೀಯ
ನನ್ನದು ಒಂದೇ ಒಂದು ಸಲಹೆ
ನೀನೇ ಏಕೆ ಹೊಸಬನಾಗಬಾರದು?

**ಡಾ॥ ರಮಾನಂದ ಬನಾರಿ**
ಶ್ರೀ ಗಣರಾಜ ಚಿಕಿತ್ಸಾಲಯ, ಮಂಜೇಶ್ವರ – ೬೭೧ ೩೨೩




ಲೇಖಕರು : **ಡಾ॥ ಕೋ. ಚೆನ್ನಬಸಪ್ಪ**
ಬೆಲೆ : ರೂ. ೭೫/– ಪುಟಗಳು : ೧೫೦
ಪ್ರಕಾಶಕರು : **ಲೋಹಿಯಾ ಪ್ರಕಾಶನ**
"ಕ್ಷಿತಿಜ" ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ – ೫೮೩ ೧೦೩




# ಶ್ರೀ ರಾಮಾಯಣ ದರ್ಶನಂ ಕರ್ತೃ ಯಾರು? ದರ್ಶನ ಯಾವುದು?

## ಕೋಚೆ ಅವರ ಹೊಸ ಪುಸ್ತಕ ವಿಮರ್ಶೆ

**ಡಾ॥ ರಾಜೇಗೌಡ ಹೊಸಹಳ್ಳಿ**

**ಕೋ**ಚೆ ಅವರೇ ಹೇಳಿಕೊಂಡಿರುವಂತೆ ಕುವೆಂಪು ಶ್ರೀ ರಾಮಾಯಣ ದರ್ಶನಂ – ಕರ್ತೃ ಯಾರು ? ದರ್ಶನ ಯಾವುದು ? ಇತ್ತೀಚಿನ ಅವರ ಪುಸ್ತಕ (೨೦೧೫ ಲೋಹಿಯಾ ಪ್ರಕಾಶನ, ಬಳ್ಳಾರಿ) ಇದು ಅವರ ಬರವಣಿಗೆಯ ಕಡೆಯದಾಗಬಹುದು ಎಂದಿದ್ದಾರೆ. ಆದರೆ ನಮಗೇನು ಹಾಗೆನಿಸುತ್ತಿಲ್ಲ. ಅರವಿಂದರ 'ಸಾವಿತ್ರಿ', 'ಬೇಡಿ ಕಳಚಿತು ದೇಶ ಒಡೆಯಿತು' ಸೇರಿದಂತೆ ನೂರಾರು ಪುಸ್ತಕಗಳು ಲೇಖನಗಳು ಅವರವು. ಎಲ್ಲದರಲ್ಲೂ ಅಧ್ಯಾತ್ಮದ ಮುನ್ನಡೆ, ರಾಜಕೀಯ ಸಂಪನ್ನತನ, ಸಾಮಾಜಿಕ ಕಳಕಳಿ, ವೈಚಾರಿಕ ಸಂಪತ್ತು ಇವು ಮೇಳೈಸಿವೆ.

ಕೋಚೆ ಅವರು ಬರೆದ ಈ ಪುಸ್ತಕದ ಕರ್ತೃ ಯಾರು ? ದರ್ಶನ ಯಾವುದು ? ಯಾಕೆ ಈ ಅನುಮಾನ ! ಕುವೆಂಪು ಕರ್ತೃ ಅಲ್ಲವೆ ! ಎಂದ ತಕ್ಷಣವೇ ದರ್ಶನ ಯಾವುದು ? ಎಂಬ ಪ್ರಶ್ನೆಗೆ ಉತ್ತರ ಸುಲಭವಲ್ಲ. ಕೋಚೆ ಅವರನ್ನು ಓದಬೇಕು. 'ರಾಮಂಗೆ ಮೊದಲಲ್ತೆ ರಾಮಾಯಣಂ ? ...ರಾಮಂಗೆ ಮಿಗಿಲೆಂಬವೋಲ್ ರಾಮಾವತಾರಕಿಂ ಗುರುತರಂ ತಾನ್ನೆಸೆ ರಾಮಾಯಣಾವತಾರಂ' – ಈ ದರ್ಶನ ನೀಡಿದ ಭಾಗ್ಯ ಕುವೆಂಪು ಅವರದು. ಗಾಂಧೀಜಿಗೆ ಶ್ರೀರಾಮ ಆವಿರ್ಭವಿಸಿದ್ದು ಕೂಡ ಹೀಗೆಯೇ. 'ಯಾರೂ ಮುಖ್ಯರಲ್ಲ ಯಾರೂ ಅಮುಖ್ಯರಲ್ಲ' – ಇದು ಗಾಂಧಿ ಮೂಲದ ದೇಶೀ ಮಂತ್ರ. ಗಾಂಧಿ ಹೇಳುತ್ತಾರೆ : 'ರಾಮನಿಗಿಂತ ಶಕ್ತಿಯುತವಾದದ್ದು ನಾಮ.' ಹಾಗೆಯೇ ಗಾಂಧಿಯು ಸ್ವರಾಜ್ಯವೆಂದರೇನು ಎಂದು ಹೇಳುವಾಗ 'ಯಾರೊಬ್ಬರೂ ಮೊದಲಿಗರಲ್ಲ, ಯಾರೂ ಕೊನೆಯವರಲ್ಲ' ಎನ್ನುತ್ತಾರೆ. ಈ ಎರಡೂ ನುಡಿಗಳು ಅವರ 'ಹರಿಜನ' ಪತ್ರಿಕೆಯಲ್ಲಿ (೧೯೪೬, ಜೂನ್ ೨: ಪುಟ ೧೫೮/೧೯೪೭, ಜುಲೈ: ೨೬ ಪುಟ ೨೩೮) ನಿರೂಪಿಸಿದವುಗಳು. ಕುವೆಂಪು ಬೆಳಗಾಂಗೆ ಗಾಂಧಿಯವರನ್ನು ನೋಡಲು ಹೋದ ವಿಚಾರವನ್ನು ಅವರ ಆತ್ಮಚರಿತ್ರೆಯಲ್ಲಿ ದಾಖಲಿಸುತ್ತಾರೆ. ಬಿಳಿ ಬಟ್ಟೆಗಳು, ಕಾವಿ ಬಟ್ಟೆಯ ಬಣ್ಣಕ್ಕೆ ಧೂಳಿನಿಂದ ಬದಲಾದ ಜನಸಾಗರದ ನಡುವೆ ಅಲಿ ಸಹೋದರರೆಂಬ ಆಜಾನುಭಾವರ ನಡುವೆ ಪುಟ್ಟ ಆಕಾರದ ಗಾಂಧಿಯನ್ನು ನೋಡಿ ದರ್ಶನ ಪಡೆಯುತ್ತಾರೆ. ಈ ದರ್ಶನ ಅವರ ರಾಮಾಯಣದಲ್ಲಿ ದಾಖಲಾಗುತ್ತಾ ಹೋಗಿರುವ ಅಂಶ ಓದುಗರಿಗೆ ಕಾಣಬೇಕು. ಅದೇ ಕುವೆಂಪು ಕಂಡ ದರ್ಶನ. ಕೋಚೆ ಅವರ ಈ ಕೃತಿಗೆ ಎಂ. ಎಚ್. ಕೃಷ್ಣಯ್ಯನವರು ಮುನ್ನುಡಿ ಬರೆದಿದ್ದಾರೆ. ಜಹೊನಾ ಅವರು ಹಿನ್ನುಡಿ ಬರೆದಿದ್ದಾರೆ. ಈ ಪ್ರತಿಮಾ ವಿಧಾನವು ಅಲಿ ಸಹೋದರರ ನಡುವೆ ಗಾಂಧಿ ನಡೆದು ಬಂದಂತೆ ಕೋಚೆ ಅವರಿಗೆ ಮುನ್ನುಡಿ ಹಿನ್ನುಡಿ ಬರೆದಿರುತ್ತಾರೆ. ಜಹೊನಾ ಅವರು ಕುವೆಂಪು ರಾಮಾಯಣದಿಂದ ಹಾಗೂ ಬದುಕು ಬರಹಗಳಿಂದ ಕಂಡುಕೊಂಡ ದರ್ಶನವೆಲ್ಲಾ ಇಡಿಯಾಗಿ ಮಡಿಯಾಗಿ ಅವರ ಈ ಹಿನ್ನುಡಿಯಲ್ಲಿದೆ. ಕನ್ನಡ ನಾಡು ಕಂಡ, ಕಾಣುತ್ತಿರುವ ಕುವೆಂಪು ದರ್ಶನದ ಒಳನೋಟ ಹಿಡಿದ ದಾಷ್ಟಾರ ಚೇತನಗಳಲ್ಲಿ ಜಹೊನಾ ಪ್ರಮುಖರು. ಅದು ಕುವೆಂಪು ಅವರಿಗೆ ಗೊತ್ತಿತ್ತು. ಕೋಚೆ ಅವರಿಗೆ ಗೊತ್ತು. ಅದನ್ನು ಇಲ್ಲಿ ಓದಿಯೇ ತಿಳಿಯಬೇಕು.

*ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸ್ಸಿನ*
*ಮೇರುಕೃತಿ, ಮೇಣ್ ಜಗದ್ಭವ್ಯ ರಾಮಾಯಣಂ !*

ಕೋಚೆ ಅವರು ತಾವು ಬದುಕಿಡೀ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ದರ್ಶಿಸಿದ, ಕಂಡುಕೊಂಡ 'ಸತ್ಯ'ಗಳನ್ನು ಸಂಗ್ರಹ ರೂಪದಲ್ಲಿ ಈ ಕೃತಿಯ ಹತ್ತು ಅಧ್ಯಾಯಗಳಲ್ಲಿ ಕಟ್ಟಿಕೊಡುತ್ತಾರೆ. ಮೊದಲ ಅಧ್ಯಾಯದಲ್ಲಿ ಮೇರುಕೃತಿಯ ಬಾಹ್ಯಕೃತಿ ಏನೆಂದು ಸ್ಥೂಲವಾಗಿ ಪರಿಚಯಿಸುತ್ತಾರೆ. ಮಹಾಕಾವ್ಯ ಹೇಗೆ ಮೂಡಿತೆಂಬುದನ್ನು ಎರಡನೇ ಅಧ್ಯಾಯದಲ್ಲಿ ಚಿಂತಿಸುತ್ತಾರೆ. 'ಸಾಗರೋಲ್ಲಂಘನಂ' ಎಂಬುದು ಆಂಜನೇಯನೊಡನೆ ಅವನ ಎತ್ತರಕ್ಕೆ ಏರಿ ಮಹಾಕಾವ್ಯ ರಸಾಸ್ವಾದನೆ ಮಾಡಬೇಕು, ಇಲ್ಲದಿದ್ದರೆ 'ನೆಗೆದ ಹನುಮನ ಕೂಡೆ ಬಂಡೆ ಗಿಡಮರಬಳ್ಳಿಗಳ್ ಪಾರಿದವಿನಿತು ಗಂಟರ್ಗೆ ಮತ್ತಂಬುಧಿಗೆ ಗಮನಗೆಟ್ಟರುಳಿದವು, ಕವಿಕಲ್ಪನೆಯ ಕೂಡೆ ಏರಲೆಳಸಿಯು ಮೇರಲಾರದ ವಿಮರ್ಶಕನ ಕಾಣ್ಕೆಯಿಲ್ಲದ ಬರಿಯ ಜಾಣ್ಮೆಯೊಲ್' ಎಂಬ ಈ ಕಾವ್ಯೋಪಮೆ ವಿಮರ್ಶಕ ಪ್ರಪಂಚದಲ್ಲಿ ಅಂದು ಬಹಳ ಚರ್ಚೆಗೊಳಗಾಗಿದ್ದುಂಟು. ಅನಂತರ ಕಾಲವೆಂಬುದು ಎಂಥದ್ದನ್ನೂ ಸತ್ಯದೆಡೆಗೆ ಕೊಂಡೊಯ್ಯುವ ಪಕ್ಷಿ. ಇಲ್ಲಿ ಮಹಾಕವಿಯದು ಕೇವಲ ಪರಂಪರೆಯ ಕಾವ್ಯವಲ್ಲ. ಜಗದ ಮಹಾಕವಿಗಳನ್ನು ಕಾಲಪಕ್ಷಿಯೊಡನೆ ಎತ್ತಿ ತಂದ ಮಹಾಶಕ್ತಿ ಎಂಬುದರ ಅರಿವಾಯಿತು.

– ಎಂಬ ನುಡಿಗಳಲ್ಲಿ 'ಕುವೆಂಪುವ' ಎಂಬ ಮಾತು ಪ್ರಮುಖ. ಇಲ್ಲಿ ರಾಮಾಯಣ ಪುಟ್ಟಪ್ಪನೆಂಬುವನನ್ನು ಕುವೆಂಪು ಆಗಿ ಸೃಷ್ಟಿಸಿದೆ. ಹಾಗಾದರೆ ಬರೆದವರು ಯಾರು ? ಯಾವುದೋ ಶಕ್ತಿ ಬರೆಸಿತು. ಜಹೊನಾ 'ಎಲ್ಲ ಜ್ಞಾನವೂ ಮಾನವನ ಹೃದಯದಿಂದ ಹರಿದು ಬರುತ್ತದೆ' ಎಂಬ ವಿವೇಕಾನಂದರ ವಾಣಿಯೊಂದಿಗೆ ಬರಹ ಪ್ರಾರಂಭಿಸುತ್ತಾರೆ. ವಿವೇಕಾನಂದರು ಕುವೆಂಪು ಅವರಿಗಷ್ಟೇ ಅಲ್ಲ, ಜಹೊನಾ ಅವರಿಗೂ ಮೈಮೇಲೆ ಬಂದವರು. ಭೂತಿ ಎಂದರೆ ಆಗುವಿಕೆ, ವಿಭೂತಿ ಎಂದರೆ ವಿಶೇಷವಾಗಿ ಆಗುವಿಕೆ. 'ಸಹೃದಯ ವಿಭೂತಿಗೆ ನಮೋ' ಎನ್ನುವ ಕುವೆಂಪು ಕುರಿತು ಜಹೊನಾ 'ಸರ್, ತಮ್ಮ ಜೀವಿತದ ಸಿದ್ಧಿ ಆಯಿತೆ ?' ಎಂದು ಒಮ್ಮೆ ಕೇಳುತ್ತಾರೆ. 'ನಿಮಗೆ ನನ್ನ ಅನಿಕೇತನ ಪದ್ಯದ ಕಡೆಯ ಸಾಲು ಜ್ಞಾಪಕವಿದೆಯೇ ? ಕುವೆಂಪು ಎಂದರು. 'ಹೌದು ಆಗು ಆಗು ಆಗು ಆಗು' ಎಂದೆ. 'ನಿರಂತರ ಆಗುವಿಕೆಯೆ ಸೃಷ್ಟಿ ನಿಯತಿಯ ನಿತ್ಯ' ಜಹೊನಾ ಎಂದರು. ಈ ಮಾತುಗಳನ್ನು ತಮ್ಮ ಹಿನ್ನುಡಿಯಲ್ಲಿ ದಾಖಲಿಸಿದ್ದಾರೆ. ಕುವೆಂಪು 'ಅಯೋಧ್ಯೆಯ ರಾಮನಿಗಿಂತ ಮಿಗಿಲಾದ ನಿತ್ಯರಾಮ ಓಂ ನಮೋ' ಎಂಬ ಯಾವುದೋ ಅವ್ಯಕ್ತ ಶಕ್ತಿಯೊಂದು ನನ್ನಿಂದ ಕೃತಿಯನ್ನು ರಚಿಸಿಕೊಂಡಿದೆ ಎಂಬ ಮಹಾಕವಿ ಮಾತನ್ನು ಜಹೊನಾ ದಾಖಲಿಸುತ್ತಾರೆ. ಮಹಾಕಾವ್ಯದ ಕಡೆಯಲ್ಲಿ ಪಟ್ಟಾಭಿಷೇಕ ಮಾಡುವುದು ಅಯೋಧ್ಯೆ ರಾಮನಿಗಲ್ಲ. 'ನಿತ್ಯ ರಾಮಾಯಣದ ರಾಮಂಗೆ ನಿಚ್ಚಮಂ ನಡೆವ ಪಟ್ಟೋತ್ಸವ ಸ್ತೋತ್ರಮಂ' – ಇದೇ ಕುವೆಂಪು ದರ್ಶನ. ಮರ್ತ್ಯ ಅಮರ್ತ್ಯದ ಶಿಶು, ತೇನ ವಿನಾ ತೇನ ವಿನಾ, ತೃಣಮಪಿ ನ ಚಲತಿ ತೇನ ವಿನಾ. ಈ ಸ್ತರಗಳನ್ನು ಅಧ್ಯಾತ್ಮ ಪವಿತ್ರಗಳನ್ನು ಅರಿಯಲು ಕುವೆಂಪು ಸಾಹಿತ್ಯವನ್ನು ಓದುತ್ತಿದ್ದರೆ ಸಾಕಾಗುವುದಿಲ್ಲ. 'ನಾನೇರುವೆತ್ತರಕೆ ನೀನೇರ ಬಲ್ಲೆಯಾ' ಎಂದು ವಿಮರ್ಶಕರನ್ನು ಕರೆದು ಮಹಾಕವಿ ದಾರಿ ತೋರಿಸಿದ್ದಾರೆ. ಕೋಚೆಯವರು ಅವರ ಕೃತಿಯುದ್ದಕ್ಕೂ ಹೇಗೆ ಕುವೆಂಪು ಅವರನ್ನು ಸಾದರೀಕರಿಸುತ್ತಾರೆ ಎಂಬುದನ್ನು ಹಾಗೂ 'ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆ'ಯು ಅಜ್ಜನಾಗಿ ಪ್ರಸ್ತುತ ಈ ಕೃತಿ ಅಜ್ಜನ ಹೆಗಲೇರಿದ ಮೊಮ್ಮಗನಾಗಿ ಕೋಚೆ ಅವರಲ್ಲಿ ಮೂಡಿಬಂದಿರುವುದನ್ನು ಜಹೊನಾ ಸಾದರಪಡಿಸಿ ಹೇಳುತ್ತಾರೆ.

ಜಹೊನಾ ಅವರು ಹೇಳುವಂತೆ 'ಸರಸತಿಯ ಹೃದಯ ನಿಧಿಯಾದ ಮಹಾಕಾವ್ಯದ ಅಂತರಂಗ ವನ್ನು ಹುಗುವ ವೈನತೇಯನ ಎರಡು ರೆಕ್ಕೆಗಳೆ ಒಂದು ಕುವೆಂಪು ಮತ್ತೊಂದು ಕೋಚೆ ಆಗಿದ್ದಾರೆ' ಈ ನುಡಿಗಳನ್ನು ಗಮನಿಸಿದರೆ ಕುವೆಂಪು ಕೋಚೆ ಹಾಗೂ ಜಹೊನಾ ಅವರಂತಹ ಸಮರ್ಥ ವಿಮರ್ಶಕ ಶಿಷ್ಯರನ್ನು ಪಡೆದ ಮಹಾಕವಿ ತೃಪ್ತನೆಂದೇ ಭಾವಿಸಬೇಕು. ಹಾಗಾದರೆ ಇಲ್ಲಿಯವರೆಗೆ ಯಾವ ವಿಮರ್ಶಕರೂ ಹೇಳದ ವಿಚಾರ ಇದರಲ್ಲೇನಿದೆ ಎನಿಸಬಹುದು. ವಿಚಾರ ಅದಲ್ಲ. ಮಹಾಕವಿಗಳಿಗೆ ಯಾವುದೋ ಶಕ್ತಿ ಮೈಮೇಲೆ ಬಂದು ಬರೆಸುತ್ತದೆ. ನಾವು ಕೇವಲ ಲಿಪಿಕಾರರಷ್ಟೆ. ಕುಮಾರವ್ಯಾಸನ ಮಹಾಕಾವ್ಯ, ಕುವೆಂಪು ಮಹಾಕಾವ್ಯ ಹೀಗೆ ಬರೆಸಿಕೊಂಡವು ಎಂದು ಆಯಾ ಕವಿಗಳೇ ಹೇಳಿದ ಮೇಲೆ ನಾವು ಒಪ್ಪಲೇಬೇಕು. ಕುವೆಂಪು ಅವರೇ ಹೇಳುವಂತೆ 'ಬರೆದೇ ಬರೆದೇ ! ಹತ್ತು ವರ್ಷ ಬರೆದೆ ! ಈ ಬೃಹತ್ ಕೃತಿ ಮೂಡಿತು'. ಇದೇ ಕರ್ತೃ ಯಾರು ಎಂಬುದಕ್ಕೆ ಉತ್ತರ !

'– ಎಲ್ಲವೂ ನನ್ನ ಅಂಕೆ ಮೀರಿಹೋಗುತ್ತಿದ್ದವು' ಎಂಬ ಕವಿ ಮಾತು ಕೂಡ ಅಂತಿಂತಹದಲ್ಲ. ಶತಶತಮಾನಕ್ಕೊಬ್ಬ ಮಹಾಕವಿ ಭುವಿಯ ಮೇಲೆ ಸೃಜಿಸುವ ಶಕ್ತಿಯದು. ಆಕಾಶದಗಲ ಶ್ರೀರಾಮನಾಮ, ಭೂಮಿ ತೂಕದ ಸೀತೆ, ಮಹಾರಾಕ್ಷಸತ್ವ , ರಾವಣತ್ವಗಳೆಲ್ಲ ಏಕಬಿಂದುವಿನಲ್ಲಿ ಐಕ್ಯವಾಗುವ ಅಧ್ಯಾತ್ಮ ಶ್ರೀ ರಾಮಾಯಣ ದರ್ಶನದಲ್ಲಿದೆ. ದರ್ಶನವೆಂದರೆ ಕೇವಲ ಓದಲ್ಲ, ಕೇವಲ ವಿಮರ್ಶೆಯಲ್ಲ. ಅದು ಓದುತ್ತಾ ಐಕ್ಯವಾಗುವ ಸಂಗಮ ಕ್ಷೇತ್ರ. ಈ ಮಹಾಕವಿ ಸಂಗಮ ಕ್ಷೇತ್ರಕ್ಕೆ ಕೃತಿಯ ಮುನ್ನುಡಿಯಲ್ಲಿರುವಂತೆ ಕುಳಿತ ಜಾಗಕ್ಕೆ ಅರವಿಂದರು ಬಂದು ನಮಸ್ಕರಿಸಿದ್ದಾರೆ. ದೇಶದ ಪ್ರಧಾನಿ ವಿ. ಪಿ. ಸಿಂಗ್ ನಮಸ್ಕರಿಸಿದ್ದಾರೆ.

ಕೋಚೆಯವರು ಕಾವ್ಯ ಕರ್ತೃ ಯಾರು ? ಎಂಬ ಪ್ರಶ್ನೆಯನ್ನು ಒಡ್ಡಿಕೊಂಡು ವಿಚಾರವೊಡ್ಡುತ್ತಾ 'ಪೃಥ್ವಿಯಿಂದ ಸಸ್ಯ, ಸಸ್ಯದಿಂದ ಅನ್ನ (ಜಡವಸ್ತು) ಅನ್ನದಿಂದ ಮಾನವ ಹುಟ್ಟಿಂದ' ಎಂಬ ಅಧ್ಯಾತ್ಮ ಮೌಲ್ಯಗಳನ್ನು ಮಹಾಕಾವ್ಯದಲ್ಲಿ ವಿಸ್ತರಿಸಿ ಹೇಳುತ್ತಾರೆ. ದರ್ಶನದ ನಿದರ್ಶನಗಳಾಗಿ ಶಬರಿ, ವಾಲಿವಧಾ, ಸೀತಾದೇವಿ, ಅಗ್ನಿಪರೀಕ್ಷೆ ಎಂಬ ಈ ಪ್ರಮುಖ ಘಟ್ಟಗಳನ್ನು ಚರ್ಚಿಸುತ್ತಾರೆ. ಕಾವ್ಯದ ವಸ್ತು ಯಾವುದು ? ಎಂಬ ಪ್ರಶ್ನೆ ಒಡ್ಡಿ 'ಶ್ರೀರಾಮಾಯಣಾವತಾರ ರಾಮಾವತಾರಕ್ಕಿಂ ಮಿಗಿಲು' ಎಂಬ ಸತ್ಯವನ್ನು ಬಿಡಿಸಿಡುತ್ತಾರೆ.

ಕೋಚೆ ಅವರು ತಾವು ಬದುಕಿಡೀ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ದರ್ಶಿಸಿದ, ಕಂಡುಕೊಂಡ 'ಸತ್ಯ'ಗಳನ್ನು ಸಂಗ್ರಹ ರೂಪದಲ್ಲಿ ಈ ಕೃತಿಯ ಹತ್ತು ಅಧ್ಯಾಯಗಳಲ್ಲಿ ಕಟ್ಟಿಕೊಡುತ್ತಾರೆ. ಮೊದಲ ಅಧ್ಯಾಯದಲ್ಲಿ ಮೇರುಕೃತಿಯ ಬಾಹ್ಯಕೃತಿ ಏನೆಂದು ಸ್ಥೂಲವಾಗಿ ಪರಿಚಯಿಸುತ್ತಾರೆ. ಮಹಾಕಾವ್ಯ ಹೇಗೆ ಮೂಡಿತೆಂಬುದನ್ನು ಎರಡನೇ ಅಧ್ಯಾಯದಲ್ಲಿ ಚಿಂತಿಸುತ್ತಾರೆ. 'ಸಾಗರೋಲ್ಲಂಘನಂ' ಎಂಬುದು ಆಂಜನೇಯನೊಡನೆ ಅವನ ಎತ್ತರಕ್ಕೆ ಏರಿ ಮಹಾಕಾವ್ಯ ರಸಾಸ್ವಾದನೆ ಮಾಡಬೇಕು, ಇಲ್ಲದಿದ್ದರೆ 'ನೆಗೆದ ಹನುಮನ ಕೂಡೆ ಬಂಡೆ ಗಿಡಮರಬಳ್ಳಿಗಳ್ ಪಾರಿದವಿನಿತು ಗಂಟರ್ಗೆ ಮತ್ತಂಬುಧಿಗೆ ಗಮನ

## ಸೆಲೆ

ಎಲ್ಲರ ಊರಿನ ಸೆಲೆ ನಾನು
ಹಳ್ಳ ತೋಡಿಸಿದವರಾರೋ...
ಚೊಕ್ಕಟಗೊಳಿಸಿದವರಾರೋ ಹುಡುಕುತ್ತಿದ್ದೇನೆ.

ಕಿಂಕಿಣಿ ಬಳೆಗಳ ರಿಂಗಣದಲ್ಲೂ ಬಿರುಕಿತ್ತು.
ತೇಲುತ್ತಿದ್ದ ಕಳೇಬರಕ್ಕೂ ಸುಖವಿತ್ತು
ಬತ್ತದ ಕಣ್ಣೀರೇ ಆಗಿದ್ದರೂ
ಸಿಹಿ ಸಿಹಿ ಎಂದು ತುಂಬುತ್ತಿತ್ತು
ಅದೆಷ್ಟೋ ಒಡಲುಗಳು.

ಸುತ್ತಲಿನ ನೆಲೆಯನ್ನು ತಂಪುಗೊಳಿಸುತ್ತಾ
ತಣ್ಣಗೆ ನೋಡುತ್ತಿದ್ದೆ ತಗ್ಗಿಹೋದ
ಬಿಂದಿಗೆಗಳ,
ಮೂಕವಾಗಿ ರೋದಿಸುತ್ತಾ ನೆತ್ತರು ತೊಳೆದ
ಅಂಗಗಳ.




ಅಯ್ಯೋ...! ವಿಧಿಯೇ...
ಬತ್ತಿಹೋಗಬೇಕು ನಾನು
ಆಳದೊಳಗಿನ ಕತ್ತಲಿನೊಳಗೆ
ಎರಕಹೊಯ್ದ ಕನಸುಗಳ ಕಮರಿಸಿದ್ದೆ
ಮತ್ತೊಬ್ಬರಿಗೆ ಸಿಗದ್ದನ್ನು ಅಪ್ಪಿದ್ದೆ.

ಎಲ್ಲರ ಸೋಂಕು, ಸೂತಕಗಳ ಕಳೆಯುತ್ತಾ
ಒಳಗಿನವುಗಳನ್ನು ಕೊಳೆಯಿಸುತ್ತಿದ್ದೆ,

ಜೀವಗಳ ಕಳೆದವಳನ್ನೂ
ಜೀವಧಾತೆಯೆಂದು ಪೂಜಿಸಿದಿರಿ...?
ಕಾಯುತ್ತಿರಿ
ಮತ್ತೆ ಬರುವೆ ಅಗೆದಷ್ಟೂ...



**ಭವ್ಯ ಪಿ.**
ನಂ. ೨೮೩, ೧ನೇ ಮುಖ್ಯರಸ್ತೆ
೧ನೇ ಅಡ್ಡರಸ್ತೆ, ಕಮಲಾನಗರ, ಬೆಂಗಳೂರು – ೫೬೦ ೦೭೯

ಗೆಟ್ಟರುಳಿದವು, ಕವಿಕಲ್ಪನೆಯ ಕೂಡೆ ಏರಲೆಳಸಿಯು ಮೇರಲಾರದ ವಿಮರ್ಶಕನ ಕಾಣ್ಕೆಯಿಲ್ಲದ ಬರಿಯ ಜಾಣ್ಮೆಯೊಲ್' ಎಂಬ ಈ ಕಾವ್ಯೋಪಮೆ ವಿಮರ್ಶಕ ಪ್ರಪಂಚದಲ್ಲಿ ಅಂದು ಬಹಳ ಚರ್ಚೆಗೊಳಗಾಗಿದ್ದುಂಟು. ಅನಂತರ ಕಾಲವೆಂಬುದು ಎಂಥದ್ದನ್ನೂ ಸತ್ಯದೆಡೆಗೆ ಕೊಂಡೊಯ್ಯುವ ಪಕ್ಷಿ. ಇಲ್ಲಿ ಮಹಾಕವಿಯದು ಕೇವಲ ಪರಂಪರೆಯ ಕಾವ್ಯವಲ್ಲ. ಜಗದ ಮಹಾಕವಿಗಳನ್ನು ಕಾಲಪಕ್ಷಿಯೊಡನೆ ಎತ್ತಿ ತಂದ ಮಹಾಶಕ್ತಿ ಎಂಬುದರ ಅರಿವಾಯಿತು.

ಕಾವ್ಯ ಕರ್ತೃ ಯಾರು ? ಎಂಬ ಅಧ್ಯಯನವು 'ಪುಟ್ಟಪ್ಪ ಸತ್ತ, ಅವನಿಲ್ಲ, ನಾನು ವಿವೇಕಾನಂದ' ಎನ್ನುವ ಮಹಾಕವಿಯ ಆತ್ಮಚರಿತ್ರೆಯಲ್ಲಿ ಬರುವ ಅನುಭಾವ ಸ್ಥಿತಿಯನ್ನು ವಿಸ್ತರಿಸಿ ಹೇಳುತ್ತದೆ. 'ನೀನುಂ ನಾನೆಯೆ ಕುವೆಂಪು' ಎಂದು ಪರಂಪರೆಯ ಮಹಾಕವಿಗಳಲ್ಲಿ ಐಕ್ಯವಾಗಿ ಭಾರತೀಯ ಅಧ್ಯಾತ್ಮದಲ್ಲಿ ಐಕ್ಯವಾಗಿ ತಾನು ಮಹಾಕವಿಯಾದ ಅನಾದಿ ಸ್ವರೂಪ ಹೇಳುತ್ತದೆ. 'ಲೋಕರಂಗದ ಹುಚ್ಚನ್ನು ಕಲಾರಂಗಕ್ಕೆ ವರ್ಗಾಯಿಸುವುದೆ ಕಾವ್ಯರಂಗದ ಯಶಸ್ಸಿದ್ಧಿ' (ಪು. ೪೪) ಎಂಬ ತಿಳಿವಳಿಕೆಯ ಅಸಾಮಾನ್ಯ ಸಾಧ್ಯತೆಯನ್ನು ಹೇಳುತ್ತ ಮಹಾಕಾವ್ಯವೆಂಬುದು ಸುಮ್ಮನೆ ಆದುದಲ್ಲ, ಅದೊಂದು ತಪಸ್ಸಿನ ಫಲ. ಜಗತ್ ವಿಕಾಸಕ್ಕಾಗಿ ಸ್ಫುರಿಸಿದ ಒಂದು ಅನುಭವ ಸ್ಥಿತಿ ಎಂದು ಸೂಚಿಸುತ್ತದೆ. 'ವೀರನಾರಾಯಣನೆ ಕವಿ ಲಿಪಿಕಾರ ಕುಮಾರವ್ಯಾಸ' ಎಂಬ ಕುಮಾರವ್ಯಾಸ ಮಹಾಕವಿಯ ಸ್ಥಿತಿ ಕೂಡ ಇಂಥದ್ದು. ಕೃತಿಯಲ್ಲಿ 'ಮಹಾಕವಿಯ ಲಕ್ಷಣ'ವನ್ನು ಕೋಚೆಯವರು ಇಪ್ಪತ್ತನೇ ಶತಮಾನದ ರಾಜಕೀಯ ಸಾಮಾಜಿಕ ಪರಿವರ್ತನೆಯಲ್ಲಿಟ್ಟು ಚಿಂತಿಸುತ್ತಾರೆ. ಅರವಿಂದರು ರಚಿಸಿದ ಮಹಾಕಾವ್ಯದ ಭಾರತೀಯ ಅಧ್ಯಾತ್ಮ ಹಾಗೂ ಕುವೆಂಪು ಮಹಾಕಾವ್ಯದ ಅಧ್ಯಾತ್ಮ ಒಂದೇ ಎಂಬುದನ್ನು ಕೋಚೆ ಅವರು ಇಬ್ಬರಲ್ಲೂ ಕಂಡುಕೊಂಡಿದ್ದಾರೆ. ಆಂಜನೇಯನಲ್ಲಿದ್ದ ಅವ್ಯಕ್ತ ಅದ್ಭುತ ಶಕ್ತಿ ಸ್ಫುರಿಸುವುದಕ್ಕೆ ಕಾರಣವಾದಂತೆ ಕುವೆಂಪು ಗುರು ವೆಂಕಣ್ಣಯ್ಯನವರು ಮಹಾಕವಿಯ ಕಾಯಕಕ್ಕೆ ನೀರೆರೆಯುತ್ತಾರೆ. ಈ ವೀಕ್ಷಣೆಗಳನ್ನು ಕೋಚೆ ಗಮನಿಸಿದ್ದಾರೆ. 'ಮಹಾಕವಿಯ ಲಕ್ಷಣ' ಎಂಬ ಅಧ್ಯಾಯ ಕೋಚೆ ಗಮನಿಸಿದ ಕನ್ನಡ ಕಾವ್ಯಗಳ ಹಲವಾರು ಮೆಟ್ಟಿಲಿನದು. ಸಂಸ್ಕೃತ, ಪ್ರಾಕೃತ ಮುಂತಾದುವುಗಳ ಹಲವು ಪ್ರಭಾವದ್ದು. ಶ್ರೀ ರಾಮಕೃಷ್ಣ ಪರಂಪರೆಯ ಭಾರತೀಯ ಪ್ರಜ್ಞೆಯದು. 'ರಾಮನೊಬ್ಬನೇ ಕಾವ್ಯದ ಏಕಮಾತ್ರ ನಾಯಕನಲ್ಲ. ರಾಮನು ಒಟ್ಟು ಮನುಕುಲದ ಪ್ರತಿನಿಧಿ' (ಪು. ೬೨) – ಇದು ಕೋಟಿ ಕೋಟಲೆಗಳನ್ನು ದಾಟಿ ಕೊನೆಗೆ ತಾನಾರೆಂಬುದನ್ನು ಅರಿವ ವಿಧಾನ. ಈ ಚರ್ಚೆ ಕೋಚೆ ಅವರಲ್ಲಿದೆ. 'ದರ್ಶನ ಅಂದರೇನು' ? ಎಂಬ ಅಧ್ಯಾಯವು 'ಕಲೆಯನಲ್ಲದೆ ಶಿಲ್ಪಿ ಶಿಲೆಯನೇಂ ಸೃಷ್ಟಿಪನೆ ?' ಎಂಬ ಮಹಾಕವಿ ಕಾಣ್ಕೆಯ ಸಮೀಕ್ಷೆಯದು. ಇದು 'ಸಂಸ್ಕಾರ ಸಮಷ್ಟಿಯ ಫಲರೂಪವಾಗಿಯೇ ಅವನ ದರ್ಶನ ಸಿದ್ಧವಾಗುತ್ತದೆ' (ಪು. ೬೮) ಎಂಬ ಮಹಾಕವಿಯ ಮಾತಿನದು. 'ಅವನ ದರ್ಶನಕ್ಕೆ ಅವನ ಆತ್ಮಸಿದ್ಧಿ ಆಧಾರ' ಎಂಬ ಮಹಾಕವಿ ಮಾತು ಕೂಡ ಇದೇ ವಿವರಣೆಯದು. ಇದು ಸರ್ವೋದಯ ತತ್ವದ್ದು. ಎಲ್ಲರನ್ನೂ ಮೇಲೆತ್ತುವುದು. ಅವರಲ್ಲಿ ನೀಚ ಉಚ್ಚರೆಂಬ ಭೇದವಿಲ್ಲ. ಇಲ್ಲಿ ದರ್ಶನ ಧ್ವನಿ ಎಂಬುದು 'ಅಲೌಕಿಕ ನಿತ್ಯಸತ್ಯಂಗಳಂ ಪ್ರತಿಮಿಸುವ ಸತ್ಯಸ್ಯ ಸತ್ಯಕಥನಂ ಕಣಾ' ಎಂಬ ಮಹಾಕವಿಯ ಕಾಣ್ಕೆ ಕೂಡ ಹೌದು. 'ದರ್ಶನ ಯಾವುದು ?' ಎಂಬ ಅಧ್ಯಾಯದಲ್ಲಿ ಕೋಚೆ ಅವರು ತಮ್ಮ ಅಪಾರ ಓದಿನಲ್ಲಿ ಮಹಾಕಾವ್ಯವನ್ನು ಪರಿಭಾವಿಸಿದ್ದಾರೆ. 'ದರ್ಶನ ! ಹಾರುವ ಹಕ್ಕಿಯ ರೆಕ್ಕೆಗಳಲ್ಲಿ ಕೂಗುವ ಕೊರಳ ದನಿಯಲ್ಲಿ ಆ ಚಿತ್ ಶಕ್ತಿಯನ್ನು ಯಾರು ಕಾಣುತ್ತಾರೋ ಅವರು ದಾರ್ಶನಿಕರು'(ಪು. ೭೬) – ಈ ರೀತಿ ನಾಡಿ ಹಿಡಿದು ಸಾಗುವ ಕೋಚೆಯವರು ನಿಜವಾಗಿ ಆಂಜನೇಯನೊಡನೆ ಏರುವ ಕುವೆಂಪು ಬಯಸಿದ ನಿಜ ವಿಮರ್ಶಕರು. 'ದರ್ಶನದ ನಿದರ್ಶನಗಳು' ಎಂಬ ಎಂಟನೇ ಅಧ್ಯಾಯವು ಮತ್ತಷ್ಟು ಕೆಲವು ನಿದರ್ಶನಗಳನ್ನು ವಿಸ್ತರಿಸುತ್ತದೆ.

ವಾಲ್ಮೀಕಿ ರಾಮಾಯಣ ತನ್ನ ಕಾಲಘಟ್ಟದಲ್ಲಿ ಅಲ್ಲಲ್ಲಿ ನಿಂತು ಕೆಲವು ಘಟನೆಗಳನ್ನು ನಿದರ್ಶನಕ್ಕಿಡುವ ಒಂದು ಮಾರ್ಗ. ಅಲ್ಲಿ ಕೇವಲ ಮಾನವೀಯತೆಯ ಚರ್ಚೆಗಳಿಲ್ಲ. ಅಲ್ಲಿಂದ ತೆಗೆದುಕೊಂಡ ವಸ್ತುಗಳಲ್ಲಿ ಕುವೆಂಪು ಎಂಬ ದರ್ಶನದ ಕಾಣ್ಕೆ ಎಲ್ಲೆಲ್ಲಿ ವರ್ತಮಾನದ ಚಲನೆಯನ್ನು ಪಾವಿತ್ರಗೊಳಿಸುತ್ತದೆಂಬುದು ಸಹ ಬಹುಮುಖ್ಯ. ಕಲ್ಲವಸಿ, ಶಿಲಾತಪಸ್ವಿನಿ ಎಂಬುದು ಕೇವಲ ಶಿಲೆಯಲ್ಲ. ಅದು ಶ್ರೀರಾಮನೆಂಬುವವನ ನಡಿಗೆಗೆ ಸಿಕ್ಕಿ ಎಚ್ಚರಗೊಂಡ ಸ್ಥಿತಿ ಮಾತ್ರವಲ್ಲ, ತಲೆತಲಾಂತರದ ಪಿತೃಪರಂಪರೆಯ ಪರಿವರ್ತನೆ. ಮಾತೃವಿನ ನಡಿಗೆಯನ್ನು ಗುರುತಿಸಿದ ವಿಧಾನ. ಶಿಲೆಗೆ ಜೀವ ಬರುವುದು ಹೀಗೆ. ವಾಲ್ಮೀಕಿಯಲ್ಲಿ ಶಬರಿ ರಾಮನ ಬರುವಿಗಾಗಿ ಕಾದಿರುವ ಕೇವಲ ಅಡವಿ ಜೀವ. ಕುವೆಂಪುವಿನಲ್ಲಿ ಆಕೆ ಇಡೀ ರಾಮಾಯಣ ದರ್ಶನಕ್ಕೆ ತಿರುವು ಕೊಡುವ ಅಡವಿ ಮಾದರಿ. ತನ್ನ ತಪಸ್ಸನ್ನೇ ಧಾರೆ ಎರೆಯುವ ಮಾತೃ ಸ್ವರೂಪ. ಇದು ವಾಲ್ಮೀಕಿಯ ವಸ್ತುವನ್ನು ಕಾಲಮಾನಕ್ಕಿಟ್ಟು ಬಂಗಾರವಾಗಿಸಿದ ಪ್ರಜಾರಾಜ್ಯದ ಸ್ವರೂಪ. 'ವಾಲಿವಧಾ' ವಾಲ್ಮೀಕಿಯಲ್ಲಿ ಶ್ರೀರಾಮನಿಗಂಟಿದ ಒಂದು ಕಿಲುಬು. ಇದರ ನಿವಾರಣೆ ಪ್ರಾಣ ಬಿಡುವ ವಾಲಿಯಿಂದಲೇ ಪರಿಹಾರವಾಗುವುದು ಕುವೆಂಪು ಕಾಣಿಕೆ. ತಾನು ಮಾಡಿದ ತಪ್ಪನ್ನು ಒಪ್ಪಿಕೊಳ್ಳುವ ಕುವೆಂಪು ಶ್ರೀರಾಮನು ವಾಲ್ಮೀಕಿ ರಾಮನಿಗಿಂತ ಹೆಚ್ಚು ಪ್ರಜಾಪ್ರಭುತ್ವ ಮಾದರಿಯ ಒಂದು ಮಾದರಿ. ಪ್ರಾಣ ಬಿಡುತ್ತಿರುವ ವಾಲಿಯಲ್ಲಿ ಶ್ರೀರಾಮನು ಕ್ಷಮೆ ಬೇಡುತ್ತಾನೆ. ಇದು ಪುರಾಣವನ್ನು ಕಾಲಮಾನಕ್ಕೆ ಮುರಿದು ಕಟ್ಟಿದ ವಿಧಾನ. ಇನ್ನು 'ಸೀತಾದೇವಿ ಅಗ್ನಿಪರೀಕ್ಷೆ' ಪರಂಪರೆಯ ದಿವ್ಯ ಮಾತ್ರವಲ್ಲ, ಕಾಲಗಣನೆಯಲ್ಲಿ ಗಂಡಸಾದವನು ಸಮಶಿಕ್ಷೆಯಲ್ಲಿ ಬೇಯುವ ವಿಧಾನ. ವಾಲ್ಮೀಕಿಯ ಸೀತೆ ಗಂಡಿನ ಅನುಮಾನದಲ್ಲಿ ದಿವ್ಯಪರೀಕ್ಷೆಗೆ ನಿಂತವಳು. ಸೀತೆಯೊಡನೆ ಕುವೆಂಪು ಶ್ರೀರಾಮ ತನ್ನನ್ನು ಕೂಡ ಪರೀಕ್ಷೆಗೊಡ್ಡಿ ದಿವ್ಯದಿಂದ ಹೊರಬಂದವನು. 'ತಾನೇಂ ಪೊರತೊ ದುರಿತ ದೋಷಕೆ' – ಇದು ಆಧುನಿಕ ಚಿಂತನೆಯದು. ಇದು ಮನೋಶಾಸ್ತ್ರದ ಹಿನ್ನೆಲೆಯದು. ನ್ಯಾಯಾಧೀಶರಾಗಿದ್ದ ಕೋಚೆ ಅವರು ಭಾರತೀಯ ಕಾಯಿದೆಯ ಉಲ್ಲೇಖಗಳನ್ನು ಸಹ ವಿಶ್ಲೇಷಿಸುತ್ತಾರೆ. ಇದೇ ರೀತಿಯಲ್ಲಿ ಶ್ರೀರಾಮ ಕಾಡಿನಿಂದ ನಾಡಿಗೆ ಬಂದಾಗ ಮೊದಲು ಕೈಕೇಯಿಗೆ, ಆಕೆಯ ಪಶ್ಚಾತ್ತಾಪದ ತಪಸ್ಸಿಗೆ ನಮಿಸಿ ತಾಯಿಗಿಂತ ಮಿಗಿಲಾದ ಸ್ಥಾನ ಕೊಟ್ಟು ಶರಣಾಗುವುದು ಹೊಸ ಕಾಣ್ಕೆ. ವಾಲ್ಮೀಕಿಯ ಮಂಥರೆಯಂತೂ ವರ್ಣಪರಂಪರೆಯ ದಾಸಿ ಸ್ಥಾನದಲ್ಲಿದ್ದ ಯಃಕಶ್ಚಿತ್ ಸ್ವರೂಪ. ಕುವೆಂಪು ಅವರ ಮಂಥರೆ ಪಶ್ಚಾತ್ತಾಪದಿಂದ ನರಳಿ ರಾಮನಿಲ್ಲದೆ ಬದುಕಲಾರದ ಭರತನಿಗೆ ಶ್ರೀರಾಮನನ್ನು ತಂದುಕೊಡಲು ಹೋಗಿ ಭ್ರಮೆಯಲ್ಲಿ ಚಿಟ್ಟೆಯಂತೆ ಬೆಂಕಿಯಲ್ಲಿ ಸೀದುಹೋಗಿ ಪುನಃ ಅಶರೀರವಾಗಿ ಶ್ರೀರಾಮ ಬರುವವರೆಗೂ ಕಾಯ್ದು ಪಶ್ಚಾತ್ತಾಪದಲ್ಲಿ ಮಿಂದು ದಾರಿ ತೋರಿಸಿದವಳು. ಹೀಗೆ ಕುವೆಂಪು ಪಾತ್ರಗಳ ದರ್ಶನಗಳೇ 'ಶ್ರೀ ರಾಮಾಯಣ ದರ್ಶನಂ' ನೆಲೆಯ ವಿಧಾನಗಳು. ಇದು ಕೊಲೆ, ಹಗೆ ಎಂಬುದನ್ನು ತೊಡೆದುಹಾಕಿದ ಗಾಂಧಿಯುಗದ ಪ್ರತಿಮಾ ವಿಧಾನ. ಹೀಗೆ ಮಹಾಕಾವ್ಯವು ಕುವೆಂಪು ದೃಷ್ಟಿಯಲ್ಲಿ ಸರ್ವವೂ ಬ್ರಹ್ಮಮಯವಾಗುತ್ತದೆ.

*ದೈತ್ಯನಂ ಗೆಲಿದ ಕಾರಣಕಲ್ತು,*
*ತನ್ನ ದಯಿತೆಯನೊಲಿದ ಕಾರಣಕೆ, ಗುರು ಕಣಾ*
*ರಾಮಚಂದ್ರಂ*

ಈ ಮಹಾಕವಿಯ ದರ್ಶನವೇ ಮಹಾಕಾವ್ಯದ ಹೂರಣ.

ಮತ್ತೊಂದು ಮಾತು, ಇಷ್ಟೆಲ್ಲ ತಪಸ್ಸಿನಿಂದ ಮಹಾಕಾವ್ಯವಾಗಿ ಮುಕ್ತಾಯವಾದ ಸ್ಥಳ ಬೆಂಗಳೂರಿನ ಮಲ್ಲೇಶ್ವರಂನಲ್ಲಿರುವ ಮನೆ ನಂ. ೧೪೦೮, ಮೊದಲ ಅಡ್ಡರಸ್ತೆ, ಎಲ್ಲಿದೆಯೆಂದು ಹುಡುಕುವ ಮನಸ್ಸಾದುದುಂಟು. ಅದೂ ಅಲ್ಲದೆ ಶುಕ್ರವಾರ ಬೆಳಿಗ್ಗೆ ೧೧ ಗಂಟೆ ೧೧ ನಿಮಿಷ. ಅದಾವುದು ಆ ಘಳಿಗೆ !

ಮಗದೊಂದು ಮಾತು, ಪ್ರೊ॥ ಶಂಕರ ಮೊಕಾಶಿ ಪುಣೇಕರ್ ಅವರು ಇಂಗ್ಲಿಷ್ ಮತ್ತು ಕನ್ನಡಂಗಳ ಬಹುದೊಡ್ಡ ವಿದ್ವಾಂಸರು. ಮಹಾಕವಿ ಎದುರು ಕುಳಿತು ಆಂಗ್ಲಭಾಷೆಗೆ ಅನುವಾದಿಸುತ್ತಾ ಪ್ರತಿದಿನ ಚರ್ಚೆಗೊಳಪಡಿಸಿ ತಯಾರಿಸಿದ ಈ ಮಹಾಕೃತಿಯ ಅನುವಾದ ಅಂದು ಅವರಿದ್ದಾಗ ಸ್ಥಗಿತಗೊಂಡಿದ್ದು, ಕುವೆಂಪು ಇಲ್ಲವಾದ ಮೇಲೆ ಕೇಂದ್ರ ಮಟ್ಟದಲ್ಲಿ ಪ್ರಕಟವಾಗಿದೆ. ಇದೇ ಮಹಾಕಾವ್ಯವನ್ನು ಹಿಂದಿಗೆ ಪ್ರಧಾನ ಗುರುದತ್ತ ಅವರು ಅನುವಾದಿಸಿದ್ದಾರಂತೆ. ಕುವೆಂಪುಗೆ ನೊಬೆಲ್ ಬಂದರೆ ! ಎಂಬ ಮನಸ್ಸುಗಳು ಹೇಗೆಲ್ಲಾ ಆಲೋಚಿಸಿದ್ದವು ! ಮಹಾತ್ಮ ಗಾಂಧಿಯಾಗಲೀ ಕುವೆಂಪು ಅವರಾಗಲೀ ನಮಗೆ ನೊಬೆಲ್‌ಗಿಂತ ಮಿಗಿಲಲ್ಲವೆ ! 'ರಾಮನಾಮದ ಮಹಿಮೆ ರಾಮಂಗೆ ಮಿಗಿಲೆಂಬವೋಲ್' ಎಂದೇ ನಾವು ತಿಳಿಯಬೇಕು. 'ಮನು'ಕುಲದ ಮತ್ಸರಕ್ಕೆ ಸಾವಿರಾರು ವರ್ಷದ ಹಿನ್ನೆಲೆ. ಗಾಂಧಿ ಕುವೆಂಪು ನಡೆಗೆ ಹತ್ತಾರು ಸಾವಿರ ವರ್ಷಗಳ ಮುನ್ನಡೆ. ಇದು ಜಗದ ಸತ್ಯಂಗಳ ನಿಯಮ.

---

**ಡಾ॥ ರಾಜೇಗೌಡ ಹೊಸಹಳ್ಳಿ**
ನಂ. ೪೧೩, ಒಂದನೇ ತಿರುವು, ಟೀಚರ್ಸ್ ಕಾಲನಿ
ನಾಗರಭಾವಿ, ಬೆಂಗಳೂರು – ೫೬೦ ೦೭೨



ಹೊಸ ಓದು



**ಭಾವಭಿತ್ತಿಯ ಚಿತ್ರಗಳು**

**(ಹತ್ತು ಕಥೆಗಳ ಸಂಕಲನ)**

*ಟಿ. ಕೆ. ತ್ಯಾಗರಾಜ್*

**ಪುಟ : ೧೪೨**

**ಬೆಲೆ : ರೂ. ೧೦೦**

**ಪಲ್ಲವ ಪ್ರಕಾಶನ,** ಚನ್ನಪಟ್ಟಣ

ಇಲ್ಲಿ ೨೦೦೨ರಿಂದ ೨೦೧೩ರ ಮಧ್ಯೆ ಬರೆದ ೧೦ ವಿಭಿನ್ನ ಕತೆಗಳು ಸಂಕಲನಗೊಂಡಿವೆ. ಮೊದಲ ಕತೆ 'ವಿಚಾರವಾದಿಯ ನಿಗೂಢ ಸಾವು' ಅಂತ್ಯವಾದರೂ ಅದು ಅಂತ್ಯಗೊಳ್ಳದೆ ಓದುಗರನ್ನು ಚಿಂತೆಗೆ ಹಚ್ಚುತ್ತದೆ. ಎರಡನೇ ಕತೆ 'ಸ್ವಾಮಿ ಸರ್ ಬದುಕಿನ ಪಾಠಗಳು' ಪ್ರಸ್ತುತ ಜಗತ್ತಿನ ತಳಮಳಗಳು ಅಥವಾ ಸಾವಿನವರೆಗೂ ನಿಲ್ಲದ ಜಂಜಾಟಗಳು ಸರಮಾಲೆಯಾಗಿ ಮನುಷ್ಯನನ್ನು ಕಾಡುವುದು ಕಂಡುಬರುತ್ತದೆ. ಮೂರನೇ ಕತೆ 'ಡಾಕ್ಟರ್ ಶ್ರೀ ದೊರಕಪ್ಪನವರ್‌ರು ಶುದ್ಧ ಹರಟೆ/ಕುಚೇಷ್ಟೆಯ ಪ್ರಬಂಧದಂತೆ ಇದ್ದು ಇದರಲ್ಲಿ ನಮ್ಮ ಬಹಳಷ್ಟು ರಾಜಕಾರಣಿಗಳು, ಸಾಮಾಜಿಕ ಹೋರಾಟಗಾರರು, ಕವಿಗಳು ಸೇರಿಕೊಂಡಿದ್ದಾರೆ. 'ಭ್ರಮೆ' ಒಂದು ಎಕ್ಸ್‌ಪೆರಿಮೆಂಟಲ್ ಕತೆಯಂತೆ ತೋರುತ್ತದೆ. 'ಭೂತ ಮತ್ತು ಭವಿಷ್ಯ' ಕತೆ ಒಂದು ಮನೋವೈಜ್ಞಾನಿಕ ಕತೆಯಂತೆ ಕಾಣಿಸುತ್ತದೆ. ಇನ್ನು 'ಕರಿಯಪ್ಪನ ಆರ್ತಧ್ಯಾನದ ಪರಿಣಾಮವು' ಕತೆಯಲ್ಲಿ ಹಳ್ಳಿಗಳಲ್ಲಿನ ಸಾಮರಸ್ಯ ಮತ್ತು ಕಳೆದುಹೋಗುತ್ತಿರುವ ಕಲೆ–ಸಾಂಸ್ಕೃತಿಕ ನೋಟಗಳನ್ನು ಬಿಂಬಿಸುತ್ತದೆ.

'ಮಾತನಾಡುವ ಮರ' ಕತೆಯ ಮೂಲಕ ಪರಿಸರದ ಮೇಲೆ ಆಗುತ್ತಿರುವ ದಾಳಿಯನ್ನು ಡೊಂಗಿ ಅಧಿಕಾರಿಯೊಬ್ಬನ ಮೂಲಕ ವಿಶ್ಲೇಷಿಸಲಾಗಿದೆ. ಇನ್ನು '...ಕಾಮೋನ್ಮುಖ ಆಹಾ ಯೋನಿಚಕಿತಾ!' ಕತೆಯಲ್ಲಿ ಕಾಮಕ್ಕೆ ಮನೋವೈಜ್ಞಾನಿಕ ಸ್ಪರ್ಶ ನೀಡಲಾಗಿದೆ. ಈ ಕತೆಗಳ ಮೂಲಕ ತ್ಯಾಗರಾಜ್ ಅವರಿಗಿರುವ ಅಪಾರ ಜ್ಞಾನ ಎದ್ದು ಕಾಣುತ್ತದೆ. ಸಾಮಾಜಿಕ ತಲ್ಲಣಗಳು ಮತ್ತು ದಟ್ಟವಾದ ವೈಯಕ್ತಿಕ ಅನುಭಗಳೂ ಕೂಡ ಇಲ್ಲಿ ಕೆಲಸ ಮಾಡಿರುವುದು ತೋರುತ್ತದೆ.



**ಕಾವ್ಯಕ್ಕೆ ಉರುಳು** (ಭಾಗ–೨) — *ಡಾ॥ ರಾಜಶೇಖರ ಮಠಪತಿ (ರಾಗಂ)*

**ಪುಟ : ೧೫೨** **ಬೆಲೆ : ರೂ. ೧೦೫**

**ಕಣ್ವ ಪ್ರಕಾಶನ,** ಬೆಂಗಳೂರು

ಕಾವ್ಯದ ಮೋಹ, ಸಮಾಜ ತಿದ್ದುವ ಹಂಬಲ ಮತ್ತು ವಿಚಿತ್ರ ಗೀಳಿನಿಂದ ಪ್ರಾಣ ಕಳೆದುಕೊಂಡ ೨೫ ಮಹಾವ್ಯಕ್ತಿಗಳ ಚಿತ್ರಣಗಳು ಈ ಕೃತಿಯಲ್ಲಿ ಅನಾವರಣಗೊಂಡಿವೆ. ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಕಾಣಿಸಿಕೊಂಡ ಡಾ.ರಾಜಶೇಖರ ಮಠಪತಿ (ರಾಗಂ) ಅವರ ಅಂಕಣ ಬರಹಗಳ ಎರಡನೇ ಭಾಗದ ಮಾಲಿಕೆ ಇದು. ಈ ವ್ಯಕ್ತಿಗಳು ಚರಿತ್ರೆಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಅಸಾಧಾರಣ ವ್ಯಕ್ತಿಗಳಾಗಿರುವುದರ ಜೊತೆಗೆ ಇವರನ್ನು ಸಮಾಜ ಕ್ರೂರವಾಗಿ ನಡೆಸಿಕೊಂಡ ವಿಷಯಗಳನ್ನು ಇಲ್ಲಿ ಕಟ್ಟಿಕೊಡಲಾಗಿದೆ. ಹಾಗಾಗಿ ರಾಗಂ ಅವರ ಆಯ್ಕೆಯೂ ಒಂದು ರೀತಿಯಲ್ಲಿ ಮೆಚ್ಚುವಂತಾಗಿದ್ದು, ಪ್ರತಿಯೊಂದು ಚಿತ್ರಣಕ್ಕೂ ಒಂದು ನುಡಿ ಟಿಪ್ಪಣಿ ಕೂಡ ಇರುವುದು ವಿಶೇಷ.

ಕೆಲವು ಚಿತ್ರಣಗಳು ನಮ್ಮ ಮನಸ್ಸನ್ನು ತಲ್ಲಣಿಸಿದರೆ ಕೆಲವು ತೀರಾ ಮರುಕ ಹುಟ್ಟಿಸುತ್ತವೆ. ಆಫ್ಘಾನಿಸ್ಥಾನದ ವ್ಯಾಪಾರಿಯೊಬ್ಬನನ್ನು ಮದುವೆ ಮಾಡಿಕೊಂಡು ಅಲ್ಲಿಗೆ ಹೋದ ಕಲ್ಕತ್ತಾದ ಸುಶ್ಮಿತಾ ಬ್ಯಾನರ್ಜಿ ಎಂಬ ಹೆಣ್ಣುಮಗಳು ಅಲ್ಲಿನ ತಾಲಿಬಾನಿಗಳಿಂದ ತಪ್ಪಿಸಿಕೊಂಡು ಕಲ್ಕತ್ತಾಗೆ ಹಿಂದಿರುಗಿ ಬಂದು ಮತ್ತೆ ಅಲ್ಲಿಗೆ ಹೋಗಿ ಹೆಣ್ಣುಮಕ್ಕಳಿಗಾಗಿ ಒಂದು ಆಸ್ಪತ್ರೆ ತೆರೆದು ತಾಲಿಬಾನಿಗಳ ಕೈಯಲ್ಲಿ ಹತ್ಯೆಯಾಗುತ್ತಾಳೆ. ಇತಿಹಾಸದ ಇಂಥ ವ್ಯಕ್ತಿಗಳ, ಘಟನೆಗಳ ಮೇಲೆ ಬೆಳಕು ಚೆಲ್ಲುವ ಮಹತ್ವದ ಕೃತಿ ಇದು.



**ವಿಷಾದ ನಿರೀಕ್ಷೆಯಲ್ಲಿ ನೆನಪುಗಳು** (ಅಂಕಣ ಬರಹದ ಕಟ್ಟು) — *ಸದಾಶಿವ ಮರ್ಜಿ*

**ಪುಟ : ೧೧೨** **ಬೆಲೆ : ರೂ. ೯೦**

**ಲಡಾಯಿ ಪ್ರಕಾಶನ,** ಗದಗ

ಸಾಮಾಜಿಕ ಸಮಾನತೆಯ ಆಶಯಗಳೊಂದಿಗೆ ಸೃಜನಶೀಲತೆಯನ್ನು ಬೆಳೆಸಿಕೊಂಡಿರುವ ಡಾ.ಬಾಬಾಸಾಹೇಬ್ ಅಂಬೇಡ್ಕರರ ಅನೇಕ ಕೃತಿಗಳು ಇತ್ತೀಚೆಗೆ ಕನ್ನಡದಲ್ಲಿ ಕಾಣಿಸಿಕೊಳ್ಳುತ್ತಿವೆ. ಅಂಬೇಡ್ಕರ್ ಅವರು ತಮ್ಮ ಕೊನೆ ಕಾಲದಲ್ಲಿ ಆತ್ಮಚರಿತ್ರೆ ಬರೆಯಲು ತಯಾರಿ ಮಾಡಿಕೊಂಡಿದ್ದರೂ ಅದನ್ನು ಬರೆಯದೇಹೋದರು. ಅವರ ಆಪ್ತ ಸಹಾಯಕ ನಾನಕ್‌ಚಂದ್ ರತ್ತು 'ಅಂಬೇಡ್ಕರ್: ಸ್ಮೃತಿ ಸಂಸ್ಕೃತಿ' (ಕನ್ನಡಕ್ಕೆ: ರಾಹು) ಕೃತಿಯನ್ನು ರಚಿಸಿ ಆ ಕೊರತೆಯನ್ನು ಸ್ವಲ್ಪಮಟ್ಟಿಗೆ ನೀಗಿಸಿದ್ದಾರೆ. ವಿಷಾದ ನಿರೀಕ್ಷೆಯಲ್ಲಿ ನೆನಪುಗಳು ಮತ್ತು ಇತರ ಐದು ಲೇಖನಗಳ ಈ ಸಣ್ಣ ಕೃತಿಯನ್ನು ಅಂಬೇಡ್ಕರ್ ತಮ್ಮ ಆತ್ಮಕತೆಯ ಒಂದು ಸಣ್ಣ ತುಣುಕಿನಂತೆ ಬಿಟ್ಟು ಹೋಗಿದ್ದಾರೆ. ಅದನ್ನು ಸದಾಶಿವ ಮರ್ಜಿಯವರು ಚೆನ್ನಾಗಿಯೇ ಕನ್ನಡಕ್ಕೆ ಅನುವಾದಿಸಿದ್ದಾರೆ. ಮೊದಲ ಎರಡು ಲೇಖನಗಳು ಪತ್ರಿಕೆಗಳಿಂದ ತೆಗೆದುಕೊಂಡಿದ್ದರೆ ಉಳಿದ ನಾಲ್ಕು ಲೇಖನಗಳು ಅಂಬೇಡ್ಕರ್‌ಅವರು ವಿವಿಧ ಕಡೆ ನೀಡಿದ ಭಾಷಣಗಳಾಗಿವೆ.

'ವಿಷಾದ ನಿರೀಕ್ಷೆಯಲ್ಲಿ – ನೆನಪುಗಳು' ಲೇಖನದಲ್ಲಿ ಅಂಬೇಡ್ಕರ್ ತಮ್ಮ ಬದುಕಿನ ಮೊದಲ ಭಾಗದಲ್ಲಿ ಅನುಭವಿಸಿದ ಅಸ್ಪೃಶ್ಯತೆ ಮತ್ತು ಅವಮಾನದ ನಾಲ್ಕು ಮುಖ್ಯ ಘಟನೆಗಳ ಜೊತೆಗೆ ಇತರ ಇಬ್ಬರು ದಲಿತ ಬಾಂಧವರು ಅನುಭವಿಸಿದ ಎರಡು ಘಟನೆಗಳನ್ನು ಬರೆದಿದ್ದಾರೆ. ಈ ಆರೂ ಘಟನೆಗಳು ಹಿಂದೂ ಹಳ್ಳಿಗಳಲ್ಲಿ ಹಿಂದೂ ಜನರು ಅಸ್ಪೃಶ್ಯರ ವಿರುದ್ಧ ನಡೆಸುವ ಸಾಮಾಜಿಕ ಅನ್ಯಾಯಗಳು ಅತಿರೇಕದ ಹುಚ್ಚುತನದಂತೆ ತೋರುತ್ತವೆ. ಸ್ವತಃ ಇಂಥ ನೋವುಗಳನ್ನುಂಡು, ದಲಿತ ಸಾಹಿತ್ಯ, ಹೋರಾಟಗಳಲ್ಲಿ ತೊಡಗಿಸಿಕೊಂಡಿರುವ ಸದಾಶಿವ ಮರ್ಜಿಯವರ ಅನುವಾದ ಅರ್ಥಪೂರ್ಣವಾಗಿದೆ.



**೨೧ನೇ ಕ್ರೋಮೋಝೋಮ್ ಮತ್ತು ಇತರ ಕಥನಗಳು** — *ಚಂಪ ಜೈಪ್ರಕಾಶ್*

**ಪುಟ : ೧೬೦** **ಬೆಲೆ : ರೂ. ೧೨೦**

**ಚಿಂತನ ಪುಸ್ತಕ,** ಬೆಂಗಳೂರು

ಇಲ್ಲಿರುವ ಐದು ಕಥನಗಳನ್ನು 'ವಿಶೇಷ ಮಕ್ಕಳ ಮೇಲಿನ ನಿರೂಪಣೆ' ಎಂದು ಕರೆಯಲಾಗಿದೆ. ಇದು ಕನ್ನಡದಲ್ಲಿ ಚಂಪ ಜೈಪ್ರಕಾಶ್‌ಅವರ ಮೊದಲನೇ ಪ್ರಯತ್ನ. ಇವು ಎರಡು ದಶಕಗಳಿಂದ ಮಾನಸಿಕ ಬೆಳವಣಿಗೆಯ ಸಮಸ್ಯೆಗಳಿರುವ ಮಕ್ಕಳು ಮತ್ತು ಅವರ ಪೋಷಕರ ನಡುವೆ ಸೇತುವೆಯಂತೆ ಕೆಲಸ ಮಾಡುತ್ತಿರುವ ಒಬ್ಬ ಮನೋಶಾಸ್ತ್ರಜ್ಞೆಯ ಅನುಭವದ ಕಥನಗಳು. ಚಂಪಾ, ಮಕ್ಕಳು ಮತ್ತು ಪೋಷಕರು ಹೊರಚೆಲ್ಲಲಾಗದೆ ಮನದಾಳದಲ್ಲಿ ಹೆಪ್ಪುಗಟ್ಟಿದ ಕಣ್ಣೀರಿನ ನಿಜ ಸಂಗತಿಗಳನ್ನು ಕಥನಗಳ ರೂಪದಲ್ಲಿ ಇಲ್ಲಿ ಕಟ್ಟಿಡಲಾಗಿದೆ ಎನ್ನುತ್ತಾರೆ.

'ಡೌನ್ ಸಿಂಡ್ರೋಮ್' ಸಮಸ್ಯೆ ಇರುವ ಮಗು ಹುಟ್ಟಿದಾಗಲೆ ಹೃದಯದಲ್ಲಿ ರಂಧ್ರ ಮತ್ತು ಅಂಗಾಂಗಗಳ ಊನದಿಂದ ಕೂಡಿರುತ್ತದೆ. ಆ ಕುಟುಂಬ ಧೃತಿಗೆಡದೆ ಆ ಮಗುವಿಗೆ ನಿರಂತರ ಶುಶ್ರೂಷೆ ಮಾಡಿ ಬೆಳೆಸುತ್ತದೆ. ಮಗು ಅಂತೂ ತನ್ನ ಎಲ್ಲಾ ಊನಗಳನ್ನು ಮೀರಿ ಬೆಳೆದು ನಿಲ್ಲುತ್ತದೆ. ಇನ್ನೊಂದು ಕತೆಯಲ್ಲಿ ತೀವ್ರ ಮಟ್ಟದ ಮೆದುಳಿನ ಪಾರ್ಶ್ವವಾಯುವಿನಿಂದ ಅದರ ಬೆಳವಣಿಗೆ ಕುಂಠಿತಗೊಳ್ಳುತ್ತದೆ. ಅದು ಕೂಡ ಛಲಬಿಡದೆ ಪೋಷಕರು ಮತ್ತು ವಿಶೇಷ ಶಾಲೆಯ ಶಿಕ್ಷಕರಿಂದ ಬೆಳೆದು ದೊಡ್ಡದಾಗುತ್ತದೆ. ಇಂಥ ಮನೋವೈಜ್ಞಾನಿಕ ವಿಷಯಕ್ಕೆ ಸಂಬಂಧಿಸಿದ ಕಥೆಗಳನ್ನು ಮನೋಶಾಸ್ತ್ರಜ್ಞೆ ಚಂಪಾ ಅವರು ಪರಿಣಾಮಕಾರಿಯಾಗಿ ಕಟ್ಟಿಕೊಟ್ಟಿದ್ದಾರೆ. ಇವು ಕಥೆಗಳಲ್ಲ ಯಶೋಗಾಥೆಗಳು.

**– ಡಾ॥ ಎಂ. ವೆಂಕಟಸ್ವಾಮಿ**

*ನಂ.೨೦೬, ಜೆ. ಜೆ. ಎಲಿಟೌ ಅಪಾರ್ಟ್‌ಮೆಂಟ್, ನ್ಯಾನಪ್ಪನಹಳ್ಳಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–೭೬*

# ದೈಹಿಕ ಮಿತಿಯನ್ನು ಮೆಟ್ಟಿನಿಂತ ಛಲಗಾತಿ ಡಾ|| ಮಹಾಜಬೀನ್

ಮಹಾಜಬೀನ್ ಪ್ರತಿದಿನವೂ ಮನೆಯಲ್ಲೇ ಅಭ್ಯಾಸ ಮಾಡುತ್ತ, ಅಕ್ಕಪಕ್ಕದ ಸಹಪಾಠಿಗಳೊಡನೆ ಚರ್ಚಿಸುತ್ತ ಅಭ್ಯಾಸ ಮುಂದುವರಿಸಿದಳು. ರಜೆ ಸಂದರ್ಭದಲ್ಲಿ ವೆಕೇಶನ್ ಕ್ಲಾಸ್ ನಡೆಸುತ್ತಿದ್ದ ಮುದ್ದೆಬಿಹಾಳದ ಗಣಿತಲೋಕಕ್ಕೆ ಒಂದು ತಿಂಗಳು ಹೋಗಿದ್ದಳು. ಪ್ರತಿದಿನವೂ ಮನೆಯಿಂದ ಶಾಲೆಯ ತನಕ ಅಂಬೆಗಾಲಲ್ಲೇ ಓಡಾಟ! ತಂದೆ ಎಂದರೆ ಜೀವವೇ ಬಾಯಿಗೆ ಬಂದಂತಾಗುತಿತ್ತು. ಮಗಳಲ್ಲಿ ಕೇಳಿದಾಗ "ಅಪ್ಪ, ಚಿಂತಿಸಬೇಡಿ. ರಸ್ತೆಯಲ್ಲಿ ಜಾಗ್ರತೆಯಿಂದಲೇ ಹೋಗುತ್ತೇನೆ. ಏನೂ ಅಪಘಾತವಾಗದಂತೆ ಎಚ್ಚರಿಕೆ ವಹಿಸುತ್ತೇನೆ. ಹಾಗೂ ಒಂದು ವೇಳೆ ಏನಾದರೂ ಆಗಿ ಸತ್ತುಹೋದರೆ ಪರವಾಗಿಲ್ಲ ಬಿಡು. ದಿನವೂ ಎಷ್ಟೋ ಜನರು ಸಾಯುತ್ತಾರೆ. ಅವರಲ್ಲಿ ನಾನೂ ಒಬ್ಬಳು" ಎನ್ನುತ್ತಿದ್ದಳು ಎಂದು ಕಣ್ಣೊರೆಸಿಕೊಳ್ಳುತ್ತಾರೆ ಮದಾರ್ಕರ್.

**ಈ** ವರ್ಷದ ಗಾಂಧಿ ಜಯಂತಿಯಂದು ಮುದ್ದೇಬಿಹಾಳ ತಾಲ್ಲೂಕಿನ ಬಿದರಕುಂದಿ ಗ್ರಾಮದಲ್ಲಿ ನಮ್ಮ ಸಹೋದ್ಯೋಗಿ ಅಬ್ದುಲ್ ರಹಮಾನ್ ಬಿದರಕುಂದಿ ತಮ್ಮ ತಂದೆಯವರ ಸ್ಮರಣಾರ್ಥ ಕಾರ್ಯಕ್ರಮವೊಂದನ್ನು ಹಮ್ಮಿಕೊಂಡಿದ್ದರು. ಆ ಕಾರ್ಯಕ್ರಮದಲ್ಲಿ ಡಾ|| ಮಹಾಜಬೀನ್‌ಗೆ ಸನ್ಮಾನ. ಆಕೆಯೇ ಆ ಕಾರ್ಯಕ್ರಮದ ಕೇಂದ್ರ ಬಿಂದು. ಏಕೆ ಎನ್ನುವಿರಾ ? ಆಕೆ ತನ್ನ ಮೂರನೇ ವಯಸ್ಸಿಗೆ ವೈದ್ಯರ ತಪ್ಪಿನಿಂದಲೋ, ಪೋಲಿಯೋ ಕಾರಣದಿಂದಲೋ ಕಾಲನ್ನು ಕಳೆದುಕೊಂಡವಳು. ಹತ್ತನೇ ತರಗತಿ ಮುಗಿಯುವವರೆಗೆ ಶಾಲೆಗೆ ಹೋಗದೆ ಮನೆಯಲ್ಲೇ ಕುಳಿತು ಕಲಿತವಳು. ಕಲಿಯಲೇಬೇಕೆನ್ನುವ ತನ್ನ ಧೀಶಕ್ತಿಯಿಂದ ಕಲಿಕೆಗೆ ಎದುರಾದ ಅಡೆತಡೆಗಳನ್ನೆಲ್ಲ ಎದುರಿಸಿ ಗೆದ್ದವಳು. ಯಶಸ್ವಿಯಾಗಿ ಎಂಬಿಬಿಎಸ್ ಪದವಿ ಮುಗಿಸಿ ಮುಂದೆ ಎಂ.ಡಿ. ಪದವಿಯನ್ನು ಚಿನ್ನದ ಪದಕದೊಂದಿಗೆ ತನ್ನದಾಗಿಸಿ ಕೊಂಡವಳು. ಈಗ ಬಾಗಲಕೋಟೆಯ ಪ್ರತಿಷ್ಠಿತ ಎಸ್. ನಿಜಲಿಂಗಪ್ಪ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಚರ್ಮರೋಗ ವಿಭಾಗದ ಸಹಾಯಕ ಪ್ರಾಧ್ಯಾಪಕಿಯಾಗಿ ಸೇವೆ ಸಲ್ಲಿಸುತ್ತಿರುವವರು. ಆಸೆ ಕಂಗಳಿಂದ ಜಗತ್ತನ್ನು ನೋಡುತ್ತ, ಹೆತ್ತಪ್ಪನ ಆಸರೆಯಿಂದ ಬದುಕನ್ನು ಎದುರಿಸುತ್ತ, ವೀಲ್‌ಚೇರ್‌ನಲ್ಲಿ ತನ್ನ ದಿನಗಳನ್ನು ಕಳೆಯುತ್ತ ಬದುಕಿಗೆ ಆದರ್ಶವಾಗಿ ಬದುಕುತ್ತಿರುವವರು. ಮುಂದೆ ಇಡೀ ಭಾರತವನ್ನು ಸುತ್ತಿ ಮಾರಣಾಂತಿಕ ಕಾಯಿಲೆಗಳಿಂದ ನರಳುತ್ತಿರುವವರಿಗೆ ಸಂಜೀವಿನಿ ಯಾಗಬೇಕೆಂಬ ಹಂಬಲದಲ್ಲಿರುವವರು.

ಸನ್ಮಾನಕ್ಕೆ ಉತ್ತರಿಸುತ್ತ ಇಂದಿನ ಎಳೆಯರಿಗೆ ಅವರು ನೀಡಿದ ಸಂದೇಶ ಚೇತೋಹಾರಿಯಾಗಿತ್ತು. ಬದುಕಿನಲ್ಲಿ ಅಸಾಧ್ಯ ಎಂಬುದೇ ಇಲ್ಲ. ಕಷ್ಟಪಟ್ಟು ದುಡಿದರೆ ಇಷ್ಟಪಟ್ಟದ್ದು ಸಿಕ್ಕೇ ಸಿಗುತ್ತದೆ. ಅದಕ್ಕೆ ನಾನೇ ಉದಾಹರಣೆ ಎನ್ನುವಾಗ ಬೆಳಗುತ್ತಿದ್ದ ಅವರ ಕಣ್ಣುಗಳು ತಮ್ಮ

**ಎಸ್. ನಾಗರಾಜು**

ಯಶೋಗಾಥೆಯನ್ನು ಹೇಳುತ್ತಿದ್ದವು. ತನ್ನದು ಬಸವ ಕಾಯಕ ಎನ್ನುವಲ್ಲಿ ಅವರಿಗಿರುವ ಶರಣ ಸಂಸ್ಕೃತಿಯ ಮೇಲಿನ ಆತ್ಮಾಭಿಮಾನ ಸೋಮಾರಿಗಳಿಗೆ ಹೊಡೆದ ಚಾಟಿಯೇಟಿನಂತಿತ್ತು.

ಯುವಜನರಿಗೆ ಮಾಡುವ ವ್ಯಕ್ತಿತ್ವ ವಿಕಸನ ಕಾರ್ಯಕ್ರಮಗಳಲ್ಲಿ ಮಹತ್ತನ್ನು ಸಾಧಿಸಿದ ವಿಕಲ ಚೇತನರನ್ನು ಉದಾಹರಿಸುವಾಗ ಇವರು ಸಜೀವ ಉದಾಹರಣೆಯಾಗಿದ್ದಾರೆ. ಡಾ॥ ಮಹಾಜಬೀನ್‌ರ ವ್ಯಕ್ತಿತ್ವದ ವಿವರಗಳನ್ನು ಅರಿಯಲು ಅವರ ತಂದೆಯವರಾದ ಮದಾರ್ಕರ್ ಸಾಹೇಬ ಪಾಟೀಲರ ಸಂದರ್ಶನ ಮಾಡಿದೆ. ಬಹಳಷ್ಟು ಸಂಕೋಚದಿಂದಲೇ ಸುರಿಯುತ್ತಿರುವ ಕಣ್ಣೀರ ಧಾರೆಯೊಡನೆ ಮಗಳ ಬದುಕಿನ ಚಿತ್ರಣವನ್ನು ಅರಳಿಸಿದರು.

ಮದಾರ್ಕರ್ ಸಾಹೇಬ ಪಾಟೀಲರು ತುಂಬು ಕುಟುಂಬದಿಂದ ಬಂದವರು. ಬಾಲ್ಯದ ದಿನಗಳಲ್ಲಿ ಬಡತನ ಅವರನ್ನು ಬಹುವಾಗಿ ಕಾಡುತ್ತಿತ್ತು. ವಿಜಯಪುರ ಜಿಲ್ಲೆಯ ದೇವ ಹೆಪ್ಪರಗಿಯ ಸಮೀಪದ ಶಿವಣಗಿಯವರಾದ ಇವರು ಕಷ್ಟದಲ್ಲೇ ಓದನ್ನು ಮುಂದುವರಿಸಿದರು. ಎಸ್. ಬಿ. ಕಲಾ ಕಾಲೇಜಿನಿಂದ ಕಲಾ ಪದವಿಯನ್ನು, ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಪದವಿಯನ್ನು ಪಡೆದರು. ಕಾನೂನಿನಲ್ಲೂ ಪದವಿ ಪಡೆದರು. ಕೆ.ಎ.ಎಸ್.ನಲ್ಲಿ ಉತ್ತೀರ್ಣರಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಾಗಿ ಆಯ್ಕೆಯಾದರೂ ಮುಂದೆ ಬೇರೆ ಬೇರೆ ಕಾರಣಗಳಿಂದ ಬಿಡುಗಡೆಯಾದ ಹೊಸ ಆಯ್ಕೆ ಪಟ್ಟಿಯಲ್ಲಿ ಇವರ ಹೆಸರಿರಲಿಲ್ಲ. ಮುಂದೆ ಪ್ರಥಮ ದರ್ಜೆ ಸಹಾಯಕರಾಗಿ ಆಯ್ಕೆಯಾಗಿ ವೃತ್ತಿಗೆ ಸೇರಿಕೊಂಡರು.

೧೯೭೭ರಲ್ಲಿ ಸಿರಿವಂತ ಮನೆತನದ ಶಾಪುರಿ ಬೇಗಂರವರನ್ನು ವಿವಾಹವಾಗಿ ಸಾಂಸಾರಿಕ ಬದುಕಿಗೆ ಕಾಲಿರಿಸಿದರು. ಕೃಷ್ಣ ಮೇಲ್ದಂಡೆ ಯೋಜನೆಯಲ್ಲಿ ಸಿಂದಗಿ ತಾಲ್ಲೂಕಿನ ರಾಂಪುರದಲ್ಲಿ ಲೆಕ್ಕಾಧಿಕಾರಿಯಾಗಿ ವೃತ್ತಿ. ನಾಲ್ಕು ಮಕ್ಕಳಾದರು. ಕೊನೆಯವಳೇ ೧೯.೧೧.೧೯೮೭ರಲ್ಲಿ ಜನಿಸಿದ ಮಹಾಜಬೀನ್.

ಈ ಕೊನೆಯ ಮಗಳಿಗೆ ಆಗ ಮೂರು ವರ್ಷ. ವಿಪರೀತ ಜ್ವರದಿಂದ ಆಕೆ ನರಳುತ್ತಿದ್ದ ದಿನಗಳವು. ಮದಾರ್ಕರ್ ಸಾಹೇಬರು ಆಫೀಸಿನಲ್ಲಿ ಒಬ್ಬರೇ. ವಿಪರೀತ ಕೆಲಸ. ಅವರೊಡನೆ ಎ. ಜಿ. ಸಾಹೇಬರಿಂದ ಆಫೀಸ್ ಇನ್ಸ್‌ಪೆಕ್ಷನ್ ಬೇರೆ! ಮನೆಗೆ ಹೋಗುವಂತಿಲ್ಲ. ಆಫೀಸಿನಲ್ಲೂ ಇರುವಂತಿಲ್ಲ. ಕೊನೆಗೆ ತಮ್ಮ ಶ್ರೀಮತಿಯವರಿಗೆ ಮಗಳನ್ನು ಡಾ॥ ಹಿರೇಗೌಡರಲ್ಲಿ ಕರೆದುಕೊಂಡು ಹೋಗು, ಅಲ್ಲಿ ಇನ್ನೊಬ್ಬರು ಡಾಕ್ಟರಿದ್ದಾರೆ. ಅವರಲ್ಲಿ ಮಾತ್ರ ಯಾವ ಕಾರಣಕ್ಕೂ ಕರೆದುಕೊಂಡು ಹೋಗಬೇಡ ಎಂದು ಎಚ್ಚರಿಕೆ ನೀಡಿ ಮಗಳೊಡನೆ ಹೋಗಹೇಳಿದರು.

ಮಗಳೊಡನೆ ಹೋಗಿದ್ದ ಪತ್ನಿ ಸಂಜೆ ಏಳು ಗಂಟೆಯಾದರೂ ಹಿಂದಿರುಗಿ ಬಂದಿರಲಿಲ್ಲ. ಗಾಬರಿಗೊಂಡು ಮನೆಯಿಂದ ಸುಮಾರು ಆರೇಳು ಕಿ.ಮೀ. ದೂರದಲ್ಲಿರುವ ಸಿಂದಗಿಯ ಆಸ್ಪತ್ರೆಗೆ ಆ ರಾತ್ರಿಯಲ್ಲೂ ಒಬ್ಬರೇ ಧಾವಿಸಿದರು. ಆಗ ತಿಳಿದುಬಂದ ಕತೆಯಿದು.

ಮಗಳೊಡನೆ ಹೋಗಿದ್ದ ಪತ್ನಿ ಡಾ॥ ಹಿರೇಗೌಡರನ್ನು ಕಾಣಲು ಹೋದಾಗ ಅಲ್ಲಿ ವಿಪರೀತ ರಶ್. ಕಾದು ಕಾದು ರೋಸಿಹೋದರು. ಮಗಳ ಜ್ವರ ಕ್ಷಣ ಕ್ಷಣಕ್ಕೂ ಉಲ್ಬಣಿಸುತ್ತಿತ್ತು. ಬೇರೆ ದಾರಿಯೇ ಕಾಣದೆ ಅವರು ಪತಿ ಯಾವ ವೈದ್ಯರ ಬಳಿ ಹೋಗಲೇ ಬೇಡ ಎಂದು ಎಚ್ಚರಿಸಿದ್ದರೋ ಅದೇ ವೈದ್ಯರಲ್ಲಿಗೆ ಹೋದರು. ಮಗುವನ್ನು ಪರೀಕ್ಷಿಸಿ ಆಸ್ಪತ್ರೆಗೆ ದಾಖಲು ಮಾಡಿಕೊಂಡರು ಆ ವೈದ್ಯರು.

ವಿಷಯ ತಿಳಿದಂತೆ ಮದಾರ್ಕರ್ ಸಾಹೇಬರು ಹತಾಶರಾದರು. ಪತ್ನಿಯ ಅವಸರಕ್ಕೆ ದುಃಖಿಸಿದರು. ವೈದ್ಯರು ಮಗುವಿಗೆ ನರಗಳ ದೌರ್ಬಲ್ಯ ಇದೆ ಎಂದು ತಿಳಿಸಿ ಯಾವುದೋ ಮಾತ್ರೆ ತರಲು ಚೀಟಿ ಬರೆದುಕೊಟ್ಟರು. ಅವು ವಿಪರೀತ ಬೆಲೆಯ ಮಾತ್ರೆಗಳು. ಹಣವೂ ಇರಲಿಲ್ಲ. ಮಾತ್ರೆ ತರಲಾಗದೆ ನಿಸ್ಸಹಾಯಕರಾದರು. ಮಗುವಿಗೆ ಏನೂ ಆಗದಿರಲಿ ಎಂದು ನಿರಂತರ ಪ್ರಾರ್ಥಿಸತೊಡಗಿದರು.

ಮಗುವನ್ನು ದಾಖಲೇನೋ ಮಾಡಿದ್ದರು. ಆದರೆ ರಾತ್ರಿಯಿಡೀ ನೋಡಿಕೊಳ್ಳುವವರು ಯಾರೂ ಇರಲಿಲ್ಲ. ಮಗುವಿನ ಜ್ವರ ಕ್ಷಣ ಕ್ಷಣಕ್ಕೂ ಹೆಚ್ಚುತ್ತಿತ್ತು. ವಿಪರೀತ ನೋವೆಂದು ಅಳುತ್ತಿತ್ತು. ತಂದೆ ಅಸಹಾಯಕರಾಗಿದ್ದರು. ಕೊನೆಗೆ ನರ್ಸ್ ಬಂದರು. ನೋವಿನ ಉಪಶಮನಕ್ಕೆಂದು ಐದಾರು ಇಂಜೆಕ್ಷನ್‌ಗಳನ್ನು ಕಾಲು–ಕೈಗಳಿಗೆ ನೀಡಿದರು. ಬಲಗಾಲಿಗೆ ಸೋಂಕು ತಗುಲಿ ವಿಪರೀತ ನರಳುತ್ತಿದ್ದ ಮಗು ಇಂಜೆಕ್ಷನ್‌ನ ನೋವಿಗೆ ಮತ್ತೆ ಬೊಬ್ಬೆ ಇಟ್ಟಿತು. ಕೆಲವೇ ನಿಮಿಷಗಳಲ್ಲಿ ಮಗುವಿಗೆ ಬಲಗೈ ಮತ್ತು ಸೊಂಟದ ಸ್ವಾಧೀನ ತಪ್ಪಿತು. ನರಳಾಟ ಹೇಳತೀರದಾಯಿತು. ತಂದೆ ಕಂಗೆಟ್ಟರು.

ಮತ್ತೆ ಮತ್ತೆ ವೈದ್ಯರಲ್ಲಿ ಧಾವಿಸಿ ವಿನಂತಿಸಿದರು. ಒಮ್ಮೆ ದಯೆ ತೋರಿ ಬಂದ ವೈದ್ಯರು ಮಗುವನ್ನು ಪರೀಕ್ಷಿಸಿದರು. ತಕ್ಷಣ ಬಿಜಾಪುರ (ವಿಜಯಪುರ)ಕ್ಕೆ ತಜ್ಞ ವೈದ್ಯರಲ್ಲಿ ಕೊಂಡೊಯ್ಯಲು ಆದೇಶಿಸಿದರು. ಕಾವಲಿಯಲ್ಲಿ ಬೇಯುತ್ತಿದ್ದವರಿಗೆ ಬೆಂಕಿಯಲ್ಲಿ ಬಿದ್ದ ಬೇಗೆ. ಹೇಗೋ ಅವರಿವರಲ್ಲಿ ಅಂಗಲಾಚಿ ಬಿಜಾಪುರಕ್ಕೆ ಮಗುವನ್ನು ಒಯ್ದು ತಜ್ಞ ವೈದ್ಯರನ್ನು ಕಂಡರು. ಆದರೆ ಮಗುವನ್ನು ಪರೀಕ್ಷಿಸಿದ ವೈದ್ಯರು ಕೈಚೆಲ್ಲಿದರು. ಮಗು ಶಾಶ್ವತ ಅಂಗವಿಹೀನಳಾದಳು.

ಕಡುಕತ್ತಲಲ್ಲಿದ್ದವರಿಗೆ ಮಿಣುಕು ಬೆಳಕೇ ಆಸರೆ. ನೆಂಟರು, ಪರಿಚಯಸ್ಥರು ಮಾಹಿತಿ ನೀಡಿದ ಎಲ್ಲ ವೈದ್ಯರಲ್ಲಿಗೆ ಮಗುವನ್ನು ಕರೆದೊಯ್ದರು. ಕಾರವಾರಕ್ಕೂ

## ಬೆತ್ತಲ ಬದುಕು




ಅಡುಗೆಮನೆ ನೀರುಮನೆ ಕಿರುಮನೆ
ಊಟದ್ದು ? ಮಲಗಲು ? ಅಂಗಳವಿನ್ನೇನು ?
ಅಲ್ಲೆ ಚೆಲ್ಲಿಕೊಂಡಿದೆ ಕೊಟ್ಟಿಗೆ !

ವರ್ಷದಲೊಮ್ಮೆ ಕೆಲವೆಡೆ ಇಮ್ಮೆ
ಬಂದರೆ ಹೊಲಗದ್ದೆ ಮನೆಗೆ
ಮೂಲೆಯಲೊಂದಿಷ್ಟು ಕಾಳು
ಮನದಲೂ ಅಂತೆ, ಆಸೆಗಳ ಗೂಡು !

ತೀರದ ದರ್ದಿಗೆ ಬಂದದ್ದು ಬಂದಂತೆ ಖಾಲಿ
ಉಳಿದದ್ದು:
ಅದೇ ಕೊಣವೆ, ನೆಲವ ಕೆರೆಯಲು;
ಅದೇ ಪೊರಕೆ, ಅಂಗಳ – ಕೊಟ್ಟಿಗೆ ಗುಡಿಸಲು

ಹಳ್ಳ ಹೊಳೆ ನದಿ ಬಾವಿ
ಚಿನಿವಾರನ ಮನೆಮುಂದಿನ ಬಚ್ಚಲು
ಕೊಚ್ಚಿಬಂದ ಮಣ್ಣಲಿ
ಚಿನ್ನದ ಕಣ ಹುಡುಕಲು !

**ಡಾ॥ ಬೋರೇಗೌಡ ಚಿಕ್ಕಮರಳಿ**
# ೫೮/೭, ಸಿದ್ಧಿ, ಶಾಂತಿನಗರ ೨ನೇ ಹಂತ, ಪಾಂಡವಪುರ – ೫೭೧೪೩೪ ಮಂಡ್ಯ ಜಿಲ್ಲೆ



ಕರೆದೊಯ್ದು ಅಲ್ಲಿನ ನಾಟಿ ವೈದ್ಯರಲ್ಲಿ ಮಸಾಜ್, ಔಷಧಿ ಮಾಡಿಸಿದರು. ಹದಿನೈದು ಇಪ್ಪತ್ತು ದಿನಗಳ ಕಾಲ ಚಿಕಿತ್ಸೆ ಕೊಡಿಸಿದರೂ ಯಾವುದೇ ಪ್ರಯೋಜನ ವಾಗಲಿಲ್ಲ. ಕಾಲು ಬರುವ ಭರವಸೆಯೇ ಹೊರಟು ಹೋಯಿತು. ಇದ್ದಬದ್ದ ಹಣವೂ ಖರ್ಚಾಯಿತು. ಹೀಗೆ ಸತತ ಮೂರ್‍ನಾಲ್ಕು ತಿಂಗಳು ಪ್ರಯತ್ನಿಸಿದರು. ಕೊನೆಗೂ ಹೋಗಿದ್ದ ಮಗುವಿನ ಕೈ ಹಾಗೂ ಸೊಂಟದಲ್ಲಿ ಸ್ವಲ್ಪ ಚಲನೆ ಕಂಡುಬಂದಿತು. ಆದರೆ ಕಾಲು ಬರಲೇ ಇಲ್ಲ. ಕಾಲಿನ ಆಪರೇಷನ್ ಮಾಡಿಸೋಣವೆಂದರೆ ಹಣವಿರಲಿಲ್ಲ.

ದಿನಗಳು ಉರುಳುತ್ತಿದ್ದಂತೆ ಮಗಳು ಬೆಳೆಯುತ್ತಿದ್ದಳು. ಎಲ್ಲ ಸೇವೆಗೂ ತಂದೆಯೇ ಮುಂದಾಗುತ್ತಿದ್ದರು. ತಂದೆ ತಾನು ಮಗಳ ಸೇವಕ, ಅವಳ ಬೇಡಿಕೆಗಳನ್ನು ಈಡೇರಿಸುವುದೇ ತನ್ನ ಕರ್ತವ್ಯ ಎಂಬ ನಿರ್ಧಾರಕ್ಕೆ ಬಂದರು. ಅನೇಕ ವರ್ಷಗಳ ಕಾಲ ಅದರ ಇಡೀ ಪ್ರಪಂಚವೆಂದರೆ ತಂದೆ ಮಾತ್ರ. ತಂದೆ ಇರದಾಗ ಮಗು ಮೂಕ ಸಂಕಟ ಅನುಭವಿಸುತ್ತಿತ್ತು. ಕೆಲಸಕ್ಕೆ ಹೋದ ತಂದೆ ಬರುವ ತನಕ ಊಟವನ್ನೂ ಮಾಡುತ್ತಿರಲಿಲ್ಲ. ತಂದೆಯೇ ಊಟ ಮಾಡಿಸಬೇಕು. ಇಲ್ಲವೆಂದರೆ ಉಪವಾಸ. ಮಗು ಸ್ವಲ್ಪ ದೊಡ್ಡದಾದಾಗ ಸ್ನೇಹಿತರು ಆಕೆಯನ್ನು ಶಾಲೆಗೆ ಸೇರಿಸುವಂತೆ ಸಲಹೆ ನೀಡಿದರು.

ಮಗುವಿಗೆ ಆಸೆ, ಆದರೆ ತಂದೆಗೆ ಧೈರ್ಯವಿಲ್ಲ! ಆ ಸಮಯದಲ್ಲೇ ಮಗುವನ್ನು ದಢಾರ ಮಾರಿ ಆಕ್ರಮಿಸಿತು. ಜ್ವರ ಜ್ವರ ಜ್ವರ. ತಂದೆ ಮಗುವನ್ನು ಎತ್ತಿಕೊಂಡು ಸಿಂದಗಿಯ ಡಾ॥ ಹಿರೇಗೌಡರಲ್ಲಿ ಧಾವಿಸಿದರು. ಚಿಕಿತ್ಸೆ ನಡೆಯಿತು. ಮಗು ಉಳಿಯುವ ಭರವಸೆ ಯಾರಲ್ಲೂ ಇರಲಿಲ್ಲ. ಮಗುವಿನ ಬಗ್ಗೆ ತಂದೆಯ ಸ್ನೇಹಿತರು ವಿಶ್ವಾಸ, ಅನುಕಂಪ ತೋರಲಾರಂಭಿಸಿದರು. ತಮ್ಮಿಂದಾಗುವ ಸಹಾಯ ಮಾಡುವ ಭರವಸೆ ನೀಡಿದರು. ಎಲ್ಲರ ಒತ್ತಾಯದಿಂದ ಮಗುವನ್ನು ಶಾಲೆಗೆ ಸೇರಿಸಿದರು. ಆದರೆ ಒಂದು ದಿನವೂ ಮಗು ಶಾಲೆಗೆ ಹೋಗಲೇ ಇಲ್ಲ.

ಮಗಳಿಗೆ ಒಂಭತ್ತು ನಡೆಯುತ್ತಿತ್ತು. ಶಾಲೆಯ ಲೆಕ್ಕದಲ್ಲಿ ಅವಳೀಗ ನಾಲ್ಕನೆಯ ತರಗತಿ. ಮನೆಯಲ್ಲೇ ಇದ್ದವಳು ದಿನವೂ ಮಕ್ಕಳ ಓಡಾಟ ಗಮನಿಸುತ್ತಿದ್ದಳು. ತಂದೆಯಲ್ಲಿ ದಿನವೂ ತಾನು ಶಾಲೆಗೆ ಹೋಗಬೇಕೆಂಬ ಆಸೆ ವ್ಯಕ್ತಪಡಿಸುತ್ತಿದ್ದಳು. ಅವಳಲ್ಲಿ ಯಾವ ಪುಸ್ತಕಗಳೂ ಇರಲಿಲ್ಲ. ತಾನು ಮಗಳ ಸೇವಕ, ಯಾವುದೋ ಜನ್ಮದ ಫಲವನ್ನು ಈಗ ಉಣ್ಣುತ್ತಿರುವೆನೆಂಬ ದೃಢ ನಿಲುವಿನಲ್ಲಿದ್ದ ತಂದೆ ತಕ್ಷಣ ಪೇಟೆಗೆ ಹೋಗಿ ಮಗಳಿಗೆ ಬೇಕಾದ ಪುಸ್ತಕಗಳನ್ನೆಲ್ಲ ತಂದರು. ಆಗೊಮ್ಮೆ ಅರಳಿದ್ದ ಮಗಳ ಕಂಗಳಿನ ಸವಿ ನೆನಪು ತಂದೆಯ ಸ್ಮೃತಿಯಲ್ಲಿ ಈಗಲೂ ಹಚ್ಚಹಸಿರಾಗಿದೆ.

ಮಗಳನ್ನು ಅವಳಾಸೆಯ ಅನುಸಾರ ರಾಂಪುರದ ಸರಕಾರಿ ಪ್ರಾಥಮಿಕ ಶಾಲೆಗೆ ಸೇರಿಸಲಾಯಿತು. ಅವಳಿಗೆ ಓದುವುದರಲ್ಲಿ ವಿಪರೀತ ಆಸಕ್ತಿ. ತಾನೇನಾದರೂ ಸಾಧಿಸಿ ತೋರಿಸಬೇಕೆನ್ನುವ ಛಲವೂ ಅವಳಲ್ಲಿ ಗೋಚರಿಸತೊಡಗಿತು. ಬೆಳಗ್ಗೆ ಕೆಲಸಕ್ಕೆ ಹೋಗುವಾಗ ಮಗಳನ್ನು ಹೊತ್ತುಕೊಂಡು ಹೋಗಿ ಶಾಲೆಯಲ್ಲಿ ಬಿಡುತ್ತಿದ್ದ ಅಪ್ಪ ಸಂಜೆಯ ಕೆಲಸ ಮುಗಿಸಿ ಹಿಂದಿರುಗಿ ಬರುವಾಗ ಮತ್ತೆ ಅವಳನ್ನು ಹೊತ್ತುಕೊಂಡು ಹಿಂದಿರುಗುತ್ತಿದ್ದರು. ನಾಲ್ಕನೆಯ ತರಗತಿಯ ಅಂತಿಮ ಪರೀಕ್ಷೆಯಲ್ಲಿ ಮಗಳು ತರಗತಿಗೇ ಮೊದಲನೆಯ ಸ್ಥಾನ ಪಡೆದು ಐದನೇ ತರಗತಿಗೆ ಉತ್ತೀರ್ಣಳಾದಳು.



## ಗಂಡು

ಈ ಸಮಾಜದಿ ಗಂಡಿಗೇಕೆ ಸ್ಥಾನ ?  
ಹೆಣ್ಣು ಕೇವಲ ನಿತ್ರಾಣವೇನು ?!  
ನೆನಪಿರಲಿ ಹೆಣ್ಣು ಸಮಾಜದ ಕಣ್ಣು  
ಹೆಣ್ಣಿನಿಂದ ಬಾಳ ವೃಕ್ಷಕ್ಕಾಗುವುದು ಹಣ್ಣು !

**ಶೋಭಾ ಪ್ರಮೋದ್**  
ಮನ್‌ಗಾಂವ್ – ೪೦೨ ೧೦೪

ಕಷ್ಟಗಳು ಒಟ್ಟೊಟ್ಟಾಗಿಯೇ ಬರುತ್ತವೆ ಎಂಬ ಮಾತಿದೆ. ಹಾಗೆ ಮಗಳು ಐದನೆಯ ತರಗತಿಗೆ ಬರುತ್ತಿದ್ದಂತೆ ತಂದೆಯವರಿಗೆ ಆಲಮಟ್ಟಿಯಿಂದ ಮಟ್ಟಿಹಾಳ ಗ್ರಾಮಕ್ಕೆ ವರ್ಗವಾಯಿತು. ಸರ್ಕಾರಿ ಕೆಲಸ, ಬಿಡುವಂತಿಲ್ಲ. ಸಂಸಾರ ನಿರ್ವಹಣೆಗೆ ಕೆಲಸ ಮಾಡಲೇಬೇಕಾದ ಅನಿವಾರ್ಯತೆ. ಆದರೆ ಮಗಳನ್ನು ಕರೆದುಕೊಂಡು ಹೋಗಿಬರಲು ಸಾಧ್ಯವೇ ಇರದಂಥ ದುಃಸ್ಥಿತಿ. ಮಗಳು ಶಾಲೆಗೇನೋ ದಾಖಲಾದಳು. ಆದರೆ ಶಾಲೆಗೆ ಹೋಗಲೇ ಇಲ್ಲ. ಮನೆಯಲ್ಲೇ ಅಭ್ಯಾಸ ಮಾಡತೊಡಗಿದಳು. ಶಾಲೆಗೆ ಹೋಗದಿದ್ದರೂ ಐದು, ಆರು ಹಾಗೂ ಏಳನೆಯ ತರಗತಿಯ ಎಲ್ಲ ಪರೀಕ್ಷೆಗಳಲ್ಲೂ ಅವಳೇ ಫಸ್ಟ್ ರ್‍ಯಾಂಕ್!

ಮುಂದೆ ಎಲ್ಲರ ಒತ್ತಾಯದ ಮೇರೆಗೆ ಮದಾರ್ಕರ್ ಮಗಳನ್ನು ಬಿಜಾಪುರದ ಬಿ.ಎಲ್. ದರ್ಬಾರ್ ಸ್ಕೂಲಿಗೆ ಸೇರಿಸುವ ಸಾಹಸ ಮಾಡಿದರು. ಸರಿಯಾಗಿ ಶಾಲೆಗೆ ಬರಲೇಬೇಕೆಂಬ ಗುರುಗಳ ಎಚ್ಚರಿಕೆಯ ಮಾತನ್ನು ಆಲಿಸಿದರು. ಆದರೆ ಮಗಳನ್ನು ಶಾಲೆಗೆ ಕರೆದುಕೊಂಡು ಹೋಗಲು ಸಾಧ್ಯವಾಗಲೇ ಇಲ್ಲ. ಪರೀಕ್ಷೆ ಬಂದಾಗ ಹಾಜರಾತಿ ಕೊರತೆ ತೋರಿಸಿ ಪರೀಕ್ಷೆ ಬರೆಯಲು ಅವಕಾಶವನ್ನೇ ನೀಡದೆ ಶಾಲೆಯವರು ಸತಾಯಿಸಿದರು. ಅಂತೂ ಅತ್ತೂ ಕರೆದು ಒಪ್ಪಿಸಿದ್ದಾಯಿತು. ಅಂತಿಮ ಪರೀಕ್ಷೆಯಲ್ಲಿ ಶಾಲೆಗೆ ಫಸ್ಟ್ ರ್‍ಯಾಂಕ್ ಬಂದಳು.

ಮರುವರ್ಷ ಬೇರೆ ಶಾಲೆಗೆ ಸೇರಿಸಬೇಕೆಂದು ವರ್ಗಾವಣೆ ಪತ್ರಕ್ಕೆ ತಂದೆಯವರು ವಿನಂತಿಸಿದರು. ನಿರಾಕರಿಸಿದ ಗುರುಗಳೆಲ್ಲರೂ, “ಮನೆಯಲ್ಲೆ ಕುಳಿತು ಓದಲಿ. ಹಾಜರಿಯನ್ನು ಕೊಡುತ್ತೇವೆ. ಓದಬೇಕಾದ ಎಲ್ಲವನ್ನೂ ನಾವೇ ಕೊಡುತ್ತೇವೆ” ಎನ್ನುತ್ತ ಎಲ್ಲ ಸಹಕಾರ ನೀಡುವ ಭರವಸೆ ನೀಡಿದರು. ಮಹಾಜಬೀನ್ ಪ್ರತಿದಿನವೂ ಮನೆಯಲ್ಲೇ ಅಭ್ಯಾಸ ಮಾಡುತ್ತ, ಅಕ್ಕಪಕ್ಕದ ಸಹಪಾಠಿಗಳೊಡನೆ ಚರ್ಚಿಸುತ್ತ ಅಭ್ಯಾಸ ಮುಂದುವರಿಸಿದಳು. ರಜೆ ಸಂದರ್ಭದಲ್ಲಿ ವೆಕೇಶನ್ ಕ್ಲಾಸ್ ನಡೆಸುತ್ತಿದ್ದ ಮುದ್ದೇಬಿಹಾಳದ ಗಣಿತ ಲೋಕಕ್ಕೆ ಒಂದು ತಿಂಗಳು ಹೋಗಿದ್ದಳು. ಪ್ರತಿದಿನವೂ ಮನೆಯಿಂದ ಶಾಲೆಯ ತನಕ ಅಂಬೆಗಾಲಲ್ಲೇ ಓಡಾಟ ! ತಂದೆ ಎಂದರೆ ಜೀವವೇ ಬಾಯಿಗೆ ಬಂದಂತಾಗುತಿತ್ತು. ಮಗಳಲ್ಲಿ ಕೇಳಿದಾಗ “ಅಪ್ಪ, ಚಿಂತಿಸಬೇಡಿ. ರಸ್ತೆಯಲ್ಲಿ ಜಾಗ್ರತೆಯಿಂದಲೇ ಹೋಗುತ್ತೇನೆ. ಏನೂ ಅಪಘಾತವಾಗದಂತೆ ಎಚ್ಚರಿಕೆ ವಹಿಸುತ್ತೇನೆ. ಹಾಗೂ ಒಂದು ವೇಳೆ ಏನಾದರೂ ಆಗಿ ಸತ್ತುಹೋದರೆ ಪರವಾಗಿಲ್ಲ ಬಿಡು. ದಿನವೂ ಎಷ್ಟೋ ಜನರು ಸಾಯುತ್ತಾರೆ. ಅವರಲ್ಲಿ ನಾನೂ ಒಬ್ಬಳು” ಎನ್ನುತ್ತಿದ್ದಳು ಎಂದು ಕಣ್ಣೊರೆಸಿ ಕೊಳ್ಳುತ್ತಾರೆ ಮದಾರ್ಕರ್.

ಆತ್ಮೀಯ ಗೆಳತಿ ಸವಿತಾ ಬಿರಾದಾರ್ ಮತ್ತು ಗಣಿತ ಲೋಕದ ಶಿಕ್ಷಕರೆಲ್ಲರೂ ಮಗಳ ಬಾಳಿಗೆ ಕಣ್ಣಾಗಿದ್ದರು. ಯೋಗ್ಯ ಮಾರ್ಗದರ್ಶನ ನೀಡಿದರು. ಮಗಳ ಆಸೆಯೆಂಬ ಬಳ್ಳಿ ಗಣಿತ ಲೋಕದ ಗುರುಗಳ ನೀರೆಂಬ ಮುಚ್ಚಟೆಯಿಂದ ಸೊಂಪಾಗಿ ಬೆಳೆಯಿತು. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅತ್ಯುನ್ನತ ದರ್ಜೆಯಲ್ಲಿ ತೇರ್ಗಡೆಯಾದಳು.

ಒಮ್ಮೆ ಅಕ್ಕಪಕ್ಕದ ಮನೆಯವರೆಲ್ಲರೂ ಮಕ್ಕಳೊಡನೆ ಬಾದಾಮಿ, ಐಹೊಳೆ, ಪಟ್ಟದಕಲ್ಲಿಗೆ ಪ್ರವಾಸ ಹೊರಟಿದ್ದರು. ಇವಳಿಗೂ ಹೋಗುವ ಆಸೆ. ಗೆಳತಿಯರೂ ಒಪ್ಪಿದರು. ಆಫೀಸಿಗೆ ರಜೆ ಇದ್ದ ಸಮಯದಲ್ಲಿ ಪ್ರವಾಸ ನಿಶ್ಚಯವಾಯಿತು. ಮಗಳಿಗೆ ಆಗ ವೀಲ್ ಚೇರ್ ಇರಲಿಲ್ಲ. ಅಪ್ಪನೇ ಎತ್ತಿಕೊಂಡು ಓಡಾಡಬೇಕಿತ್ತು. ಆದರೆ ಕೊನೆಯ ಗಳಿಗೆಯಲ್ಲಿ ಪ್ರವಾಸಕ್ಕೆ ಹೊರಟಿದ್ದ ನೆರೆಕೆರೆಯವರು ಇವಳು ಬರುವುದು ಬೇಡ ಎಂದರು.

ಪ್ರವಾಸ ಪ್ರಯಾಸವಾಗದಿರಲಿ ಎಂದು ಊಹಿಸಿರಬಹುದು. ಮಗಳಿಗೆ ತಡೆದುಕೊಳ್ಳಲಾಗ ದಂತಹ ದುಃಖ. ಆದರೂ ವಾಸ್ತವವನ್ನು ಅರ್ಥೈಸಿಕೊಂಡಳು. ಆದರೆ ಅವಳ ಕಣ್ಣೆದುರೇ ಪ್ರವಾಸದ ವಾಹನ ಹೋದಾಗ ದುಃಖ ತಾಳಲಾರದೆ ಬಿಕ್ಕಿ ಬಿಕ್ಕಿ ಅತ್ತಳು. ಕೊನೆಗೆ ತಾನು ಹೋಗಲು ತಾಯಿಯ ಒಪ್ಪಿಗೆಯೂ ಇಲ್ಲ ಎಂದು ಊಹಿಸಿ ತನ್ನನ್ನು ತಾನೇ ಸಂತೈಸಿಕೊಂಡಳು. ಆದರೆ ವಾಹನ ಹೋದ ನಾಲ್ಕಾರು ಗಂಟೆಗಳಲ್ಲಿ ದಾರಿ ಮಧ್ಯದಲ್ಲೇ ತೀವ್ರ ಅಪಘಾತಕ್ಕೆ ಈಡಾದ ದಾರುಣ ಸುದ್ದಿ ಬಂತು !

ಮಗಳಿಗೆ ಡಾಕ್ಟರ್ ಆಗುವ ಹಂಬಲ. ತಾನು ಡಾಕ್ಟರ್ ಆಗಬೇಕು, ಭಾರತವಿಡೀ ಸುತ್ತಿ ದೀನರು–

ದುರ್ಬಲರು–ಬಡವರ ಸೇವೆ ಮಾಡಬೇಕು, ತನ್ನಂತಹ ಸಾವಿರಾರು ಅಸಹಾಯಕರಿಗೆ ಆಸರೆಯಾಗಬೇಕು ಎಂಬ ಆಸೆ ಅವಳಿಗೆ. ಆದರೆ ಧಾರವಾಡವೂ ಸೇರಿದಂತೆ ಎಲ್ಲ ಕಾಲೇಜುಗಳಲ್ಲೂ ಅವಳಿಗೆ ಪ್ರವೇಶವನ್ನು ನಿರಾಕರಿಸಿದರು. ದಾರಿಯೇ ಕಾಣದ ತಂದೆ ಮಗಳನ್ನು ಹೊತ್ತುಕೊಂಡು ಧರ್ಮಸ್ಥಳಕ್ಕೆ ಧಾವಿಸಿದರು. ಧರ್ಮಾಧಿಕಾರಿ ಹೆಗ್ಗಡೆಯವರನ್ನು ಭೇಟಿಯಾಗಿ ಸಹಾಯ ಮಾಡಲು ಅಂಗಲಾಚಿದರು. ಹೆಗ್ಗಡೆಯವರು ಧಾರವಾಡದ ಎಸ್.ಡಿ.ಎಂ. ಕಾಲೇಜಿನ ಪ್ರಾಂಶುಪಾಲರಿಗೆ ಫೋನ್ ಮಾಡಿ ಮಗಳಿಗೆ ಪ್ರವೇಶ ಕೊಡಲು ತಿಳಿಸಿದರು. ಪ್ರಾಂಶುಪಾಲರು ತಕ್ಷಣ ಒಪ್ಪಿಕೊಂಡರು.

"ನಾನು ಧಾರವಾಡದ ಎಸ್.ಡಿ.ಎಂ. ಕಾಲೇಜಿಗೆ ಹೋಗುತ್ತಿದ್ದಂತೆಯೇ ಪ್ರಿನ್ಸಿಪಾಲರೇ ಎದುರುಗೊಂಡರು. ನಿಮ್ಮ ಮಗಳಿಗೆ ಪ್ರವೇಶ ನಿರಾಕರಿಸಿ ವಾಪಸ್ಸು ಕಳಿಸಿದ್ದರಿಂದ ನನಗೆ ಕಸಿವಿಸಿಯಾಗಿತ್ತು. ರಾತ್ರಿಯಿಡೀ ನಿದ್ದೆಯೇ ಬಂದಿರಲಿಲ್ಲ. ಬೆಳಗ್ಗೆ ಹೆಗ್ಗಡೆಯವರ ಫೋನ್ ಬಂದಾಗ ಅದೇ ಗುಂಗಿನಲ್ಲಿದ್ದೆ. ಇನ್ನು ಚಿಂತಿಸಬೇಡಿ, ಕಲಿಕೆಗೆ ಬೇಕಾದ್ದನ್ನು ಸಮರ್ಪಕವಾಗಿ ಮಾಡುತ್ತೇನೆ" ಎಂದು ಎಲ್ಲ ವ್ಯವಸ್ಥೆ ಮಾಡಿಸಿದರು.

ಹಾಸ್ಟೆಲ್‌ನಿಂದ ಕಾಲೇಜಿಗೆ ಹೋಗಿಬರಲು ಮೂರು ಕಾಲಿನ ಕುರ್ಚಿಯ ಅನುಕೂಲವೂ ಒದಗಿತು. ಮಗಳು ಏಕಾಗ್ರತೆಯಿಂದ ವ್ಯಾಸಂಗ ಮಾಡಿದಳು. ಫಲಿತಾಂಶ ಬಂದಾಗ ದ್ವಿತೀಯ ಪಿ.ಯು.ಸಿ.ಯಲ್ಲಿ ಕಾಲೇಜಿಗೆ ಮೊದಲ ರ್‍ಯಾಂಕ್ ಹಾಗೂ ಸಿ.ಇ.ಟಿ.ಯಲ್ಲಿ ಮೂರನೇ ರ್‍ಯಾಂಕ್ ಪಡೆದಿದ್ದಳು.

ಮೊದಲ ಎಂ.ಬಿ.ಬಿ.ಎಸ್.ಗೆ ಹುಬ್ಬಳ್ಳಿ ವೈದ್ಯಕೀಯ ವಿದ್ಯಾಲಯದಲ್ಲಿ ಪ್ರವೇಶ ದೊರಕಿತು. ಅಧ್ಯಾಪಕ–ಅಧ್ಯಾಪಕೇತರ ವರ್ಗದವರೆಲ್ಲ ವೈದ್ಯಕೀಯ ಕಲಿಕೆ ಕಷ್ಟವಾಗುತ್ತದೆ, ವರ್ಷಗಳನ್ನು ಹಾಳುಮಾಡಿಕೊಳ್ಳಬೇಡ, ಇನ್ನೊಮ್ಮೆ ಯೋಚಿಸು ಎಂಬ ಅಪಸ್ವರ ಎತ್ತಿದರು. ಆದರೆ ತಂದೆ–ಮಗಳ ನಿರ್ಧಾರ ಅಚಲವಾಗಿತ್ತು. ಮೊದಲ ವರ್ಷದ ಪರೀಕ್ಷೆಯಲ್ಲಿ ಉತ್ತಮ ಅಂಕಗಳು ಬಂದವು. ಅಂಬೆಗಾಲಿನಲ್ಲಿ ಓಡಾಡಬೇಕಾದ ಕಾರಣ ರೋಗಿಗಳನ್ನು ನೋಡಲು ವಾರ್ಡ್‌ನಿಂದ ವಾರ್ಡ್‌ಗೆ ಹೋಗಲು ಕಷ್ಟವಾಗುತ್ತಿತ್ತು. ಮಗಳೇ, "ಅಪ್ಪ ಆಪರೇಶನ್ ಮಾಡಿಸೋಣ" ಎಂದು ಸಲಹೆ ನೀಡಿದಳು.

ಎಲ್ಲರೂ ತಿರುಪತಿ ಆಸ್ಪತ್ರೆಗೆ ಹೋಗಲು ಸೂಚಿಸಿದರು. ಹೋಗಿದ್ದೂ ಆಯಿತು. ಸೇರಿದ್ದೂ ಆಯಿತು. ಆಪರೇಶನ್ ಸಹ ಆಯಿತು. ಆದರೆ ಶಸ್ತ್ರಚಿಕಿತ್ಸೆ ಸಂಪೂರ್ಣವಾಗಿ ವಿಫಲವಾಗಿತ್ತು. ಈ ಕಾರಣದಿಂದ ವರ್ಷದಲ್ಲಿ ಏಳೆಂಟು ಬಾರಿ ಹೋಗಿ ದಾಖಲಾಗಿ ಚಿಕಿತ್ಸೆ ಪಡೆಯುವ ಅನಿವಾರ್ಯತೆ ಎದುರಾಯಿತು.

ಈ ಎಲ್ಲ ಕಾರಣಗಳಿಂದ ಮತ್ತೆ ಹಾಜರಿಯ ಕೊರತೆ. ಪರೀಕ್ಷೆ ಬರೆಯಲು ಅನುಮತಿಯೇ ಸಿಗಲಿಲ್ಲ. ಕೊನೆಗೆ, ಈ ವರ್ಷ ಮತ್ತು ಮುಂದಿನ ವರ್ಷ ಕಾಲೇಜಿಗೆ ಸರಿಯಾಗಿ ಬಂದರೆ ಆ ವರ್ಷ ಎರಡೂ ವರ್ಷದ ಪರೀಕ್ಷೆಗಳನ್ನೂ ಒಟ್ಟಿಗೇ ತೆಗೆದುಕೊಳ್ಳಲು ಅನುಮತಿ ನೀಡಿದರು. ಇವರೆಲ್ಲ ದಾನವ ರೂಪದ ಮಾನವರು ಎಂದೆನ್ನಿಸಿತು. "ಮಗಳು ಧೈರ್ಯಗುಂದಬಾರದೆಂದು ಸತತ ಉತ್ತೇಜಿಸಿದೆ. ನಿನ್ನೊಳಗಿರುವ ಅಪರಿಮಿತ ಶಕ್ತಿಯಿಂದ ಕಷ್ಟಪಟ್ಟು ಓದು. ಪ್ರಯತ್ನಕ್ಕೆ ಸರಿಯಾದ ಫಲಿತಾಂಶ ಸಿಗುವುದು ಖಚಿತ ಎಂದು ಪ್ರೇರೇಪಿಸತೊಡಗಿದೆ" ಎಂದರವರು. ಮಗಳು ಅಧ್ಯಯನವನ್ನು ಗಂಭೀರವಾಗಿ ತೆಗೆದುಕೊಂಡಳು. ಉತ್ತಮ ಅಂಕಗಳಿಂದ ಎರಡೂ ವರ್ಷದ ಪರೀಕ್ಷೆಯಲ್ಲಿ ತೇರ್ಗಡೆಯಾದಳು. ಕೊನೆಗೆ ಎಂ.ಬಿ.ಬಿ.ಎಸ್. ಪದವಿಯನ್ನು ಉತ್ತಮ ಅಂಕಗಳೊಂದಿಗೆ ಪಡೆದುಕೊಂಡಳು.

ಆದರೆ ಮಗಳು ಇಷ್ಟಕ್ಕೇ ತೃಪ್ತಿಯಾಗಲಿಲ್ಲ. ಎಂ.ಡಿ. ಓದುವ ಆಸೆ ವ್ಯಕ್ತಪಡಿಸಿದಳು. ಪ್ರವೇಶ ಪರೀಕ್ಷೆಯಲ್ಲಿ ರಾಜ್ಯಕ್ಕೇ ಮೂರನೆಯ ರ್‍ಯಾಂಕ್ ಪಡೆದಳು. ಚರ್ಮರೋಗ ತಜ್ಞೆಯಾಗುವ ಹಂಬಲವಿದ್ದುದರಿಂದ ಮಂಗಳೂರಿನ ಫಾದರ್ ಮುಲ್ಲಾಸ್ ವೈದ್ಯಕೀಯ ಕಾಲೇಜನ್ನು ಸೇರಿಕೊಂಡಳು. ಏಕೆಂದರೆ ಇಡೀ ರಾಜ್ಯದಲ್ಲಿ ಅಲ್ಲಿ ಮಾತ್ರ ಸೀಟು ನಿಗದಿಯಾಗಿತ್ತು. ಅಂಗವಿಕಲರ ಕೋಟಾದಲ್ಲಿ ಸೀಟು ದೊರೆಯಿತು. ಆದರೆ ಅದು ಖಾಸಗಿ ಕಾಲೇಜಾದ್ದರಿಂದ ಪ್ರತಿ ವರ್ಷ ನಾಲ್ಕು ಲಕ್ಷ ರೂಪಾಯಿಗಳನ್ನು ಕಟ್ಟಬೇಕಾಗಿತ್ತು. ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲದಿದ್ದರೂ ಮಗಳಿಗಾಗಿ ಇಲಾಖೆಯಿಂದ ಸಿಗುವ ಸಹಾಯವೆಲ್ಲವನ್ನೂ ಪಡೆದುಕೊಂಡೆ ಎಂದು ನಿಡುಸುಯ್ದರು ಮದಾರ್ಕರ್.

"ಅಂಗವಿಕಲೆಯಾದ ಕಾರಣ ಕಾಲೇಜಿನ ಉಪನ್ಯಾಸಕರು ಕೀಳುಭಾವನೆಯಿಂದ ನೋಡುತ್ತಿರುವರೆಂಬ ಅಳುಕು ಮಗಳನ್ನು ಕಾಡತೊಡಗಿತ್ತು. ಧೈರ್ಯದಿಂದಿರು ಎಂದು ಬೆನ್ನು ತಟ್ಟಿದೆ. ಎಲ್ಲವನ್ನೂ ಮರೆತು ಓದುವುದರಲ್ಲಿ ಮಗ್ನಳಾಗಿರು ಎಂದು ವಿಶ್ವಾಸವನ್ನು ತುಂಬಿದೆ ಎನ್ನುತ್ತಾ ಎಂ.ಡಿ. ವಿದ್ಯಾರ್ಥಿಗಳಲ್ಲಿ ಥೀಸಿಸ್‌ಅನ್ನು ಮೊಟ್ಟ ಮೊದಲು ಸಲ್ಲಿಸಿದವಳು ನನ್ನ ಮಗಳು" ಎನ್ನುವಾಗ ಅವರ ನೇತ್ರಗಳು ಹೊಳೆಯುತ್ತಿದ್ದವು.

ಪರೀಕ್ಷೆ ಮುಗಿಯಿತು. ಮಗಳು ಎಂ.ಡಿ. ಪರೀಕ್ಷೆಯನ್ನು ಚಿನ್ನದ ಪದಕ ಹಾಗೂ ಫಸ್ಟ್ ರ್‍ಯಾಂಕ್ ಎರಡನ್ನೂ ತನ್ನದಾಗಿಸಿಕೊಂಡಳು. "೨೦೧೪ರ ಪ್ರತಿಭಾ ರಾಜ್ಯ ಪ್ರಶಸ್ತಿ ನನ್ನ ಮಗಳ ಪಾಲಿಗೆ ಬಂತು. ಅನೇಕ ಕಾರ್ಯಕ್ರಮಗಳಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸುವ ಅವಕಾಶವೂ ದೊರೆಯಿತು" ಎನ್ನುವಲ್ಲಿ ಏನನ್ನೋ ಸಾಧಿಸಿದ ತುಂಬು ಸಂತೃಪ್ತಿ ಅವರಲ್ಲಿ.

ಎಂ.ಡಿ. ಮುಗಿಯುತ್ತಿದ್ದಂತೆಯೇ ಅನೇಕ ವೈದ್ಯಕೀಯ ಕಾಲೇಜು ಆಸ್ಪತ್ರೆಗಳಿಂದ ಕೆಲಸಕ್ಕೆ ಆಹ್ವಾನ ಬಂತು. ಮಾಜಿ ಶಾಸಕರಾದ ಚರಂತಿಮಠ ಅವರು ಸಂದರ್ಶನಕ್ಕೂ ಕರೆಯದೆ ಮಗಳನ್ನು ಕೆಲಸಕ್ಕೆ ಸೇರಿಸಿಕೊಂಡು ನೇಮಕಾತಿ ಪತ್ರ ನೀಡಿದರು. ವಾಸ್ತವ್ಯಕ್ಕೆ ವಸತಿಗೃಹವೊಂದನ್ನು ನೀಡಿದರು. ಸಮಾಜ ಸೇವಾ ಹಂಬಲದೊಡನೆ ಮಗಳೀಗ ಬಾಗಲಕೋಟೆಯ ಎಸ್. ನಿಜಲಿಂಗಪ್ಪ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಸಹಾಯಕ ಪ್ರಾಧ್ಯಾಪಕಳಾಗಿ ಸೇವೆಯಲ್ಲಿದ್ದಾಳೆ ಎನ್ನುವಲ್ಲಿ ಅವರಲ್ಲಿ ಸಂತೃಪ್ತ ಭಾವನೆ.

ಮಾತು ಮುಗಿಸುವ ಮೊದಲು, "ಮಗಳಿಗೀಗ ಚಾರ್ಜಿಂಗ್ ವೀಲ್ ಚೇರ್ ಕೊಡಿಸಿದ್ದೇನೆ. ಅದರಲ್ಲೇ ಅವಳ ಓಡಾಟಗಳೆಲ್ಲವೂ. ಕಷ್ಟಪಡಲೇಬೇಕು. ಈ ದೇಹ ಬಸವಕಾಯ. ಕಾಪಾಡುವವನೂ ಅವನೇ, ಕಾಯುವವನೂ ಅವನೇ, ಎಂಬ ಅವಳ ನಿಲುವಿಗೆ ನನ್ನ ಸಹಮತವಿದೆ. ನನ್ನೊಡನೆ ಆಗಾಗ್ಗೆ ಆಧ್ಯಾತ್ಮಿಕ ಚರ್ಚೆಯಲ್ಲಿ ತೊಡಗುತ್ತಾಳೆ. ಕುರಾನ್, ಭಗವದ್ಗೀತೆ, ರಾಮಾಯಣ, ಬೈಬಲ್, ವಚನಗಳನ್ನು ಓದುತ್ತಾಳೆ. ಕನ್ನಡ ಸಾಹಿತ್ಯದಲ್ಲೂ ಆಸಕ್ತಿ ತೋರುತ್ತಾಳೆ. ಮಗಳ ಬದುಕಿನಲ್ಲಿ ನನ್ನ ಬದುಕನ್ನು ಕಾಣುತ್ತೇನೆ" ಎಂದಾಗ ನನ್ನ ಕಣ್ಣೆದುರು ಸಾಧನೆಯ ಹೊಸ ಲೋಕ. ಆ ಲೋಕದಲ್ಲಿ ಸದಾ ಬೆಳಗುತ್ತಿರುವ ಎರಡು ನಕ್ಷತ್ರಗಳು. ಅವೇ ಮದಾರ್ಕರ್ ಸಾಹೇಬ ಪಾಟೀಲ ಮತ್ತು ಡಾ॥ ಮಹಾಜಬೀನ್.

**ಎಸ್. ನಾಗರಾಜು**
ಕೆಎಸ್‌ಆರ್‌ಟಿಸಿ ಸ್ಟಾಫ್ ಅಂಡ್ ವರ್ಕರ್ಸ್ ಫೆಡರೇಷನ್
ನಂ. ೬, ಸಿರೂರ್ ಪಾರ್ಕ್ ರಸ್ತೆ
ಶೇಷಾದ್ರಿಪುರ ಬೆಂಗಳೂರು – ೫೬೦ ೦೨೦

# ಬೆಳಕೂ ಬಾಗಿತು!

ಸಾಪೇಕ್ಷತಾ ಸಿದ್ಧಾಂತವನ್ನು ಪೂರ್ತಿಯಾಗಿ ಪ್ರತಿಪಾದಿಸಿದ ನಂತರ ಐನ್‌ಸ್ಟೈನ್ ಬೆಳಕು ಎಷ್ಟು ಬಾಗಬೇಕೆಂದು ಮತ್ತೊಮ್ಮೆ ಲೆಕ್ಕ ಮಾಡಿ ಬೆಳಕು ಮೊದಲು ತಿಳಿದಿದ್ದಕ್ಕಿಂತ ಇನ್ನೂ ಹೆಚ್ಚು ಬಾಗಬೇಕೆಂದು ಪ್ರತಿಪಾದಿಸಿದರು. ಸೂರ್ಯ ಮತ್ತು ನಕ್ಷತ್ರಗಳ ಹತ್ತಿರ ಬೆಳಕು ಬಾಗುವುದನ್ನು ಸಾಧಾರಣವಾಗಿ ಪರೀಕ್ಷಿಸಲಾಗದು. ಆದರೆ ಗ್ರಹಣ ಸಮಯದಲ್ಲಿ ಸೂರ್ಯನ ಹತ್ತಿರದ ತಾರೆಗಳ ಸ್ಥಳಗಳನ್ನು ಪರಿಶೀಲಿಸಿ ಆ ಪರಿಣಾಮವನ್ನು ಸಾಮಾನ್ಯವಾಗಿ ಅವುಗಳು ಇರುವ ಸ್ಥಳದ ಜೊತೆ ಹೋಲಿಸಿದರೆ ಈ ಬಾಗುವಿಕೆಯನ್ನು ತಿಳಿಯಬಹುದು ಎಂದು ಇಂಗ್ಲೆಂಡಿನ ಎಡ್ಡಿಂಗ್ಟನ್ ಮತ್ತು ಇತರರು ಮಂಡಿಸಿದರು. ಗ್ರಹಣದ ಸಮಯದಲ್ಲಿ ಹೇಡ್ಸ್ ಎಂಬ ನಕ್ಷತ್ರಪುಂಜದ ತಾರೆಗಳ ಬೆಳಕು ಸೂರ್ಯನ ಹತ್ತಿರ ಹಾಯ್ದು ಬರಬೇಕೆಂದು ಅವರಿಗೆ ತಿಳಿದಿದ್ದು ಆ ತಾರೆಗಳ ಸ್ಥಳಗಳನ್ನು ಗ್ರಹಣದ ಸಮಯದಲ್ಲಿ ಮತ್ತು ಅನಂತರ ಪರಿಶೀಲಿಸಿದರೆ ಈ ಪ್ರಶ್ನೆಗೆ ಉತ್ತರ ಬರಬಹುದು ಎಂದು ನಿರ್ಧರಿಸಿದರು.




*ಸೂರ್ಯನ ಸುತ್ತ ವ್ಯೋಮ ಕಾಲ ವಕ್ರಗೊಂಡು ಗ್ರಹ (ಭೂಮಿ)ವನ್ನು ಪ್ರಭಾವಗೊಳಿಸುತ್ತಿರುವುದು*

ಆಲ್ಬರ್ಟ್ ಐನ್‌ಸ್ಟೈನ್ ತನ್ನ ಸಾಮಾನ್ಯ ಸಾಪೇಕ್ಷತಾ ಸಿದ್ಧಾಂತವನ್ನು ನವೆಂಬರ್ ೧೯೧೫ರಲ್ಲಿ ಪ್ರತಿಪಾದಿಸಿದರು.

ಗುರುತ್ವಾಕರ್ಷಣೆಯ ಬಗ್ಗೆ ಆಸಕ್ತಿ ತೋರಿಸುವುದು ಭೌತವಿಜ್ಞಾನದ ಮೇಧಾವಿಗಳ ಲಕ್ಷಣ. ಅದರ ಜೊತೆ ಬೆಳಕಿನಲ್ಲೂ ಆಸಕ್ತಿ ಇದ್ದಲ್ಲಿ ಅವರನ್ನು ಮಹಾಮೇಧಾವಿ ಎಂದು ಸುಲಭವಾಗಿ ಗುರುತಿಸಬಹುದು. ವಿಜ್ಞಾನದ ಚರಿತ್ರೆಯಲ್ಲಿ ಈ ಎರಡೂ ಕ್ಷೇತ್ರಗಳಲ್ಲಿ ಆಳವಾದ ಸಂಶೋಧನೆ ನಡೆಸಿ ಅಮೂಲ್ಯ ಕೊಡುಗೆಗಳನ್ನು ಇತ್ತಿದ್ದು ಪ್ರಾಯಶಃ ಇಬ್ಬರೇ! ೧೭ನೆಯ ಶತಮಾನದ ಐಸ್ಯಾಕ್ ನ್ಯೂಟನ್ ಮತ್ತು ೨೦ನೆಯ ಶತಮಾನದ ಆಲ್ಬರ್ಟ್ ಐನ್‌ಸ್ಟೈನ್. ಅವರಿಬ್ಬರ ಎತ್ತರವನ್ನು ತಲುಪಿದವರಿಲ್ಲ. ಬೆಳಕು ಮತ್ತು ಗುರುತ್ವ ಒಟ್ಟಿಗೆ ಬಂದಿದ್ದವು ೧೯೧೫ರಲ್ಲಿ ಐನ್‌ಸ್ಟೈನ್ ಪ್ರತಿಪಾದಿಸಿದ ಸಾಪೇಕ್ಷತಾ ಸಿದ್ಧಾಂತದಲ್ಲಿ. ಅದೂ ೧೦೦ ವರ್ಷಗಳ ಹಿಂದೆ! ಆ ಸಿದ್ಧಾಂತದ ಒಂದು ಭವಿಷ್ಯ ನುಡಿ ಹೆಚ್ಚು ಗುರುತ್ವದ ಕ್ಷೇತ್ರದಲ್ಲಿ ಬೆಳಕಿನ ಬಾಗುವಿಕೆ.

**ಪಾಲಹಳ್ಳಿ ವಿಶ್ವನಾಥ್**

೧೯೦೫ರಲ್ಲಿ ಸ್ವಿಟ್ಜರ್ಲೆಂಡಿನ ಬರ್ನ್ ನಗರದ ಹಕ್ಕುಪತ್ರ ಕಛೇರಿಯ ಮೂರನೆಯ ದರ್ಜೆ ಗುಮಾಸ್ತರೊಬ್ಬರು ವಿಜ್ಞಾನ ಜಗತ್ತನ್ನು ಬದಲಾಯಿಸಲು ಪ್ರಾರಂಭಿಸಿದ್ದರು. ಅವರ ೨೬ನೆಯ ವಯಸ್ಸಿನಲ್ಲಿ ಅವರ ಮಹಾ ಪ್ರತಿಭೆ ಹೊಸ ಪರಿಕಲ್ಪನೆಗಳುಳ್ಳ ಐದು ಸಂಶೋಧನಾ ಲೇಖನಗಳಲ್ಲಿ ಹೊರಬಂದಿತು: ೧) ಬೆಳಕಿನ ಮಹಾವೇಗವನ್ನು ಯಾವ ವಸ್ತುವೂ ತಲುಪಲಾಗುವುದಿಲ್ಲ; ೨) ಚೌಕಟ್ಟು ಯಾವುದಾದರೂ ಬೆಳಕಿನ ವೇಗ ಒಂದೇ; ೩) ಬೆಳಕು ತರಂಗ ರೂಪದಲ್ಲೇ ಅಲ್ಲದೆ ಕಣ ರೂಪದಲ್ಲೂ ಇರಲು ಸಾಧ್ಯ. ಇವೇ ಅಲ್ಲದೆ ದ್ರವ್ಯರಾಶಿಯೂ ಶಕ್ತಿಯೂ ಒಂದೇ ಚೈತನ್ಯದ ಎರಡು ಮುಖಗಳು ಎಂಬುದನ್ನು ಒಂದು ಸಮೀಕರಣದ ಮೂಲಕ ಸ್ಪಷ್ಟೀಕರಿಸಿದ್ದರು. ಆ ಸಮೀಕರಣವೇ ಶಕ್ತಿಯುತ ಪ್ರಕ್ರಿಯೆಗಳ ಸಾಧ್ಯತೆಯನ್ನು ತೋರಿಸಿ ಮುಂದೆ ಪರೋಕ್ಷವಾಗಿ ಪರಮಾಣು ಬಾಂಬಿಗೂ ಕಾರಣವಾಯಿತು. ಅವರ ಜೀವನದಲ್ಲಿ ಬೆಳಕು ಮತ್ತೊಂದು ಬಾರಿ, ಇನ್ನೂ ಭವ್ಯ ರೀತಿಯಲ್ಲಿ ಪ್ರವೇಶಿಸಲಿದ್ದು, ಅವರನ್ನು ಕೀರ್ತಿಯ ತುದಿಗೆ ಕರೆದುಕೊಂಡು ಹೋಗಲಿತ್ತು. ಆ ವ್ಯಕ್ತಿಯೇ ೧೮೭೯ರಲ್ಲಿ ಜರ್ಮನಿಯ ಉಲ್ಮ್ ನಗರದಲ್ಲಿ ಹುಟ್ಟಿ ಶತಮಾನ ಪುರುಷರೆನಿಸಿಕೊಂಡ ಆಲ್ಬರ್ಟ್ ಐನ್‌ಸ್ಟೈನ್. ಅದೇ ಸಮಯದಲ್ಲಿ ಹರ್ಮನ್ ಮಿನ್ಕೋವ್‌ಸ್ಕಿ ಐನ್‌ಸ್ಟೈನ್ ಪ್ರತಿಪಾದಿಸಿದ ವಿಶೇಷ ಸಾಪೇಕ್ಷತಾ ಸಿದ್ಧಾಂತದ ಪರಿಣಾಮವಾದ ೪ ಆಯಾಮಗಳ ವ್ಯೋಮ ಕಾಲದ ಪರಿಕಲ್ಪನೆಯನ್ನು ಮುಂದಿಟ್ಟರು. ಇದರ ಪ್ರಕಾರ ಒಂದು ಘಟನೆಯನ್ನು ವಿವರಿಸಬೇಕಾದರೆ ಅದು ಎಲ್ಲಿದೆ (೩ ಆಯಾಮಗಳು) ಎಂದು ಮಾತ್ರ ಹೇಳಿದರೆ ಸಾಲದು, ಅದು ಯಾವಾಗ (೪ನೆಯ ಆಯಾಮ) ನಡೆಯಿತು ಎಂಬುದನ್ನೂ ಸ್ಪಷ್ಟಪಡಿಸಬೇಕು.

ಅವರ ವಿಶೇಷ ಸಾಪೇಕ್ಷತಾ ಸಿದ್ಧಾಂತದ ಪ್ರಕಾರ ಎಲ್ಲ ಜಡತ್ವದ ಚೌಕಟ್ಟುಗಳಲ್ಲಿ (ಉದಾಹರಣೆಗೆ, ಸ್ಥಿರವೇಗದಲ್ಲಿ ಚಲಿಸುವ ರೈಲು ಮತ್ತು ನಿಲ್ದಾಣದ ವೀಕ್ಷಕ) ಭೌತಶಾಸ್ತ್ರದ ನಿಯಮಗಳು ಒಂದೇ ಆಗಿರುತ್ತವೆ. ೧೯೦೭ರಲ್ಲಿ ಅವರು ಆ ಸಿದ್ಧಾಂತದಲ್ಲಿ ಗುರುತ್ವವನ್ನು ಅಳವಡಿಸುವ ಪ್ರಯತ್ನವನ್ನು ಪ್ರಾರಂಭಿಸಿದರು. ಆ ಪ್ರಯತ್ನ ೮ ವರ್ಷಗಳು ಸತತವಾಗಿ ನಡೆದು, ೧೯೧೫ರಲ್ಲಿ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತವೆಂದು ಪ್ರತಿಪಾದಿಸಲ್ಪಟ್ಟಿತು. ಮಾನವನ ಚಿಂತನಾ ಶಕ್ತಿ ಎಷ್ಟು ಉನ್ನತ ಮಟ್ಟವನ್ನು ಮುಟ್ಟಿದೆ ಎನ್ನುವುದಕ್ಕೆ ಈ ಸಿದ್ಧಾಂತ ಒಂದು ಸೂಕ್ತ ಉದಾಹರಣೆ ಎಂದು ಅನೇಕ ಭೌತಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಸೌರಮಂಡಲದ ಗ್ರಹಗಳ ಚಲನೆಯನ್ನು ವಿವರಿಸಲು ಐಸ್ಯಾಕ್ ನ್ಯೂಟನ್ ೧೭ನೆಯ ಶತಮಾನದಲ್ಲಿ ದ್ರವ್ಯರಾಶಿಯ ಮೂಲ ಗುಣ ಗುರುತ್ವ ಮತ್ತು ಎರಡು ದ್ರವ್ಯರಾಶಿಗಳ ಮಧ್ಯೆ ಇರುವುದು ಗುರುತ್ವಾಕರ್ಷಣೆ ಎಂಬ ಸಿದ್ಧಾಂತವನ್ನು



*ಸಾಮಾನ್ಯವಾಗಿ ಮತ್ತು ಸೂರ್ಯನ ಹತ್ತಿರ ಇರುವಾಗ ನಕ್ಷತ್ರದ ಸ್ಥಳಗಳು*

ಪ್ರತಿಪಾದಿಸಿದ್ದರು. ಆದರೆ ಒಂದು ರಾಶಿ ದೂರದಲ್ಲಿರುವ ಇನ್ನೊಂದು ರಾಶಿಯ ಮೇಲೆ ಹೇಗೆ ಪ್ರಭಾವ ಬೀರುವುದೋ ತನಗೆ ಗೊತ್ತಿಲ್ಲ ಎನ್ನುವುದು ಸಿದ್ಧಾಂತದ ಒಂದು ಕೊರತೆ ಎಂದು ಅವರೇ ಒಪ್ಪಿಕೊಂಡಿದ್ದರು. ದೂರದಲ್ಲಿರುವ ಸೂರ್ಯ ಭೂಮಿಯ ಮೇಲೆ ಹೇಗೆ ಪ್ರಭಾವ ಬೀರಬಲ್ಲ? ೧೬ನೆಯ ಶತಮಾನದ ಕೊನೆಯ ದಶಕಗಳಲ್ಲಿ ಗೆಲಿಲಿಯೊ ಪೀಸಾ ಮತ್ತು ಪಡುವಾ ನಗರಗಳಲ್ಲಿ ಹಲವಾರು ಖ್ಯಾತ ಪ್ರಯೋಗಗಳನ್ನು ನಡೆಸಿ ಗುರುತ್ವಾಕರ್ಷಣೆ ಎಲ್ಲ ವಸ್ತುಗಳಿಗೂ ಒಂದೇ ಎಂದು ತೋರಿಸಿದನು. ಒಂದು ವಸ್ತುವನ್ನು ಬಲದಿಂದ ಚಲಿಸಲು ಪ್ರಯತ್ನಿಸುವಾಗ ಅದನ್ನು ಎದುರಿಸುವುದೇ ಜಡತ್ವದ ದ್ರವ್ಯರಾಶಿ ಮತ್ತು ಗುರುತ್ವ ಅದನ್ನು ಹೇಗೆ ಸೆಳೆಯುತ್ತದೆ ಎನ್ನುವುದು ಅದರ ಗುರುತ್ವದ ದ್ರವ್ಯರಾಶಿ. ೧೯೦೭ರಲ್ಲಿ ಐನ್‌ಸ್ಟೈನ್ ಹಕ್ಕುಪತ್ರ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದಾಗ ಗುರುತ್ವದ ಬಗ್ಗೆ ತನ್ನ 'ಸಮತಾ ತತ್ವ' (ಈಕ್ವಿವಲೆನ್ಸ್ ಪ್ರಿನ್ಸಿಪಲ್)ವನ್ನು ಪ್ರತಿಪಾದಿಸಿದರು. ಇದರ ಪ್ರಕಾರ ಜಡತ್ವದ ದ್ರವ್ಯರಾಶಿ ಮತ್ತು ಗುರುತ್ವದ ದ್ರವ್ಯರಾಶಿ ಎರಡೂ ಒಂದೇ ಮೌಲ್ಯವನ್ನು ಹೊಂದಿರುತ್ತವೆ. ಆದ್ದರಿಂದ ಗೆಲಿಲಿಯೊ ತೋರಿಸಿದ ಹಾಗೆ ವಸ್ತು ಯಾವುದೇ ಆಗಲಿ, ಅದು ಒಂದೇ ಗುರುತ್ವಾಕರ್ಷಣೆಯನ್ನು ಅನುಭವಿಸುತ್ತದೆ. ಆದ್ದರಿಂದ ಗುರುತ್ವದ ಪ್ರಭಾವದ ವಸ್ತುಗಳ ಚಲನೆಗಳಿಗೂ ಅದೇ ವೇಗೋತ್ಕರ್ಷದಿಂದ ಮೇಲೇರುತ್ತಿರುವ ರಾಕೆಟ್ಟಿನ ಒಳಗೆ ನಡೆಯುವ ಚಲನೆಗಳಿಗೂ ವ್ಯತ್ಯಾಸವಿಲ್ಲದಂತಾಗಿ ಬಾಹ್ಯಾಕಾಶ ನಾವಿಕರಿಗೆ ತಮ್ಮ ತೂಕ ಕಾಣಬರದೆ ತೇಲಾಡುವ ಸಂದರ್ಭ ಬರುತ್ತದೆ. ಇದರಿಂದ ಸೈದ್ಧಾಂತಿಕವಾಗಿ ಚೌಕಟ್ಟು ಯಾವುದೇ ಇರಲಿ, ನಿಯಮಗಳು ಒಂದೇ ಎನ್ನುವ ನಿರ್ಧಾರಕ್ಕೆ ಐನ್‌ಸ್ಟೈನ್ ಬಂದಿದ್ದರು. ಇದು ಸಾರ್ವತ್ರಿಕ ಸಾಪೇಕ್ಷ ಸಿದ್ಧಾಂತಕ್ಕೆ ನಾಂದಿ.

ಅವರು ೧೯೧೧ರಲ್ಲಿ ಈ ಸಮಸ್ಯೆಗೆ ವಾಪಸ್ಸು ಬಂದರು. ಬೆಳಕಿನ ಫೊಟಾನ್ ಕಣದ 'ಜಡ ದ್ರವ್ಯರಾಶಿ' ಶೂನ್ಯ; ಆದರೆ ಅದಕ್ಕೆ ಶಕ್ತಿ ಇದ್ದು ಸಂವೇಗವೂ ಇರುವುದರಿಂದ ಅದು ಗುರುತ್ವದ ದ್ರವ್ಯರಾಶಿಯನ್ನು ಹೊಂದಿದೆ ಎಂದು ಪ್ರತಿಪಾದಿಸಿದರು. ಆದ್ದರಿಂದ ಯಾವುದಾದರೂ ಬೇರೆ ದ್ರವ್ಯರಾಶಿಯ ಹತ್ತಿರ ಹೋದಾಗ ಅದರ ಪ್ರಭಾವವನ್ನು ಬೆಳಕೂ ಅನುಭವಿಸುತ್ತದೆ. ಇದರಿಂದಾಗಿ ಎಲ್ಲ ದ್ರವ್ಯರಾಶಿಗಳ ತರಹ ಅದೂ ಬಾಗುತ್ತದೆ. ಜೂನ್ ೧೯೧೧ರಲ್ಲಿ ಐನ್‌ಸ್ಟೈನ್ 'ಬೆಳಕಿನ ಪ್ರಸಾರದ ಮೇಲೆ ಗುರುತ್ವದ ಪ್ರಭಾವ' ಎಂಬ ತಮ್ಮ ಸಂಶೋಧನಾ ಲೇಖನದಲ್ಲಿ ಸೂರ್ಯನಂತಹ ಅತಿ ಹೆಚ್ಚು ದ್ರವ್ಯರಾಶಿ ಇರುವ ಆಕಾಶಕಾಯಗಳ ಬಳಿ ಬೆಳಕು ಎಷ್ಟು ಬಾಗಬಹುದೆಂದು ತೋರಿಸಿದರು. ಆದರೆ ಬಾಗುವಿಕೆಯ ಮೌಲ್ಯ ಸರಿಯಿಲ್ಲ ವೆಂದೂ ಅದನ್ನು ಪರಿಷ್ಕರಿಸಬೇಕು ಎಂದೂ ತಿಳಿಯಿತು.

ಗುರುತ್ವದ ಕ್ಷೇತ್ರದಲ್ಲಿ ಬೆಳಕು ಈ ರೀತಿ ಬಾಗುವುದರಿಂದ ಅವರಿಗೆ ಮುಖ್ಯವಾದ ಸುಳಿವು ಸಿಕ್ಕಿತು. ಬೆಳಕೂ ಬಗ್ಗಬೇಕಾದರೆ ವ್ಯೋಮ ಕಾಲವೂ ಬಾಗಿರಬಹುದೇ? ಅಂದರೆ ಎಲ್ಲೆಲ್ಲಿ ದ್ರವ್ಯರಾಶಿ ಇದೆಯೋ ಅಂತಹ ಎಲ್ಲ ಜಾಗಗಳಲ್ಲೂ ವ್ಯೋಮ ಸ್ಥಳವೇ ಡೊಂಕಾಗುತ್ತದೆ! ಯೂಕ್ಲಿಡ್‌ರಿಂದ ನಮಗೆ ಪರಿಚಿತವಾಗಿರುವ ರೇಖಾಗಣಿತ ಚಪ್ಪಟೆ ಮೇಲ್ಮೈಗಳಿಗೆ ಅನ್ವಯಿಸುತ್ತದೆ. ಆದರೆ ಗೋಳೀಯ ಮೇಲ್ಮೈಗಳಿಗೆ ಅಥವಾ ಇತರ ಮೇಲ್ಮೈಗಳಿಗೆ ಬೇರೆಯದೇ ಆದ ರೇಖಾಗಣಿತ ಬೇಕಾಯಿತು. ಐನ್‌ಸ್ಟೈನ್ ತನ್ನ ಸ್ನೇಹಿತ ಮಾರ್ಸೆಲ್ ಗ್ರಾಸ್ಮನ್‌ರ ಸಹಾಯವನ್ನು ತೆಗೆದುಕೊಂಡು ಹೊಸ ಜ್ಯಾಮಿತಿಯಾದ – ರೀಮಾನ್ ಜ್ಯಾಮಿತಿಯನ್ನು ಬಳಸಲು ಕಲಿತರು. ಅಲ್ಲಿಯ ತನಕ ಗಣಿತಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡದ ಐನ್‌ಸ್ಟೈನ್, 'ಗಣಿತಶಾಸ್ತ್ರದ ಬಗ್ಗೆ ನನಗೆ ಈಗ ಬಹಳ ಗೌರವ ಬಂದಿತು' ಎಂದು ಹೇಳಿದ್ದರು. ಈ ಸಂಶೋಧನೆಗಳನ್ನು ಮಾಡುತ್ತಾ ೧೯೧೪ರಲ್ಲಿ ಗೆಳೆಯರೊಬ್ಬರಿಗೆ 'ಸಿಂಹದ ಬಾಲ ಮಾತ್ರ ಕಾಣಿಸುತ್ತಿದೆ. ನಿಧಾನವಾಗಿ ಸಿಂಹವೂ ಕಾಣಬಹುದು' ಎಂದು ಬರೆದಿದ್ದರು.೧೯೧೫ರ ನವೆಂಬರಿನಲ್ಲಿ ಅವರ ೧೧ ವರ್ಷದ ಮಗನಿಗೆ, 'ಕಳೆದ ಕೆಲವು ದಿನಗಳಲ್ಲಿ ನಾನು ನನ್ನ ಜೀವನದ ಅತಿ ಮುಖ್ಯ ಸಂಶೋಧನಾ ಲೇಖನಗಳನ್ನು ಮುಗಿಸಿದ್ದೇನೆ. ನೀನು ದೊಡ್ಡವನಾದಾಗ ನಾವು ಅದರ ಬಗ್ಗೆ ಚರ್ಚಿಸೋಣ' ಎಂದಿದ್ದರು. ಆ ಸಿದ್ಧಾಂತವೇ ಪ್ರಖ್ಯಾತ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತ (ಜನರಲ್ ಥಿಯರಿ ಆಫ್ ರಿಲೆಟಿವಿಟಿ). ಅದೇ ತಿಂಗಳಿನಲ್ಲಿ ೪ ಭಾಷಣಗಳ ಮೂಲಕ ಅವರು ತಮ್ಮ ಈ ಸಿದ್ಧಾಂತವನ್ನು ಇತರ ವಿಜ್ಞಾನಿಗಳ ಮುಂದೆ ವಿವರಿಸಿದರು. ಈ ಸಿದ್ಧಾಂತದ ಪ್ರಕಾರ ಆಕಾಶಕಾಯ ಅಥವಾ ಯಾವುದಾದರೂ ದ್ರವ್ಯರಾಶಿಯ ಪ್ರಭಾವ ಸುತ್ತಮುತ್ತಲಿನ ವ್ಯೋಮ ಕಾಲದ ಮೇಲೆ ಇದ್ದು, ಆ ಸ್ಥಳ ಡೊಂಕು ಅಥವಾ ವಕ್ರವಾಗುತ್ತದೆ. ಸಾಮಾನ್ಯವಾಗಿ ಇದನ್ನು ಒಂದು ರಬ್ಬರ್ ಶೀಟಿನ ಮೇಲೆ ಒಂದು ಭಾರದ ಚೆಂಡನ್ನು ಇಟ್ಟಾಗ ಅದರಲ್ಲಿ ಕಾಣಿಸುವ ವಕ್ರತೆಯನ್ನು ಉದಾಹರಣೆಯಾಗಿ ಕೊಡುತ್ತಾರೆ. ನ್ಯೂಟನ್ ಅವರ ಪ್ರತಿಪಾದನೆಯಲ್ಲಿ ಸೂರ್ಯನ ಗುರುತ್ವಾಕರ್ಷಣೆಯನ್ನು ಭೂಮಿ ತಕ್ಷಣವೇ ಅನುಭವಿಸುತ್ತದೆ; ಆದರೆ ಈ ಸಿದ್ಧಾಂತದ ಪ್ರಕಾರ ಸೂರ್ಯನ ದ್ರವ್ಯರಾಶಿಯ ಪ್ರಭಾವ ೮.೩ ನಿಮಿಷಗಳ ನಂತರ ಭೂಮಿಯನ್ನು ತಾಕುತ್ತದೆ.

ಸಾಪೇಕ್ಷತಾ ಸಿದ್ಧಾಂತವನ್ನು ಪೂರ್ತಿಯಾಗಿ ಪ್ರತಿಪಾದಿಸಿದ ನಂತರ ಐನ್‌ಸ್ಟೈನ್ ಬೆಳಕು ಎಷ್ಟು ಬಾಗಬೇಕೆಂದು ಮತ್ತೊಮ್ಮೆ ಲೆಕ್ಕ ಮಾಡಿ ಬೆಳಕು ಮೊದಲು ತಿಳಿದಿದ್ದಕ್ಕಿಂತ ಇನ್ನೂ ಹೆಚ್ಚು ಬಾಗಬೇಕೆಂದು ಪ್ರತಿಪಾದಿಸಿದರು. ಸೂರ್ಯ ಮತ್ತು ನಕ್ಷತ್ರಗಳ ಹತ್ತಿರ ಬೆಳಕು ಬಾಗುವುದನ್ನು ಸಾಧಾರಣವಾಗಿ ಪರೀಕ್ಷಿಸಲಾಗದು. ಆದರೆ ಗ್ರಹಣ ಸಮಯದಲ್ಲಿ ಸೂರ್ಯನ ಹತ್ತಿರದ ತಾರೆಗಳ ಸ್ಥಳಗಳನ್ನು ಪರಿಶೀಲಿಸಿ ಆ ಪರಿಣಾಮವನ್ನು ಸಾಮಾನ್ಯವಾಗಿ ಅವುಗಳು ಇರುವ ಸ್ಥಳದ ಜೊತೆ ಹೋಲಿಸಿದರೆ ಈ ಬಾಗುವಿಕೆಯನ್ನು ತಿಳಿಯಬಹುದು ಎಂದು ಇಂಗ್ಲೆಂಡಿನ ಎಡ್ಡಿಂಗ್ಟನ್ ಮತ್ತು ಇತರರು ಮಂಡಿಸಿದರು. ಗ್ರಹಣದ ಸಮಯದಲ್ಲಿ ಹೇಡ್ಸ್ ಎಂಬ ನಕ್ಷತ್ರಪುಂಜದ ತಾರೆಗಳ ಬೆಳಕು ಸೂರ್ಯನ ಹತ್ತಿರ ಹಾಯ್ದು ಬರಬೇಕೆಂದು ಅವರಿಗೆ ತಿಳಿದಿದ್ದು ಆ ತಾರೆಗಳ ಸ್ಥಳಗಳನ್ನು ಗ್ರಹಣದ ಸಮಯದಲ್ಲಿ ಮತ್ತು ಅನಂತರ ಪರಿಶೀಲಿಸಿದರೆ ಈ ಪ್ರಶ್ನೆಗೆ ಉತ್ತರ ಬರಬಹುದು ಎಂದು ನಿರ್ಧರಿಸಿದರು. ಆ ಸಮಯದಲ್ಲಿ ಎಡ್ಡಿಂಗ್ಟನ್ ಹೇಳಿದ ಹಾಗೆ ಮೂರು ಪರಿಣಾಮಗಳ ಸಾಧ್ಯತೆ ಇದ್ದಿತು: "ನ್ಯೂಟನ್ ಸಿದ್ಧಾಂತದ ಪ್ರಕಾರ ಬೆಳಕು ಸ್ವಲ್ಪ ಬಾಗಿ ಅದಕ್ಕೂ ತೂಕವಿದೆಯೆಂದು ತೋರಿಸಬಹುದು (ಹಿಂದಿನ ಶತಮಾನದಲ್ಲೇ ಸಲ್ಡನರ್ ಎಂಬ ವಿಜ್ಞಾನಿ ಇದನ್ನು ಲೆಕ್ಕ ಮಾಡಿದ್ದನು); ಅಥವಾ ಐನ್‌ಸ್ಟೈನರ ವಿಚಿತ್ರ ಸಿದ್ಧಾಂತದ ಪ್ರಕಾರ ಮತ್ತೂ ಹೆಚ್ಚು ಬಾಗುವಿಕೆಯನ್ನು ತೋರಿಸಬಹುದು; ಅಥವಾ ಬೆಳಕು ಬಾಗುವುದೇ ಇಲ್ಲ ಎಂದು ತೋರಿಸಿದರೆ ಇನ್ನೂ ಮಹತ್ವ ಪರಿಣಾಮವಾಗುತ್ತದೆ." ಕೆಲವರು ಇದನ್ನು ವ್ಯಕ್ತಿಪ್ರಾಧಾನ್ಯದ ಪೈಪೋಟಿಯಂತೆ ಪರಿಗಣಿಸಿ ಅದನ್ನು 'ನ್ಯೂಟನ್ ವಿರುದ್ಧ ಐನ್‌ಸ್ಟೈನ್' ಎಂದು ವ್ಯಾಖ್ಯಾನಿಸಿದರು. ಆಗ ಜರ್ಮನಿ ಮತ್ತು ಇಂಗ್ಲೆಂಡಿನ ನಡುವೆ ಸ್ನೇಹ ಇಲ್ಲದಿದ್ದರಿಂದ ಒಬ್ಬ ಜರ್ಮನ್ ವಿಜ್ಞಾನಿಯ ಸಿದ್ಧಾಂತದ ಬಗ್ಗೆ ಇಂಗ್ಲೆಂಡಿನವರಿಗೆ ಏಕೆ ಇಷ್ಟು ಹೆಚ್ಚು ಕಳಕಳಿ ಎಂದೂ ಕೆಲವರು ಪ್ರಶ್ನಿಸಿದರು. ಕಡೆಯಲ್ಲಿ ಇಂಗ್ಲೆಂಡಿನ ಪ್ರತಿಷ್ಠಿತ ರಾಯಲ್ ಸೊಸೈಟಿ ಸಂಸ್ಥೆಯು ೧೯೧೯ರಲ್ಲಿ ಈ ಪರೀಕ್ಷೆಗೆ ಎರಡು ತಂಡಗಳನ್ನು ಕಳಿಸಿತು. ಒಂದು ತಂಡ ಬ್ರೆಜಿಲ್‌ಗೆ,

ಮತ್ತೊಂದು ಆಫ್ರಿಕಕ್ಕೆ. ಮಾರ್ಚ್ ೧೯೧೯ರಂದು ಇಂಗ್ಲೆಂಡಿನಿಂದ ಆ ವಿಜ್ಞಾನಿಗಳು ಈ ಸಾಹಸ ಪ್ರಯೋಗಗಳಿಗೆ ಹೊರಟರು. ಎಡ್ಡಿಂಗ್ಟನ್ ತಂಡ ಆಫ್ರಿಕ ಖಂಡದಲ್ಲಿನ ಪಿನ್ಸಿಪೆ ಎನ್ನುವ ಜಾಗಕ್ಕೆ ಹೋದರು. ಅಲ್ಲಿ ೫೦೦ ಅಡಿ ಬೆಟ್ಟದ ಮೇಲೆ ದೂರದರ್ಶಕವನ್ನು ಸ್ಥಾಪಿಸಲಾಯಿತು. ಮಧ್ಯಾಹ್ನ ೩.೧೩ಕ್ಕೆ ಗ್ರಹಣ ಶುರುವಾಗಿ ೫ ನಿಮಿಷ ಪೂರ್ಣಗ್ರಹಣ ಉಂಟಾಗುವ ನಿರೀಕ್ಷೆ ಇದ್ದಿತು. ಅಂದಿನ ಬೆಳಿಗ್ಗೆ ಮಳೆ ಬಂದು ಆಕಾಶ ನಿಧಾನವಾಗಿ ತಿಳಿಯಾಗುತ್ತಿತ್ತು. ಗ್ರಹಣ ಶುರುವಾದ ನಂತರ ೧೬ ಛಾಯಾಚಿತ್ರಗಳನ್ನು ತೆಗೆಯಲಾಯಿತು. ಉತ್ತರ ತಿಳಿಯಲು ಹಲವಾರು ತಿಂಗಳುಗಳೇ ಬೇಕಾದವು. ಎಡ್ಡಿಂಗ್ಟನ್‌ರ ಪ್ರಯೋಗ ಐನ್‌ಸ್ಟೈನ್ ಪ್ರತಿಪಾದಿಸಿದ್ದಂತೆ ೧.೬ ಆರ್ಕ್ ಸೆಕೆಂಡು (೧ ಡಿಗ್ರಿ ಕೋನದಲ್ಲಿ ೩೬೦೦ ಆರ್ಕ್ ಸೆಕೆಂಡುಗಳು) ಬಾಗುವಿಕೆಯನ್ನು ತೋರಿಸಿತು. ಉಪಕರಣ ಅಷ್ಟು ಒಳ್ಳೆಯದಲ್ಲದಿದ್ದರೂ ಬ್ರೆಜ಼ಿಲ್‌ನ ಪ್ರಯೋಗವೂ ಸುಮಾರು ಅದೇ ಮೌಲ್ಯದ ಬಾಗುವಿಕೆಯನ್ನು ತೋರಿಸಿತು. (ಬಹಳ ಇತ್ತೀಚಿನ ಪ್ರಯೋಗ ೧೯೫೨ ಮತ್ತು ೧೯೭೩ರಲ್ಲಿ ನಡೆದಿದ್ದು, ಈ ಬಾಗುವಿಕೆ ಐನ್‌ಸ್ಟೈನ್ ಸಿದ್ಧಾಂತಕ್ಕೆ ಮತ್ತಷ್ಟು ಪುರಾವೆ ಒದಗಿಸಿತು.)

"ನಿಮ್ಮ ಸಿದ್ಧಾಂತಕ್ಕೆ ಪುರಾವೆ ಸಿಗದಿದ್ದರೆ ನಿಮ್ಮ ಪ್ರತಿಕ್ರಿಯೆ ಏನು ಇರುತ್ತಿತ್ತು?" ಎಂಬ ಪ್ರಶ್ನೆಗೆ ಐನ್‌ಸ್ಟೈನ್, "ಇದು ಸರಿಯಾದ ಸಿದ್ಧಾಂತ. ಇದನ್ನು ಲೆಕ್ಕಕ್ಕೆ ತೆಗೆದುಕೊಳ್ಳದ ವಿದಾತನ ಬಗ್ಗೆ ನಿರಾಶೆ ಬಂದಿರುತ್ತಿತ್ತು" ಎಂದು ಹೇಳಿದರು. ತಮ್ಮ ಜೀವನದ ಪೂರ್ವಾರ್ಧದಲ್ಲಿ ಸಿದ್ಧಾಂತಕ್ಕೆ ಪ್ರಯೋಗಗಳಿಂದ ಪುರಾವೆ ಅಗತ್ಯವೆಂದು ನಂಬಿದ್ದ ಐನ್‌ಸ್ಟೈನ್ ಈ ರೀತಿ ಒಂದು ಒಳ್ಳೆಯ ಸಿದ್ಧಾಂತದಿಂದಲೇ ಸತ್ಯವನ್ನು ಕಂಡುಹಿಡಿಯಬಹುದು ಎಂಬ ಅಭಿಪ್ರಾಯಕ್ಕೆ ಬರುತ್ತಿದ್ದರು. ಈ ಪರೀಕ್ಷೆಯ ಪರಿಣಾಮಗಳನ್ನು ಪರಿಶೀಲಿಸಿ ಮ್ಯಾಕ್ಸ್ ಪ್ಲಾಂಕ್, "ನೀವು ಹಲವಾರು ಬಾರಿ ಇದರ ಬಗ್ಗೆ ಯಾವ ಅನುಮಾನವೂ ಇಲ್ಲ ಎಂದು ಹೇಳಿದ್ದಿರಿ. ಆದರೂ ಪ್ರಯೋಗದಿಂದ ಸಾಕ್ಷಿ ಬರುವುದು ಒಳ್ಳೆಯದು" ಎಂದರಂತೆ.

೧೯೧೯ರಲ್ಲಿ ಲಂಡನ್ನಿನಲ್ಲಿ ಪ್ರತಿಷ್ಠಿತ ರಾಯಲ್ ಸೊಸೈಟಿಯ ಸಭೆಯಲ್ಲಿ ಎಲೆಕ್ಟ್ರಾನ್ ಕಣದ ಜನ್ಮದಾತ ಜೆ. ಜೆ. ಥಾಂಸನ್, "ಇದು ಮಾನವನ ಬುದ್ಧಿಶಕ್ತಿಯ ಅಮೋಘ ಸಾಧನೆ" ಎಂದು ಹೇಳಿದರು. ಗುರುತ್ವಾಕರ್ಷಣೆಯನ್ನು ವಿವರಿಸಲು ಸಾರ್ವತ್ರಿಕ ಸಾಪೇಕ್ಷ ಸಿದ್ಧಾಂತವೇ ಸರಿಯಾದ ಸಿದ್ಧಾಂತವೆಂದು ಎಲ್ಲ ಸದಸ್ಯರು ಒಪ್ಪಿದರು. ಮತ್ತೆ ಕೆಲವು ವಿಜ್ಞಾನಿಗಳು ಈ ಸಿದ್ಧಾಂತವನ್ನು ಯಾರೂ ಹಿಂದೆ ಮಾಡದ ಮಹಾ ಬೌದ್ಧಿಕ ಆಯಾಮವೆಂದು ಕರೆದರು. ಅನಂತರ ಮುಂದೆ ನಡೆಸಿದ ಸುಧಾರಿತ ಪ್ರಯೋಗಗಳೂ ಈ ಬಾಗುವಿಕೆಯನ್ನು ತೋರಿಸಿದವು. ಈ ಗ್ರಹಣದ ವೀಕ್ಷಣೆಗಳು ಅವರ ಸಿದ್ಧಾಂತಕ್ಕೆ ಪುರಾವೆ ಒದಗಿಸಿದ ನಂತರ ಐನ್‌ಸ್ಟೈನ್ ಕೀರ್ತಿಯ ತುದಿಯನ್ನು ಮುಟ್ಟಿದರು. ಅವರ ಸಿದ್ಧಾಂತಗಳನ್ನು ನಿಜವಾಗಿಯೂ ಎಷ್ಟು ಜನ ಅರ್ಥಮಾಡಿಕೊಂಡರೋ ತಿಳಿಯದು. ಆದರೆ ಈ ವಿಜ್ಞಾನಿ ಪ್ರಪಂಚಕ್ಕೆ ಏನೋ ಹೊಸದನ್ನು ತಂದಿದ್ದಾನೆ ಎಂಬುದನ್ನಂತೂ ಅನೇಕರು ಅರಿತಂತೆ ತೋರಿತು.

ಇದಲ್ಲದೆ ಸಾರ್ವತ್ರಿಕ ಸಾಪೇಕ್ಷ ಸಿದ್ಧಾಂತಕ್ಕೆ ಇತರ ಮುಖ್ಯ ಪುರಾವೆಗಳೂ ಸಿಕ್ಕವು. ಅವೆಂದರೆ : (೧) ಸೂರ್ಯನ ಸುತ್ತ ಪರಿಭ್ರಮಿಸುತ್ತಿರುವ ಬುಧ ಗ್ರಹ ಪ್ರತಿ ಸುತ್ತಿನ ಬಳಿಕ ಹಿಂದೆ ಇದ್ದ ಜಾಗಕ್ಕೆ ಬರುವುದಿಲ್ಲ. ಇದು ಅದರ ಪುರರವಿಯ (ಕಕ್ಷೆಯಲ್ಲಿ ಸೂರ್ಯನ ಹತ್ತಿರದ ಬಿಂದು) ಅಯನದಲ್ಲಿ ಗೋಚರವಾಗುತ್ತದೆ (ಪ್ರಿಸಿಷನ್ ಆಫ್ ಪೆರಿಹೀಲಿಯನ್) ಐನ್‌ಸ್ಟೈನರು ೧೯೧೫ರಲ್ಲಿ ತಮ್ಮ ಹೊಸ ಸಿದ್ಧಾಂತದ ಮೂಲಕ. ಇದನ್ನು ಹೀಗೆ ವಿವರಿಸಿದರು; (೨) ಗುರುತ್ವ ಇರುವ ಕ್ಷೇತ್ರದಲ್ಲಿ ಬೆಳಕೂ ಕೂಡ ಬಾಗುವುದರಿಂದ ಗುರುತ್ವದ ಮಸೂರ (ಗ್ರಾವಿಟೇಷನಲ್ ಲೆನ್ಸಸ್)ಗಳೂ ಸೃಷ್ಟಿಯಾಗುತ್ತವೆ. ೧೯೭೯ರಲ್ಲಿ ಅಂತಹ ಆಕಾಶಕಾಯವನ್ನು ಮೊದಲು ಕಂಡುಹಿಡಿಯಲಾಯಿತು; (೩) ಹೆಚ್ಚು ಗುರುತ್ವ ಇರುವ ಪ್ರದೇಶವನ್ನು ಬೆಳಕು ದಾಟಿ ಬರುವಾಗ ಅದರ ತರಂಗಾಂತರ ಕೆಂಪಿನ ಕಡೆ ಪಲ್ಲಟವಾಗುತ್ತದೆ. ೧೯೫೯ರ ಪ್ರಯೋಗವೊಂದರಲ್ಲಿ ಇದಕ್ಕೂ ಪುರಾವೆ ಸಿಕ್ಕಿತು.

**ಪಾಲಹಳ್ಳಿ ವಿಶ್ವನಾಥ್**
ನಂ. ೯, ಕಾಳಪ್ಪ ರಸ್ತೆ, ಬಸವನಗುಡಿ
ಬೆಂಗಳೂರು – ೫೬೦ ೦೦೪

ಕಾವ್ಯಲೋಕ

# ಚೆಲುವು

ಎಲ್ಲಿ ಸಮರಸ–ಸಾಮಗಾನ ಪಲ್ಲವಿಸುವುದೋ
ಎಲ್ಲಿ ತುಚ್ಛ ಸ್ವಾರ್ಥದ ಕೊಳಕಿರದೋ
ಎಲ್ಲಿ ಗೆಯ್ಮೆಯೆ ನಿತ್ಯ ಉತ್ಸವವಿಹುದೋ
ಅಲ್ಲಿಹುದು ಚೆಲುವು

ಎಲ್ಲಿ ಸೋದರ–ಸೋದರಿ ಭಾವವಿಹುದೋ
ಎಲ್ಲಿ ಮನಸು ಮತಾಂಧತೆಯಲಿ ಮಲಿನವಾಗಿರದೋ
ಎಲ್ಲಿ ನಿಸ್ಪೃಹ ಪ್ರೀತಿ ಚಿಲುಮೆ ಚಿಮ್ಮುತಿಹುದೋ
ಅಲ್ಲಿಹುದು ಚೆಲುವು

ಎಲ್ಲಿ ಹಸಿವಿನ ಹಾಹಾಕಾರವಿರದೋ
ಎಲ್ಲಿ ಎಳೆ ಮಕ್ಕಳ ಕಣ್ಣ ಕಾಂತಿ ಕುಂದಿರದೋ
ಎಲ್ಲಿ ದುಡಿಯಬಲ್ಲ ತೋಳು ನಿರಾಶವಾಗಿರದೋ
ಅಲ್ಲಿಹುದು ಚೆಲುವು

ಎಲ್ಲಿ ನಾರಿ ಮುಕ್ತಳಿಹಳೋ
ಎಲ್ಲಿ ಜ್ಞಾನ ಝರಿಯು ರಾಡಿಯಾಗಿರದೋ
ಎಲ್ಲಿ ವಿಜ್ಞಾನ ದೃಷ್ಟಿ ನಿತ್ಯನಿರುತವು ಕಾಣುತಿಹುದೋ
ಅಲ್ಲಿಹುದು ಚೆಲುವು

ಎಲ್ಲಿ ವಿಪ್ಲವ ಚೈತನ್ಯ ಹೊಮ್ಮುತಿಹುದೋ
ಎಲ್ಲಿ ಸಮಷ್ಟಿಗಾಗಿಯೇ ಹೊಸ ಸೃಷ್ಟಿ ಇಹುದೋ
ಎಲ್ಲಿ ಶ್ರಮ ಬಂಡವಾಳಕೆ ಬಂಧಿತವಾಗಿರದೋ
ಅಲ್ಲಿಹುದು ಚೆಲುವು

**ಡಾ॥ ಸತ್ಯಪ್ರಕಾಶ್ಮಣಿಮುಂಡ**
ವಿಜ್ಞಾನಿ (ಸಹಾಯಕ ನಿರ್ದೇಶಕ), ಭಾರತೀಯ ವೈದ್ಯಕೀಯ ಸಂಶೋಧನಾ ಸಂಸ್ಥೆ
ಪೂನಹಳ್ಳಿ ಕ್ರಾಸ್, ಬೆಂಗಳೂರು – ೫೬೨೧೧೦

# ಸಂವಿಧಾನದಡಿ 'ಉಪನಿಷತ್ತು'ಗಳ ದುಷ್ಪರಿಣಾಮಗಳನ್ನು ಹೊಸಕಬೇಕು

'ಭಾರತೀಯ ಜ್ಞಾನ'ದ ಮಹತ್ವದ ದಾರ್ಶನಿಕ ಗ್ರಂಥಗಳೆಂದು ಉಪನಿಷತ್ತುಗಳನ್ನು ಪರಿಗಣಿಸಲಾಗಿದ್ದು, ಅವುಗಳಲ್ಲಿರುವ ಚಿಂತನೆ, ತತ್ವಜ್ಞಾನ ಮತ್ತು ಆಧ್ಯಾತ್ಮಿಕ ವಿಚಾರಗಳ ಕುರಿತು ಭಾರತೀಯ ಮತ್ತು ಪಾಶ್ಚಿಮಾತ್ಯ ತತ್ವಜ್ಞಾನಿಗಳು ಅಧ್ಯಯನ ಮತ್ತು ಸಂಶೋಧನೆಯ ಮೂಲಕ ವ್ಯಾಖ್ಯಾನಿಸಿದ್ದಾರೆ. ಅವರ ಸಂಶೋಧನೆಯಿಂದ ಹೊರಬಂದ ಚಿಂತನೆ ಮತ್ತು ದಾರ್ಶನಿಕತೆಯನ್ನು ಪ್ರಸ್ತುತ ಜನಾಂಗಕ್ಕೆ ತಿಳಿಸುವುದು ಮಹತ್ವದ್ದಾಗಿದೆ.

ಇವು ವೇದವಾಙ್ಮಯದಲ್ಲಿ ಬ್ರಹ್ಮನ ಸ್ವರೂಪವನ್ನು ನಿರೂಪಿಸಿರುವ ಜ್ಞಾನ ಕಾಂಡಗಳು ಎಂದು ಪ್ರಸಿದ್ಧವಾಗಿವೆ. ವೇದವೆಂದರೆ ಜ್ಞಾನ. ವೇದಾಂತವೆಂದರೆ ಜ್ಞಾನದ ಕೊನೆ. ಕೊನೆ ಎಂದರೆ ಸಾವು. ಹೀಗಾಗಿ ಉಪನಿಷತ್ತೆಂದರೆ ಮೃತ ಜ್ಞಾನಕಾಂಡಗಳು. ಇವು ದೇಶದಲ್ಲಿ ಜ್ಞಾನದ ಬೆಳವಣಿಗೆಗೆ ತಡೆಯೊಡ್ಡಿದವು ಎನ್ನಲೇಬೇಕು. ಅಲ್ಲದೆ, ಇವು ಕಬ್ಬಿಣದ ಯುಗಕ್ಕೆ ಮುಂಚಿನ ಕಾಲದ ಜೀವನ ಮತ್ತು ಚಿಂತನೆಯನ್ನು ಬಿಂಬಿಸುತ್ತವೆ. ಉಪನಿಷತ್ತುಗಳು ಒಂದು ಬಗೆಯ ನಕಾರಾತ್ಮಕ ಬೆಳವಣಿಗೆಗೆ ಪೂರಕ ಎಂಬುದು ನನ್ನ ಅನಿಸಿಕೆ. ಕ್ರಿಯಾಶೀಲತೆಗೆ ಇಲ್ಲಿ ಬೆಲೆಯಿಲ್ಲ. ಶೋಷಣೆಯೇ ಪ್ರಮುಖವಾಗಿದೆ.

ಉಪನಿಷತ್ತೆಂದರೆ ಗುರುವಿನ ಬಳಿ ಶಿಷ್ಯರು ಜ್ಞಾನಾರ್ಜನೆಗಾಗಿ ಕುಳಿತುಕೊಳ್ಳುವುದು ಎಂದರ್ಥ. ಈ ಜ್ಞಾನ ಮುಖ್ಯವಾಗಿ ಸಂಸಾರದ ಬೀಜಾದಿಗಳನ್ನು ನಾಶಗೊಳಿಸುವುದಾಗಿದೆ. ಯಾಜ್ಞವಲ್ಕ್ಯರು ಉಪನಿಷದ್ ಯುಗದ ಪ್ರಮುಖ ವ್ಯಕ್ತಿಯಾಗಿದ್ದು, ಅವರ ಉದ್ಯೋಗ ಪಶುಸಂಗೋಪನೆಯಾಗಿತ್ತು. ಆದ ಕಾರಣ ಗೋವು ಮತ್ತು ಅದರ ಒಡೆಯ ಉಪನಿಷತ್ತಿನ ರಚನೆ ಮತ್ತು ಚಿಂತನೆಯ ಹಿಂದೆ ಇರುವುದು ಕಾಣುತ್ತದೆ. ಉಪನಿಷತ್ತುಗಳು ಮೂಲತಃ ಪ್ರಾಚೀನ ವಿಚಾರಧಾರೆಗಳಿಂದ ಕೂಡಿದ್ದು, ಅವುಗಳ ಬೋಧನೆಯನ್ನು ಕೆಲವು ವರ್ಗಗಳ ಗುರುಗಳು ವ್ಯಾಪಾರೀಕರಣಕ್ಕೆ ಒಳಪಡಿಸಿದ್ದರು. ಇವರು ತಮ್ಮ ಆಶ್ರಮಗಳ ಸುತ್ತಮುತ್ತಲಲ್ಲಿ ಗೋಮಾಳಗಳನ್ನು ಸ್ಥಾಪಿಸಿ, ರಕ್ಷಣೆಗಾಗಿ ವಿದ್ಯಾರ್ಥಿಗಳನ್ನು ನೇಮಿಸಿಕೊಂಡಿದ್ದರು. ಯಜ್ಞಾದಿಗಳನ್ನು ನಡೆಸುವ ಬಗ್ಗೆ ಈ ಗುರು–ಶಿಷ್ಯರ ನಡುವೆ ಸಂವಾದಗಳು ನಡೆಯುತ್ತಿದ್ದವು. ಉಪನಿಷತ್ತುಗಳು ಸಾಮಾನ್ಯವಾಗಿ ಇಂತಹ ಸಂವಾದಗಳನ್ನು ಯಥಾವತ್ತಾಗಿ ನಿರೂಪಿಸಿವೆ. ಜೊತೆಗೆ ಗುರು, ಪತ್ನಿ ಹಾಗೂ ಶಿಷ್ಯರ ನಡುವೆ ಅನೈತಿಕ ಸಂಬಂಧಗಳೂ ಏರ್ಪಡುತ್ತಿದ್ದವೆಂಬ ಅಂಶವನ್ನು ಛಾಂದೋಗ್ಯೋಪನಿಷತ್ತು ತನ್ನ ೧೧ನೇ ಖಂಡದಲ್ಲಿ ತಿಳಿಸುತ್ತದೆ.

ಸುರೇಂದ್ರನಾಥ್ ದಾಸ್‌ಗುಪ್ತಾ ಅವರು 'ಉಪನಿಷತ್ತುಗಳು ವೈದಿಕ ಸಾಹಿತ್ಯದ ಕೊನೆಯ ಭಾಗವಾಗಿದ್ದು, ಅವುಗಳನ್ನು ವೇದಾಂತಗಳೆಂದು ಕರೆಯಲಾಗಿದೆ. ಅವುಗಳನ್ನು ಉತ್ಕೃಷ್ಟ ವಿಚಾರಗಳ ಭಂಡಾರವೆಂದು ಕರೆಯಲಾಗಿದ್ದು, ಹಿಂದೂಗಳಿಗೆ ಅವು ಶ್ರೇಷ್ಠ ಗ್ರಂಥಗಳಾಗಿವೆ. ಹಿಂದೂಧರ್ಮದ ಅನೇಕ ಸಂಸ್ಥೆಗಳು ಉಪನಿಷತ್ತುಗಳಿಗೆ ತಮ್ಮ ಅನುಕೂಲಕ್ಕೆ ತಕ್ಕಂತೆ ಅರ್ಥ ವಿವರಣೆ ನೀಡಿ, ತಾವು ಮಾತ್ರ ವೈದಿಕ ಸಾಹಿತ್ಯದ ಪ್ರತಿನಿಧಿಗಳು ಎಂದು ಬಿಂಬಿಸಿಕೊಂಡಿವೆ. ಇದು ಅತ್ಯಂತ ದುರಹಂಕಾರೀ ಪ್ರವೃತ್ತಿ' ಎಂದು ಬರೆದಿದ್ದಾರೆ.

ಉಪನಿಷತ್ ಕರ್ತೃಗಳು ವೃತ್ತಿಯಿಂದ ಪುರೋಹಿತರಾಗಿದ್ದು, ಸ್ವಾರ್ಥಿಗಳೂ, ಕ್ರೂರಿಗಳೂ ಆಗಿದ್ದರು ಎನ್ನಲಾಗಿದೆ. ಫ್ರೆಂಚ್ ಇಂಡಾಲಜಿಸ್ಟ್ ಸಿಲ್ವನ್ ಲೆವಿ ಕೂಡ ಇದನ್ನೊಪ್ಪುತ್ತಾರೆ. ಅಮೆರಿಕಾದ ಎಚ್. ಇ. ಹಾಪ್ಕಿನ್ಸ್ 'ದುರಾಸೆಯಿಂದ ಕೂಡಿದ ಈ ಪುರೋಹಿತರು ವಸ್ತ್ರ, ಅಶ್ವ, ಚಿನ್ನಗಳೊಂದಿಗೆ ಒಂದು ಸಾವಿರ ಗೋವುಗಳನ್ನು ಶುಲ್ಕ ರೂಪದಲ್ಲಿ ಪಡೆಯಲು ರಾಜ ಮತ್ತು ಜನರನ್ನು ಒತ್ತಾಯಿಸುತ್ತಿದ್ದರು. ಇದರಿಂದ ಸ್ವರ್ಗದಲ್ಲಿರುವ ದೇವತೆಗಳು ತೃಪ್ತರಾಗುತ್ತಾರೆಂದು ನಂಬಿಸುತ್ತಿದ್ದರು' ಎಂದು ಬರೆಯುತ್ತಾರೆ. ಸಮಾಜಶಾಸ್ತ್ರಜ್ಞ ಜರ್ಮನಿಯ ಮ್ಯಾಕ್ಸ್ ವೆಬೆರ್ 'ಬ್ರಾಹ್ಮಣ ಪುರೋಹಿತನ ಬೇಡಿಕೆಯನ್ನು ವಿರೋಧಿಸಿದರೆ ದೈವಶಾಪ ತಟ್ಟುತ್ತದೆ ಎಂದು ಆತ ಹೆದರಿಸುತ್ತಿದ್ದನು' ಎಂದಿದ್ದಾರೆ. ರಿಚರ್ಡ್ ಗಾರ್ಬೆ ಪುರೋಹಿತ ವರ್ಗದ ಸ್ವಾರ್ಥ–ಲಾಲಸೆಗಳ ಬಗ್ಗೆ ಬರೆಯುತ್ತ 'ಪುರೋಹಿತರು ತಾವು ನಡೆದಾಡುವ ದೇವರುಗಳೆಂದೂ, ತಾವು ವೇದಗಳ ಪ್ರತಿನಿಧಿಸುವವರೆಂದೂ ಮೆರೆಯುತ್ತಿದ್ದರು. ಇವರ ದುರಾಸೆಗೆ ಮಿತಿಯೇ ಇರಲಿಲ್ಲ. ಯಜ್ಞ–ಯಾಗಾದಿಗಳ ಮೂಲಕ ಜನರನ್ನು ಶೋಷಿಸುತ್ತಿದ್ದರು. ಅಕ್ರಮ ಸಂಬಂಧಗಳನ್ನೂ ಹೊಂದಿದ್ದರು' ಎಂದು ಹೇಳಿದ್ದಾರೆ. ಉಪನಿಷತ್ತುಗಳು ಉಚ್ಛ್ರಾಯ ಸ್ಥಿತಿಯ ಆಧ್ಯಾತ್ಮಿಕ ಚಿಂತನೆಯ ಉತ್ಪನ್ನ ಎಂಬುದನ್ನು ನಾನು ಒಪ್ಪುತ್ತೇನೆ. ಆದರೆ, ಅವುಗಳ ಕರ್ತೃಗಳ 'ಅಡ್ಡದಾರಿ'ಗಳನ್ನು ಹೇಗೆ ಒಪ್ಪಲಿ ? ಮ್ಯಾಕ್ಸ್ ಮುಲ್ಲರ್ ಹೇಳುವಂತೆ 'ಉಪನಿಷತ್ತುಗಳು ಉದಾಹರಣೆಗಳನ್ನು ನೀಡುತ್ತವೆಯೇ ವಿನಾ ಪುರಾವೆಗಳನ್ನಲ್ಲ.' ಅಮೆರಿಕಾದ ಇಂಡಾಲಜಿಸ್ಟ್ ಫ್ರಾಂಕ್ಲಿನ್ ಎಡ್ಗರ್ಟನ್ ಹೇಳುವಂತೆ 'ಉಪನಿಷತ್ತುಗಳಲ್ಲಿ ಬ್ರಾಹ್ಮಣರು ಬಳಸುತ್ತಿದ್ದ ಮಾಂತ್ರಿಕ ಕ್ರಿಯೆಗಳ ಬಗ್ಗೆ ಉಲ್ಲೇಖವಿದೆ.'

ಉಪನಿಷತ್ತುಗಳಿಗೆ ನಿರ್ದಿಷ್ಟವಾದ ಒಂದು ದರ್ಶನ ಎಂಬುದೇ ಇಲ್ಲ. 'ಉಪನಿಷತ್ತುಗಳು ಶಬ್ದಾಡಂಬರದಿಂದ ಕೂಡಿದುವೇ ವಿನಾ ತಾರ್ಕಿಕ ಗ್ರಂಥಗಳಲ್ಲ' ಎನ್ನುತ್ತಾರೆ ಮ್ಯಾಕ್ಸ್ ಮುಲ್ಲರ್. ಮತ್ತೊಬ್ಬ ವಿದ್ವಾಂಸರ ಪ್ರಕಾರ 'ಉಪನಿಷತ್ತುಗಳು ಒಂದು ಹಳೆಯ, ಶಿಥಿಲವಾದ ಕಾಲದಲ್ಲಿ ಅನಾಗರಿಕ ಸಮುದಾಯದಿಂದ ರಚಿಸಲ್ಪಟ್ಟ ಗ್ರಂಥಗಳಾಗಿವೆ.' ಅಲ್ಬರ್ಟ್ ಶ್ವಾಯ್‌ಟ್ಜರ್ ಹೇಳುವಂತೆ 'ಉಪನಿಷತ್ತುಗಳಲ್ಲಿ ಇರಬೇಕಾಗಿದ್ದ ಪರಿಪೂರ್ಣತೆ ಕಂಡುಬಂದಿಲ್ಲ.' ಮಾರಿಸ್ ಬ್ಲೂಂ ಫೀಲ್ಡ್ ಅಭಿಪ್ರಾಯದಲ್ಲಿ 'ಉಪನಿಷತ್ತುಗಳಲ್ಲಿ ಕಂಡುಬರುವ ವಿರೋಧಾಭಾಸಗಳು ಅನಿಶ್ಚಿತ ಮತ್ತು ಮೂರ್ಖ ಹೇಳಿಕೆಗಳು, ಕಿರಿಕಿರಿ ಉಂಟುಮಾಡಿವೆ.' ಉದಾಹರಣೆಗೆ 'ಕನಸಿಲ್ಲದ ನಿದ್ರಾವಸ್ಥೆಯ ಮೂಲಕ ಬ್ರಹ್ಮಜ್ಞಾನ ಪಡೆಯಬಹುದು, ಬ್ರಹ್ಮನನ್ನು ಸೇರಬಹುದು' ಎಂಬ ಸಂಗತಿ, ಯಾಜ್ಞವಲ್ಕ್ಯರು ಹೇಳುವ 'ಉತ್ಕೃಷ್ಟವಾದ ನಿರಂತರ ಸಂತೋಷ ಹೊಂದಲು ಮನುಷ್ಯ ಮರಣವನ್ನರಸಬೇಕು' ಎಂಬ ಮಾತುಗಳು ಉಪನಿಷತ್ತಿನ ದರ್ಶನ ಶಾಸ್ತ್ರವಾಗಿದೆ. ಮಾನಸಿಕ ದೌರ್ಬಲ್ಯದ ಮೂಲಕ ಅಮರತ್ವವನ್ನು ಗಳಿಸಬಹುದೆನ್ನುವ ಉಪನಿಷತ್ಕಾರರ ಉಪದೇಶಗಳು ಹಾಸ್ಯಾಸ್ಪದ ಎನ್ನಿಸುತ್ತದೆ. ಡಾ॥ ಎಸ್. ರಾಧಾಕಷ್ಣನ್ ಸಹಾ 'ಇವುಗಳಲ್ಲಿ ಅನೇಕ ಅವೈಜ್ಞಾನಿಕ ಮತ್ತು ಅವ್ಯವಸ್ಥಿತ ಅಂಶಗಳು ಕಂಡುಬಂದಿವೆ' ಎನ್ನುತ್ತಾರೆ.

ಇನ್ನು ಸ್ತ್ರೀಯರನ್ನಂತೂ ಉಪನಿಷತ್ತುಗಳು ಅತಿ ಕೀಳಾಗಿ ಕಂಡಿವೆ. ಗರ್ಭೋಪನಿಷತ್ತು ತಾಯಿ ಗರ್ಭವನ್ನು 'ನರಕದ ಬೇಯುವ ಕಡಾಯಿ' ಎನ್ನುತ್ತದೆ. ಬೃಹದಾರಣ್ಯಕ ಹಾಗೂ ನಾರದ ಪರಿವ್ರಾಜಕೋಪನಿಷತ್ತುಗಳು ಇನ್ನೂ ಕೀಳಾಗಿ ಬಣ್ಣಿಸುತ್ತವೆ : 'ಸ್ತ್ರೀಯರು ಶೋಕವೆಂಬ ಸರಪಳಿಗೆ ಪುರುಷರನ್ನು ಬಂಧಿಸುತ್ತಾರೆ... ಅವರ ರಹಸ್ಯ ಸ್ಥಳ ಮತ್ತು ಕೊಳೆತ ಹಣ್ಣಿನ ನಡುವೆ ಯಾವ ವ್ಯತ್ಯಾಸವೂ ಇಲ್ಲ.'

ಕರ್ಮ ಮತ್ತು ಪುನರ್ಜನ್ಮ ಸಿದ್ಧಾಂತಗಳು ಉಪನಿಷದ್ ಯುಗದ ಎರಡು ರಾಕ್ಷಸ ಮಕ್ಕಳಾಗಿವೆ. ಯಾಜ್ಞವಲ್ಕ್ಯರನ್ನು ಕರ್ಮ ಸಿದ್ಧಾಂತದ ಕರ್ತೃವೆಂದೂ, ಪ್ರವಹಣಿ ಜೈವಲಿಯನ್ನು ಪುನರ್ಜನ್ಮ ಸಿದ್ಧಾಂತದ ಸಾಕುತಂದೆಯೆಂದೂ ಪರಿಗಣಿಸಲಾಗಿದೆ. ಇವೆರಡೂ ಸಿದ್ಧಾಂತಗಳು ಅಸಮಾನತೆಯನ್ನು ಸಮರ್ಥಿಸುತ್ತವೆ. ಇವರಲ್ಲಿ ಉದ್ದಾಲಕನೊಬ್ಬ ಮಾತ್ರ ಹೆಚ್ಚು ಪ್ರಾಮಾಣಿಕನಾಗಿದ್ದನು. ರೂಬೆನ್ ಹೇಳುವಂತೆ 'ಉದ್ದಾಲಕ ದೇವರ ಅಸ್ತಿತ್ವವನ್ನು ನಿರಾಕರಿಸದಿದ್ದರೂ ಗಾಳಿಯು ಎಲ್ಲದರ ಮೂಲ ಮತ್ತು ಅಂತಿಮ ಸತ್ಯ ಎಂದು ತಿಳಿಸಿದನು. ಈತ ವೈಜ್ಞಾನಿಕ ಚಿಂತನೆ ಹೊಂದಿದ್ದನು. ಆತ್ಮ, ಕರ್ಮ, ಪುನರ್ಜನ್ಮ, ಮೋಕ್ಷಗಳ ಬಗ್ಗೆ ಈತ ಏನನ್ನೂ ಹೇಳುವುದಿಲ್ಲ. ಆದರೆ, ದೈವೀಶಕ್ತಿಯ ಬಲವಿಲ್ಲದೆ, ಶೂನ್ಯದಿಂದ ಶೂನ್ಯವು ಹೊರಹೊಮ್ಮಲಾರದು ಎಂದಿದ್ದಾನೆ. ಆತ್ಮ ಮತ್ತು ಪ್ರಕೃತಿ ಎರಡೂ ಒಂದೇ ಎಂದು ಸ್ಪಷ್ಟೀಕರಿಸಿದ್ದಾನೆ.' ಉದ್ದಾಲಕನ ಅಭಿಪ್ರಾಯಗಳೇ ಮುಂದುವರಿದಿದ್ದರೆ ನಮ್ಮ ಇತಿಹಾಸವು ಸಂಪೂರ್ಣ ಬದಲಾಗುತ್ತಿತ್ತು. ಆದರೆ ಹಾಗಾಗಲಿಲ್ಲ.

**ಡಾ॥ ಸಿ. ಚಂದ್ರಪ್ಪ**
ಇತಿಹಾಸ ಪ್ರಾಧ್ಯಾಪಕರು
ಸರಕಾರಿ ಪ್ರಥಮ ದರ್ಜೆ ಕಾಲೇಜು, ವರ್ತೂರು, ಬೆಂಗಳೂರು

# ಸೊಲ್ಲದಾರಿ

ಹಿಂಗೆ ಹನ್ನೆರಡನೇ ಶತಮಾನದಲ್ಲಿ ತಳವರ್ಗದೋರೆಲ್ಲಾ ಧೈರ್ಯವಾಗಿ ಬರೆಯೋಕೆ ಶುರು ಮಾಡಿದ್ರು. ತಮ್ಮ ಅಸ್ಮಿತೆಯನ್ನು ಅವರು ಎಷ್ಟು ನಿರ್ಭಯವಾಗಿ ಕಟ್ಟಿದ್ದಾರೆ ಅನ್ನಕೆ ಈ ವಚನಗಳೇ ಸಾಕ್ಷಿ. ಅವ್ರಿಗೆ ಇದು ಸಾಧ್ಯವಾಗಿದ್ದು ಸೊಲ್ಲಿನಿಂದ. ಸೊಲ್ಲು ನಮ್ದು ಆದಾಗ ಮಾತ್ರ ಇದು ಸಾಧ್ಯ. ಅಲಕ್ಷಿತ ಶರಣೆಯರು ಅಂತ ಇವರನ್ನ ಕರ್ದಿದ್ರೂ ಇವರ ವಚನಗಳು ಮಾತ್ರ ಅದ್ಭುತ. ಸಂಖ್ಯೆಯಲ್ಲಿ ಬಹಳ ಕಡಿಮೆ. ಬೆರಳೆಣಿಕೆಯಷ್ಟೇ ವಚನಗಳು ಆಗಿದ್ರೂ ಅಷ್ಟರಲ್ಲೇ ತಮ್ಮ ವೈಯಕ್ತಿಕತೆಯ ಜತೆಗೆ ಸ್ತ್ರೀ ಸಂವೇದನೆ ಮತ್ತು ಅದರಲ್ಲೂ ವಿಭಿನ್ನತೆಯನ್ನು ನಾವು ಕಾಣಬಹುದಾಗಿದೆ. ಇವ್ರ ಒಂದೊಂದು ವಚನಾನೂ ಒಂದು ಇಡೀ ವ್ಯಕ್ತಿತ್ವದ ಉಸಿರಿನ ಪ್ರತಿಬಿಂಬ ಆಗಿದವೆ. ಇದೇ ಸೊಲ್ಲು.

ಮಾನವನ ಬದುಕಿಗೆ ಆಯಾಮ ಕೊಡೋದೇ ಈ ಮಾತು, ನುಡಿ, ಸೊಲ್ಲು, ವಿಚಾರ, ಅಭಿವ್ಯಕ್ತಿ ಇತ್ಯಾದಿ... ವಿಶ್ವಮಾನ್ಯ ವಿಚಾರಗಳನ್ನಾಗಲೀ... ಜೀವನವನ್ನಾಗಲೀ... ಸಾವಧಾನವಾಗಿ, ಸಮಗ್ರವಾಗಿ ಕಾಣೋದಕ್ಕೆ ಅಭಿವ್ಯಕ್ತಿ ಸ್ವಾತಂತ್ರ್ಯ ಬಹಳ ಮುಖ್ಯ. ನುಡಿಮಾರ್ಗ..., ಇದು ನನ್ನದಲ್ಲ. ಈ ಮಾರ್ಗದಲ್ಲಿ ನನ್ನನ್ನು ನಡೆಯೋಕೇ ಬಿಟ್ಟಿಲ್ಲ. ಮೈಲಿಗೆ ಅನ್ನೋ ಹೆಸರಲ್ಲಿ ಈ ಸಮಾಜ ಈ ಮಾರ್ಗದಿಂದ ನನ್ನನ್ನು ದೂರ ಇಟ್ಟ ಕಾರಣ ನಾನು ಈ ಮಾರ್ಗಕ್ಕೇ ಬಂದೇ ಇಲ್ಲಾ... ಬರದೂ ಇಲ್ಲಾ...

ನನ್ದು ಸೊಲ್ಲು. ಸೊಲ್ಲಿನವಳು ನಾನು... ಸೊಲ್ಲಿನ ದಾರಿ ನಂದು. ಕಾಲ್ದಾರಿ ಎಲ್ಲಾ. ಕಾಲು ಹೆಂಗೆಂಗೋತ್ತೋ ಹಂಗಂಗೇ ದಾರಿ. ಹೊಲ್ದಾಗಿನ್ ಬದುವಿನ್ಮೇಲಿರ್ಬೋದು... ಕಾಡ್ನಾಗಿರ್ಬೋದು... ಬಟಾ ಬಯಲ್ನಗೆ ನಾನು ನಡ್ದ ದಾರಿ ಇರ್ಬೋದು... ಅದು ನನ್ದಾರಿ, ನನ್ ಸಮುದಾಯದ ದಾರಿ, ನನ್ ಸೊಲ್ಲನ್ನ ಯಾರ್ಯಾರು ಆಡ್ತಾರೋ ಅವರ್ದೆಲ್ಲರ ದಾರಿ. ಇಲ್ಲಿ ಕಷ್ಟಪಡದು ಬೇಕಿಲ್ಲ. ಒಂದು ಹುಟ್ಟಿನ ಜತೆ ಒಂದು ಮಾತು ಬಂದ್ರೆ ಆ ಮಗುವಿಗೆ ಒಂದು ಸೊಲ್ಲು ಸಿಕ್ಕಂಗೆ. ಅದನ್ನ ತಾಯಿ ಕಲಿಸ್ತಾಳೆ, ತಂದೆ ಕಲಿಸ್ತಾನೆ, ಬಂಧು ಬಳಗ ಕಲಿಸ್ತೇತೆ, ಹೊರಗ್ಬಂದ್ರೆ ನಮ್ಮಟ್ಟಿ ಕಲಿಸ್ತೇತೆ, ಒಂದು ಸಮುದಾಯ ಕಲ್ಸುತ್ತೆ. ಈ ಸಮುದಾಯಕ್ಕೆ ಸೇರಿದ್ದೇ ಸೊಲ್ಲು. ಇಲ್ಲಿ ಯಾರ ಭಯಾನು ಇಲ್ಲ. ಇಲ್ಲಿ ಸಂಬಂಧಗಳಿದಾವೆ, ಪ್ರೀತಿಯಿದೆ, ರಕ್ಷಣೆಯಿದೆ. ಬಡತನ ಸಿರಿತನ ಏನೇ ಇರ್ಬೋದು, ಒಂದು ಸೊಲ್ಲನ್ನು ಆಡೋರೆಲ್ಲಾ ಒಂದು ಕಡೆ ಇರ್ತೀವಿ. ಈ ಸೊಲ್ಲು ಒಳಗಿಂದ ಬರಂತದ್ದು, ನೈಜವಾದ್ದು. ನುಡಿಗೆ ಬಂದ್ರೆ ಅದು ಆಮೇಲೆ ಕಲಿತ್ಗಂಡಿದ್ದು... ನೋಡಿ ಇಮಿಟೇಟ್ ಮಾಡಿದಂತದ್ದು. ಸೊಲ್ಲಿಗಿರುವಷ್ಟು ಆಳ, ಅರ್ಥ, ಸ್ವಂತಿಕೆ ನುಡಿಗಿಲ್ಲ. ಸೊಲ್ಲು ಪಕ್ಕಾ ದೇಸಿ ಆದ್ರೆ ನುಡಿ ಮಾರ್ಗೀಯ ಭಾಷೆ. ಒಂದು ಇಡೀ ವ್ಯಕ್ತಿತ್ವದ ಉಸಿರಿನ ಪ್ರತಿಬಿಂಬ ಸೊಲ್ಲು.

ನುಡಿಯಲ್ಲಿ ಇದನ್ನ ಕಾಣಕೆ ಸಾಧ್ಯವಿಲ್ಲಾ. ಅದೊಂದು ಪ್ರಿಟೆಂಡೆನ್ಸ್... ನಾಟಕೀಯ... ಹಾಂ, ಅದನ್ನೂ ವಿಸ್ತರಿಸ್ಬೋದು ಕನ್ನಡ ಮಾತಾಡೋರೆಲ್ಲಾ ಒಂದು ಸಮುದಾಯ ಆಗ್ಬೋದು. ಅದಕ್ಕೆ ಇನ್ನೇನೇನೋ ಅರ್ಥ ಕೊಡ್ಬೋದು. ಒಂದು ಭಾಷೆಯ ಮಾರ್ಗ, ಕನ್ನಡ ಭಾಷೆ, ಅದು ನಡೆದು ಬಂದ ಮಾರ್ಗ, ಇತ್ಯಾದಿ ಇತ್ಯಾದಿ... ಆದ್ರೆ ಅದು ನನಿಗೆ ಗೊತ್ತಿಲ್ಲ. ಅದ್ನ ನಾನು ಮಾತಾಡಲ್ಲ. ನನ್ ಮಿತಿನಗೆ ನಂದೇ ಚೌಕಟ್ನಗೆ ನಾನು ಮಾತಾಡ್ತೀನಿ, ಅದು, ಸೊಲ್ಲು. ನನಿಗೆ ಗೊತ್ತಿರದು ಅದನ್ನ ನಾನೆಂಗೆ ಕಲ್ತೆ, ಅದು ನಂಗೇನ್ ಕಲಿಸ್ತು, ನನ್ನೆಂಗೆ ಬೆಳಸ್ತು ಅದು. ಸೊಲ್ಲು ನಂಗೆ ಧೈರ್ಯ ಕೊಡ್ತು, ನನ್ ಹಿಂಜರಿಕೇನ ಅಳುಸ್ತು, ಮುಖವಾಡವನ್ನು ಕಳಚ್ತು. ಮತ್ತೆ ಈ ಸೊಲ್ಲಿನ ದಾರಿಯಗೆ ಸ್ಫೂರ್ತಿಗಾಗಿ ಬೇರೆ ಕಡಿಗೆ ನೋಡೋ ಅನಿವಾರ್ಯತೆ ಎದುರಾಗ್ಲಿಲ್ಲಾ. ಪ್ರಗತಿಶೀಲ ಆಧುನಿಕತೆಯ ಆಶ್ರಯನೂ ಬೇಕೆನಿಸ್ಲಿಲ್ಲಾ. ಪಶ್ಚಿಮದ ಅತಿ ಪ್ರಯೋಗಾತ್ಮಕ ಆಧುನಿಕತೆಗೆ ಜೋತು ಬೀಳುವ ಪ್ರಸಂಗವೇ ಬರ್ಲಿಲ್ಲಾ. ನಾನು ಕಲ್ತ ಸೊಲ್ಲು ನನ್ನೊಳಗ್ನಗೆ ನನ್ನ ಸಾಂಸ್ಕೃತಿಕ ಅಸ್ಮಿತೆಯನ್ನ ಅನುಭವಿಸಕೆ ನನ್ನನ್ನ ಸಮರ್ಥಳನ್ನಾಗಿಸ್ತು.

ನನ್ನ ಹಿನ್ನೆಲೆ ಬೇರೇನೇ. ಅತೀ ಕೀಳು ಎಂದು ಭಾವಿಸುವ ಮಾದಿಗ ಜನಾಂಗಕ್ಕೆ ಸೇರ್ದೋಳು. ಆದ್ರಿಂದ್ಲೇ ಆವಾಗಿನ ನನ್ನ ಆತಂಕಗಳ್ಗೆ ನಾನು ನನ್ನ ನೆಲದ ಮೂಲದಿಂದಲೇ ಪ್ರತಿಸ್ಪಂದಿಸಿದೆ. ನನ್ನ ಗಾಢವಾಗಿ ಆವರಿಸ್ಕಂಡಿದ್ದ ನನ್ನ ಜನರ ಪದ, ಕಥಾನಕ, ಅನುಭವ, ಬೇರು, ನೆಲದ ಜತೆಯಾಗಿನ ನಂಟು ಅದರೆಲ್ಲಾ ಸೊಗಡು ನನ್ನ ಸೊಲ್ಲಿನಲ್ಲಿ ಬರಹದ ಮೂಲಕ ಬಸಿಯಿತು.

ಸಾಹಿತ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಅನ್ನೋದು ಈಗಿನ ಪರಿಸ್ಥಿತಿನಗೆ ಒಂದಕ್ಕೊಂದು ವಿರುದ್ಧವಾದದ್ದು ಮತ್ತು ಆ ನುಡಿಗಟ್ಟೇ ವಿರೋಧಾಭಾಸ ಅನ್ಸುತ್ತೆ. ಭಾಷೆಯಿಂದ ಒಡಮೂಡುವ ಅಭಿವ್ಯಕ್ತಿನೇ ಸಾಹಿತ್ಯ. ಈ ಅಭಿವ್ಯಕ್ತಿಗೆ ಯಾವ್ದೇ ಅಡ್ಡಿ ಆತಂಕಗಳಿಲ್ದಿರೊ ಒಂದು ಸ್ವತಂತ್ರ ಮನಃಸ್ಥಿತಿ ಬೇಕು. ಸಾಹಿತಿಯಾದವ್ನಿಗೆ ಇದು ಅತ್ಯಂತ ಸಹಜ ಮತ್ತೆ ಅನಿವಾರ್ಯನೂ ಹೌದು. ಯಾರಪ್ಪಣೆಯನ್ನೂ ಬೇಡದ್ದು ಇದು. ತನ್ನಿಂದ ತಾನೇ ಸೊಪ್ಪಿನ್ಯಾಗಳ ಉದುಕದ ಹಂಗೆ ಒಳಗಿಂದನೇ ಬಸಿಯೋಂತದ್ದು. ತನ್ನ ಸುತ್ತಲಿನ ಆಗು ಹೋಗುಗಳಿಗೆ ಸಾಮಾಜಿಕ ಸಂದರ್ಭಕ್ಕೆ ಸಂವಾದವನ್ನು ಏರ್ಪಡಿಸಿಕೊಳ್ಳೊ ಸಲುವಾಗಿ ಸಂಭವಿಸೋ ಒಂದು ಕ್ರಿಯೆ ಇದು. ಇದನ್ನು ಹೇಳ್ತಾ ನಂಗೆ ಥಟ್ಟನೆ ಮನಸ್ಸಲ್ಲಿ ಮೂಡಿ ಬರ್ತಾ ಇರೋದು ೧೨ನೇ ಶತಮಾನದ ವಚನಕಾಲ.

ವಚನ ಅಂದರೆ ಮಾತು. ೧೨ನೇ ಶತಮಾನ ವಚನಕಾಲ

ಬಿ. ಟಿ. ಜಾಹ್ನವಿ

ಅಂದ್ರೇ ಎಲ್ಲರಿಗೂ ಮಾತು ಸಿಕ್ಕ ಕಾಲ. ಜಾತಿ, ಮತ, ವರ್ಗ, ಕಾಯಕ ಈ ಎಲ್ಲವನ್ನೂ ಮೀರಿ ಮಾತು ಬೆಳೆದು, ಮೂಡಿದ ಕಾಲ. ಅಭಿವ್ಯಕ್ತಿ ಮೆರೆದ ಕಾಲ.

ಭಾರತೀಯ ಸಾಹಿತ್ಯಕ್ಕೆ ಸುಮಾರು ಮೂರು ಸಾವಿರದ ಐನೂರಕ್ಕೂ ಹೆಚ್ಚು ಕಾಲದ ಇತಿಹಾಸವಿದ್ರೂ ೧೨ನೇ ಶತಮಾನದ ತನಕ ಹೆಣ್ಣು ದನಿ ಕೇಳಸ್ದೇ ಇದ್ದದ್ದು ಚರಿತ್ರೆಯಿಂದ ಪ್ರಜ್ಞಾಪೂರ್ವಕವಾಗಿ ಆಕೇನಾ ಹೊರಗಿಟ್ಟದ್ದರ ಪರಿಣಾಮ ಎಂಬೋದರಲ್ಲಿ ಅನುಮಾನವೇ ಇಲ್ಲಾ. ಇನ್ನು ಸೀತೆ, ಸಾವಿತ್ರೀ, ದ್ರೌಪದಿಯರು ಆದರ್ಶಗಳಾಗಿ ಜಪ ಮಾಡಕೇ ಇಲ್ಲಾ ಅಭಿನಯಿಸಿ ತೋರ್ಸಕೆ ಯೋಗ್ಯವಾದ ಮಾಡಲ್ಗಳಾಗಿ ಉಳ್ಕಂಡಿರದು ಅಷ್ಟೇ. ಇನ್ನು ಕನ್ನಡ ಸಾಹಿತ್ಯಕ್ಕೆ ಸುಮಾರು ಒಂದು ಸಾವಿರದ ಐನೂರು ವರ್ಷಕ್ಕೂ ಜಾಸ್ತಿ ಇತಿಹಾಸ ಇದ್ರೂ ಪ್ರಾರಂಭದ ಏಳೆಂಟು ಶತಮಾನಗಳು ಹೆಣ್ಣಿನ ಪಾಲಿಗೆ ಮರಳುಗಾಡೇ ಸೈ. ಬುದ್ಧ, ಮಹಾವೀರನಂತೋರೂ ಸಹ ಪ್ರಾಣಿ ಪಶುಗಳಿಗೆಲ್ಲಾ ಸಮಾನತೆಯನ್ನ ತೋರ್ಸೋ ಮಾತುಗಳನ್ನ ಆಡಿದ್ರು ಹೆಣ್ಮಕ್ಕಳ ವಿಷಯ ಬಂದಾಗ ಮಾತ್ರ ಅದುವರೆಗಿನ ಹಿಂದೂ ಮತದವರಿಗಿಂತ ಭಿನ್ನವಾಗಿ ಅವರೂ ನಡ್ಕಂಡಿರಂಗೆ ಕಾಣೆ.

೧೦ನೇ ಶತಮಾನದ ಅತ್ತಿಮಬ್ಬೆ ಸ್ವತಃ ಬರಹಗಾರಳಲ್ಲದೆ ಇದ್ರೂ ಸಾಹಿತ್ಯಾಸಕ್ತಿ ವ್ಯಕ್ತಪಡಿಸಿದ ಮೊಟ್ಟಮೊದಲ ಹೆಣ್ಮಗಳು. ನಮ್ಮ ದಾವಣಗೆರೆಯ ಪಕ್ಕದಲ್ಲಿ ಕುಂದುವಾಡ, ಆ ಕುಂದುವಾಡ ಕೆರೆ ಏರಿ ಮೇಲೆ ಒಂದು ಶಾಸನ... ಅದರಲ್ಲಿ ದಾಖಲೆ– ೧೨೧೮ರಲ್ಲಿ ಹೊಯ್ಸಳ ರಾಜ ವೀರಬಲ್ಲಾಳನ ಮಡದಿ ಕೇತಲಾದೇವಿ ಕುಂದುವಾಡದಲ್ಲಿ ಬುಧವಾರ ಸಂತೆಯನ್ನ ಪ್ರಾರಂಭಿಸಿದ್ದು, ಕರ್ನಾಟಕದಲ್ಲೇ ಮೊಟ್ಟ ಮೊದಲಿಗೆ ಸಂತೆ ಅನ್ನೋ ಪರಿಕಲ್ಪನೆಯನ್ನ, ವ್ಯಾವಹಾರಿಕ ಜ್ಞಾನವನ್ನ ಉಂಟುಮಾಡಿದವ್ಳು, ಅವತ್ತಿನ ಹೊಯ್ಸಳರ ಹಣವನ್ನ ಚಲಾವಣೆ ಮಾಡೋದನ್ನ ಗ್ರಾಮ್ಯ ಬದುಕಿಗೆ ಕಲ್ಸಿಕೊಟ್ಟೋಳು. ಆಳುವ ವರ್ಗಕ್ಕೆ ಸುಮ್ಮನೇ ತಲೆಬಗ್ಗಿಸಿ ನಡೀಬಾರ್ದು ತಾವೇ ಆಳೋ ವರ್ಗ ಆಗ್ಬೇಕು, ಜ್ಞಾನಿಗಳಾಗ್ಬೇಕು ಅನ್ನುವಂಥ ದೂರದೃಷ್ಟಿಯುಳ್ಳೋಳು. ಸಾಂಸ್ಕೃತಿಕವಾಗಿ, ಸಾಹಿತ್ಯಕವಾಗಿ ಬದುಕನ್ನ ಹೆಂಗೆ ನಿಭಾಯಿಸ್ಕಳದು, ಗಟ್ಟಿ ಮಾಡ್ಕಳದು, ಸಜ್ಜು ಮಾಡ್ಕಳದು ಅನ್ನೋ ಮೂಲನೆಲೇನ ಸಾಮಾನ್ಯರ್ಗೆ ತಿಳಿಸಿಕೊಟ್ಟಂತಹ ಶ್ರೇಷ್ಠ ಹೆಣ್ಣು ಕೇತಲಾದೇವಿ.

**ಹಾಯ್ಕುಗಳು**

ಇನ್ನೊಬ್ಬ ಅಬಲೆಯ ಆಗಮನಕ್ಕಾಗಿ
ಕೂಗುತ್ತದೆ ಕಾಗೆ
ವೃದ್ಧಾಶ್ರಮದ ಆವರಣದಲಿ !

**ಡಾ॥ ವಿ. ಪುಗಳೇಂದಿ**
ಸಿರುಗುಪ್ಪ – ೫೮೩೧೨೧
ಬಳ್ಳಾರಿ

ಇನ್ನು ಹನ್ನೆರಡನೇ ಶತಮಾನದ ವಚನಕಾರ್ತಿಯರ ವಿಷಯಕ್ಕೆ ಬಂದರೆ ಅವರೆಲ್ಲಾ ಅಂದಿನ ಚಳುವಳಿಯ ಪ್ರವಾಹದ ಸೆಳೆವಲ್ಲೇ ಕೊಚ್ಚಿ ಬಂದೋರು. ಪರಮ ಪತಿವ್ರತೆಯರು, ಸಾಂಪ್ರದಾಯಿಕ ಆಚರಣೆಗಳನ್ನ ಶ್ರದ್ಧಾಭಕ್ತಿಗಳಿಂದ ಆಚರಿಸಿಕೊಂಡು ಬಂದೋರು. ಆದ್ರೇ ಅಭಿವ್ಯಕ್ತಿಗೆ ಸಿಕ್ಕ ಅವಕಾಶವನ್ನ ಸಂಪೂರ್ಣ ಉಪಯೋಗಿಸಿಕೊಂಡೋರು. ಆ ಸಂದರ್ಭದಲ್ಲಿ ಕಾಯಕ ನಿಷ್ಠೆ ಅವರ ಸೊಲ್ಲಿನಲ್ಲಿ ವ್ಯಕ್ತಗೊಂಡಿರೋದು ನಿಜಕ್ಕೂ ಮಹತ್ವದ ಸಂಗತಿ. ಯಾಕಂದ್ರೆ ಅದೇ ಅವರ ಅಂತರಂಗದ ನಿಜದನಿ.

ಈ ವಚನಕಾರ್ತಿಯರಲ್ಲಿ ಎರಡು ವರ್ಗ. ಅವರಂದ್ರೆ ಲಕ್ಷಿತರು, ಅಲಕ್ಷಿತರು ಅಂತ. ಲಕ್ಷಿತರು ಮೇಲ್ವರ್ಗದ ಅಂದ್ರೆ ಅಕ್ಕ, ಮುಕ್ತಾಯಕ್ಕ, ನೀಲಾಂಬಿಕಾ, ಗಂಗಾಂಬಿಕಾ ಇತ್ಯಾದಿಗಳು. ಇವರ ತುಡಿತದಲ್ಲಿ ವೈಯಕ್ತಿಕ ನೆಲೆನೇ ಗೋಚರಿಸತ್ತೇ ಹೊರತು ಸಾಮಾಜಿಕ ನೆಲೆ ಅಲ್ಲಾ. ಅಕ್ಕನಿಗೂ ಯಾವ ಕಾಯಕ ನಿಷ್ಠೆ ಇದ್ದಂತಿಲ್ಲ. ಕಾಯಕ ನಿಷ್ಠೆಯ ತತ್ವಕ್ಕೆ ಬದ್ಧರಾಗಿದ್ದ ಸಾಮಾನ್ಯರ ತುಡಿತಗಳನ್ನು ನಾವು ಗಮನಿಸಿದ್ರೆ ಈ ಭಿನ್ನತೆ ಸ್ಪಷ್ಟವಾಗುತ್ತೆ. ಮೇಲ್ವರ್ಗದ ವಚನಕಾರ್ತಿಯರಲ್ಲಿ ಲೌಕಿಕ ಸೆಳೆತದಿಂದ ಕಳಚ್ಕಂಡು ಪರದೈವದಲಿ ಲೀನವಾಗೋ ತವಕ ಉತ್ಕಟವಾಗಿ ವ್ಯಕ್ತಗೊಂಡಿದ್ರೇ ತಳವರ್ಗದ ವಚನಕಾರ್ತಿಯರಾದ ಸೂಳೆ ಸಂಕವ್ವೆ, ಗೊಗ್ಗವ್ವೆ, ಕಾಳವ್ವೆ , ಅಕ್ಕಮ್ಮ, ಆಯ್ದಕ್ಕಿ ಲಕ್ಕಮ್ಮ, ಸೋಮವ್ವೆ, ಗಂಗಮ್ಮ, ದುಗ್ಗವ್ವೆ, ಬೊಂತಾದೇವಿ ಇವರೆಲ್ಲರೂ ತಮ್ಮ ತಮ್ಮ ವಚನಗಳಲ್ಲಿ ಸಾಮಾಜಿಕ ಕಳಕಳಿಯನ್ನ ತೀವ್ರ ರೂಪದಲ್ಲಿ ವ್ಯಕ್ತಗೊಳಿಸಿದ್ದಾರೆ. ಇವರೆಲ್ಲಾ ಸೊಲ್ಲಿನವರು. ಯಾವ ಅಂಜ್ಕೆ ಅಳ್ಕೂ ಇಲ್ದಂಗೆ ಅಭಿವ್ಯಕ್ತಿಗೆ ತೆರ್ಕಂಡವ್ರು . ಗಟ್ಟಿ ದನಿ ಇವರ್ದು. ಅದಕ್ಕೇ ೧೨ನೇ ಶತಮಾನವನ್ನ ಅಭಿವ್ಯಕ್ತಿ ಸ್ವಾತಂತ್ರ್ಯದ ಸುವರ್ಣ ಯುಗ ಅಂತ ಗುರುತಿಸಬಹ್ದು. ಇನ್ನೊಂದು ಮುಖ್ಯ ಅಂಶ ಅಂದ್ರೆ ವೃತ್ತಿ ಅನ್ನದು ಇಲ್ಲಿ ಗೌಣವಾಗಿ, ಬದುಕೇ ಒಂದು ಧರ್ಮ ಆಗಿ ಎಲ್ಲರೂ ಬದುಕಿದ್ದೋರು.

ಇದಕ್ಕೆ ಒಂದೆರಡು ಉದಾಹರಣೆ ಹೇಳದಾದ್ರೇ ಹಡದಪ್ಪಣ್ಣನ ಮಡದಿ ಲಿಂಗಮ್ಮ,

'ಹೇಸಿಗೆಯ ಮಲದ ಕೊಣದ ಉಚ್ಚೆಯ
ಬಾವಿಗೆ ಮಚ್ಚಿ ಕಚ್ಚಿಯಾಡಿ,
ಹುಚ್ಚುಗೊಂಡು ತಿರುಗುವ ಕಚ್ಚೆ ಮನುಜರು'

ಬೇರೆ ಅಂತ ಕಟುವಾಗಿ ಟೀಕಿಸಬಲ್ಲಳು.

ಇನ್ನು ರಾಯಮ್ಮನೇನು ಕಮ್ಮಿಯಿಲ್ಲಾ. ತಾನು 'ನಿರವಯ ಸ್ಥಲದಲಿ' ಇರುವವಳಾದ್ದರಿಂದ ತನಗೆ ಗುರುಲಿಂಗ ಜಂಗಮಗಳ ಅಗತ್ಯವಿಲ್ಲ ಅಂತಲೂ ಮೈಮೇಲೆ ಲಿಂಗವನು ಧರಿಸುವುದಿಲ್ಲಾ ಅಂತಲೂ ಧೈರ್ಯವಾಗಿ ಹೇಳ್ಕಂಡಿದಾಳೆ.

'ಜ್ಞಾನವೆಂಬುದೊಂದು ಬೀದಿಯ ಪಸರವೇ ? ಬೊಕ್ಕಣ್ಣಕ್ಕೆ ತುಂಬುವ ಹುರುಳಿಯೇ ? ಚೀಲದೊಳಗಣ ಜೀರಿಗೆಯೇ ? ಗಾಣದೊಳಗಣ ಹಿಂಡಿಯೇ ?'

– ಅಂತ ಪ್ರಶ್ನಿಸೋ ಮೂಲಕ ಅಭಿವ್ಯಕ್ತಿ ಸ್ವಾತಂತ್ರ್ಯವನ್ನ ಮೆರೆದೋಳು ಅಕ್ಕಮ್ಮ.


**ಅತ್ತಿಮಬ್ಬೆ**


**ಅಕ್ಕಮಹಾದೇವಿ**


**ನೀಲಾಂಬಿಕೆ**



**ಆಯ್ದಕ್ಕಿ ಲಕ್ಕಮ್ಮ**

'ಊರೊಳಗೆ ಬ್ರಾಹ್ಮಣ ಬಯಲು

ಊರ ಹೊರಗೆ ಹೊಲೆಯರು ಬಯಲೆಂದುಂಟೇ ?'

ಅಂತ ಜಾಡಿಸೋ ಬೊಂತಾದೇವಿ.

ಮಾದರ ಹೆಣ್ಣೊಬ್ಬು ಶಿವಶರಣೆಯಾಗಿ ಪರಿವರ್ತನೆಯಾದ ಮೇಲೂ ಅವಳ ಕುಲವನ್ನು ಹಿಡ್ದು ಎತ್ತಿ ಆಡೋ ಜನರನ್ನ ಹಿಂಗೆ ತರಾಟೆಗೆ ತಗಂತಾಳೆ ಉರಿಲಿಂಗ ಪೆದ್ದಿಯ ಮಡದಿ ಕಾಳವ್ವೆ ,

'ಕುರಿಕೋಳಿ ಕಿರಿಮೀನು ತಿಂಬವರೆಲ್ಲಾ ಕುಲಜಕುಲಜರೆಂದೆಂಬರು !

ಶಿವಗೆ ಪಂಚಾಮೃತವ ಕರೆವ ಪಶುಗಳ ತಿಂಬುವ ಮಾದಿಗ ಕೀಳು ಜಾತಿಯೆಂಬರು

ಅವರೆಂತು ಕೀಳು ಜಾತಿಯಾದಾರು ? ಜಾತಿಗಳೇ ನೀವೇಕೆ ಕೀಳಾದಿರೋ ? – ಅಂತ ಪ್ರಶ್ನಿಸ್ತಾಳೆ.

'ಒತ್ತೆಯ ಹಿಡಿದು, ಮತ್ತೊತ್ತೆಯ ಹಿಡಿಯೆ ಹಿಡಿದಡೆ ಬತ್ತಲೆ ನಿಲ್ಲಿಸಿ ಕೊಲ್ಲುವರಯ್ಯಾ' ಅನ್ನುವ ಸೂಳೆ ಸಂಕವ್ವೆ ಯಾವ ಹಿಂಜರಿಕೆಯಿಲ್ಲದೇನೆ ತನ್ನ ವೃತ್ತಿಯನ್ನು ಅದರಲ್ಲಿ ಆಕೆ ಅನುಸರಿಸಿದ ನೀತಿಯನ್ನ ಹೇಳ್ಕಂಡಿದಾಳೆ.

ಹಿಂಗೆ ಹನ್ನೆರಡನೇ ಶತಮಾನದಲ್ಲಿ ತಳವರ್ಗ ದೋರೆಲ್ಲಾ ಧೈರ್ಯವಾಗಿ ಬರೆಯೋಕೆ ಶುರು ಮಾಡಿದ್ರು. ತಮ್ಮ ಅಸ್ಮಿತೆಯನ್ನು ಅವರು ಎಷ್ಟು ನಿರ್ಭಯವಾಗಿ ಕಟ್ಟಿದಾರೆ ಅನ್ನಕ್ಕೆ ಈ ವಚನಗಳೇ ಸಾಕ್ಷಿ. ಅವ್ರಿಗೆ ಇದು ಸಾಧ್ಯವಾಗಿದ್ದು ಸೊಲ್ಲಿನಿಂದ. ಸೊಲ್ಲು ನಮ್ದು ಆದಾಗ ಮಾತ್ರ ಇದು ಸಾಧ್ಯ. ಅಲಕ್ಷಿತ ಶರಣೆಯರು ಅಂತ ಇವರನ್ನ ಕರ್ದಿದ್ರೂ ಇವರ ವಚನಗಳು ಮಾತ್ರ ಅದ್ಭುತ. ಸಂಖ್ಯೆಯಲ್ಲಿ ಬಹಳ ಕಡಿಮೆ. ಬೆರಳೆಣಿಕೆಯಷ್ಟೇ ವಚನಗಳು ಆಗಿದ್ರೂ ಅಷ್ಟರಲ್ಲೇ ತಮ್ಮ ವೈಯಕ್ತಿಕತೆಯ ಜತೆಗೆ ಸ್ತ್ರೀ ಸಂವೇದನೆ ಮತ್ತು ಅದರಲ್ಲೂ ವಿಭಿನ್ನತೆಯನ್ನು ನಾವು ಕಾಣಬಹುದಾಗಿದೆ. ಇವ್ರ ಒಂದೊಂದು ವಚನಾನೂ ಒಂದು ಇಡೀ ವ್ಯಕ್ತಿತ್ವದ ಉಸಿರಿನ ಪ್ರತಿಬಿಂಬ ಆಗಿದವೆ. ಇದೇ ಸೊಲ್ಲು.

ಇದಕ್ಕೆ ಸಂಬಂಧಿಸಿದಂತೆ ಇನ್ನೊಂದು ಉದಾಹರಣೆ ತೆಗೆದುಕೊಳ್ಳಬಹುದು ಅಂತಾದ್ರೆ ಅದು ಅಸಾದಿಗಳದ್ದು. ಅವರ ಹಾಡು. ಬಹಳ ಮುಕ್ತವಾಗಿ, ಗಟ್ಟಿಯಾಗಿ ಇವತ್ತೂ ಹಾಡ್ತಾರೆ ಯಾವ, ಯಾರ ಮಿತಿಗೂ ಒಳಪಡ್ದೆ. ಇದನ್ನ ಶಿಷ್ಟ ಸಮಾಜ ಕೇಳಿದ್ರೆ ಖಂಡಿತ ಬೆಚ್ಚಿಬೀಳುತ್ತೆ. ಗಿರಿಜನರು ಅಕ್ಷರಗಳಲ್ಲಿ ಬರೆಯೋದಿಲ್ಲಾ. ಆದ್ರೂ ಅವರ್ಗೆ ಸೊಲ್ಲಿದೆ, ಸಾಹಿತ್ಯ ಇದೆ, ಸಂಸ್ಕೃತಿ ಇದೆ, ಆಚರಣೆ ಇದೆ. ಅದಕ್ಕಿಂತಲೂ ಹೆಚ್ಚಾಗಿ ಈ ಮಂಟೇಸ್ವಾಮಿ, ಮಲೆ ಮಾದೇಶ್ವರರಿದಾರೆ. ಅಲ್ಲಿನೂ ಸೈತ ಇದೇ ಸೊಲ್ಲಿದೆ. ಹಂಗೇನೇ ಜೇನು ಕುರುಬರು, ಕೊರಗರು, ಸಿದ್ಧಿಗಳು, ಲಂಬಾಣಿಗರು ಈ ಎಲ್ಲಾ ಸಣ್ಣ ಸಣ್ಣ ಸಮುದಾಯಗಳಿಗೂ ಅವರದ್ದೇ ಆದ ಸೊಲ್ಲು ಇದೆ.

ಈ ಸೊಲ್ಲಿನ ದಾರಿಯಗೆ ಭಯ ಇಲ್ಲಾ. ಇಲ್ಲಿ ಪದ ಕಟ್ಟೋದು, ಕತೆ ಕಟ್ಟೋದು. ಎಲ್ಲಾ ಈ ನೆಲಕ್ಕೇ ಅಂಟಿರುತ್ತೆ, ಚಿಗಿತು ಅರಳಿರುತ್ತೆ. ಅಲ್ಲೇ ಸಂಬಂಧಗಳನ್ನ, ಬದುಕನ್ನ ಕಟ್ಟಿಕೋಬೋದು. ಸಾಹಿತ್ಯ, ಸಂಸ್ಕೃತಿ ಅಂತ ಕರೆಯೋ ದೊಡ್ಡ ದೊಡ್ಡ ಪದಗಳಲ್ಲಿ ನಾವು ಏನು ನೋಡ್ತಿವೋ ಅದೆಲ್ಲನೂ ಸೊಲ್ಲಿನಲ್ಲಿ ಅಡಗೈತೆ. ಇದೇ ಸೊಲ್ಲಿನ ಮಹತ್ವ . ನಾನು ಬೆಳ್ದು ಬಂದದ್ದೂ ಈ ಸೊಲ್ಲಿನಲ್ಲೇ. ಅಕ್ಷರ ಬಂದಿದ್ದರಿಂದ ಆಗಿದ್ದು ಏನಂದ್ರೆ ಕೆಲವು ಹಿಂಜರಿಕೆಗಳು ಬಂದ್ವು. ಬೇರೆ ಬೇರೆ ಜ್ಞಾನದ ಬಾಗಿಲನ್ನು ಅಕ್ಷರ ತಗೆದದ್ದು ಸುಳ್ಳು ಅಂತ ಖಂಡಿತ ಹೇಳ್ಲಾರೆ. ಆದರೆ ಅದು ಜತೆಗೇ ಕೆಲವು ಭಯಗಳನ್ನೂ ಹುಟ್ಟಿಹಾಕ್ತು. ಏನು ಬರೀಬೇಕು? ಯಾಕೆ ಬರೀಬೇಕು? ಹೆಂಗೆ ಬರೀಬೇಕು? ಬರಿಬೇಕೋ ಬೇಡವೋ? ಶೀಲ ಯಾವ್ದು ? ಅಶ್ಲೀಲ ಯಾವ್ದು? ತಪ್ಪು ಯಾವ್ದು ಸರಿ ಯಾವ್ದು? ಮುಚ್ಚಿಟ್ಟಕಳ್ದ್ಯಾವ್ದು ? ಬಿಚ್ಚಿಡದ್ಯಾವ್ದು? ಪ್ರಶ್ನೆಗಳೇ ಪ್ರಶ್ನೆಗಳು. ಆದ್ರೆ ಸೊಲ್ಲಿನ ದಾರಿಯಲ್ಲಿ ಇದು ಇಲ್ಲಾ.

ನನ್ನಂತವ್ರು ಅಕ್ಷರ ಕಲ್ತು ನಾಗರಿಕ ಸಮಾಜದ ನಡುವೆ ಬೆಳ್ದು ಕಲ್ತಿದ್ದು ಏನಂದ್ರೆ ಪಾಲಿಷ್ ಮಾಡೋದು. ಅನುಭವಗಳನ್ನ, ಅಕ್ಷರಗಳನ್ನ ಪಾಲಿಷ್ ಮಾಡೋದು. ಆ ಮೂಲಕ ನನ್ನ ಒರಿಜಿನಾಲಿಟಿನ ಕಳ್ಕೊಳೋದು. ಭಾಷೆ ಸ್ಟಾಂಡರ್ಡೈಸ್ ಆದಾಗ ಮುಕ್ತವಾಗಿ ಹಾಡೋರನ್ನ, ಬರೆಯೋರನ್ನ ಹೆದರಿಸುತ್ತೆ... ಛೆ ! ಇಂಥದ್ದೆಲ್ಲ ಬರೀತೀಯಾ ? ಹೀಗೆ ಬರೀತೀಯಾ ? ಇದೊಂದು ಭಾಷೇನಾ ? ಇದೆಂತಹ ಶೈಲಿ ? ಹೀಗೆ ಪ್ರಶ್ನಿಸುತ್ತಾ ನಡುವೆ ಒಂದು ಗೆರೆಯನ್ನ ಕೊರದ್ಬಿಡುತ್ತೆ.

ಇವತ್ತು ಈ ಸೊಲ್ಲ ದಾರಿಯಲ್ಲಿ ಇರುವವರನ್ನೆಲ್ಲಾ ಸಹನೆಯಿಂದ, ಸಹಾನುಭೂತಿಯಿಂದ ನೋಡಲು ಸಾಧ್ಯವಾ ? ಹಿಂದು, ನಾವೆಲ್ಲ ಒಂದು ಅಂತಾರೆ. ಆದ್ರೆ ಇವತ್ತು ಹಿಂದೂ ಇಲ್ಲ ಒಂದೂ ಇಲ್ಲ, ಒಂದು ಛಿದ್ರವಾಗಿ ಚೆಲ್ಲಾಪಿಲ್ಲೆ ಆಗೈತೆ. ಎಲ್ಲರನ್ನೂ ಒಳಗೊಳ್ಳೋಕೆ ಬೇಕಾಗಿರೋದು ಪ್ರೀತಿ, ಸಹನೆ. ಆದರೆ ಇವತ್ತು ಕೋಮು ಅಂದಾಕ್ಷಣ ಹೊಡಿ, ಬಡಿ, ತಿವಿ ಅನ್ನೋ ಬರಿಯ ಹಿಂಸೆಯನ್ನ ನೋಡ್ತಿದಿವಿ. ಮನುಷ್ಯನ ಬದುಕಿಗೆ ಬೇಕಾಗಿರೋದು ಪ್ರೀತಿ, ಸಂಬಂಧ. ಇವತ್ತು ಇಷ್ಟವಾದುದನ್ನ ಅಪ್ಪಿಕೊಳ್ಳೋಕೆ ಸಾಧ್ಯವಿಲ್ಲ. ಕಷ್ಟವಾದರೂ ಹೇರಿಕೆಯನ್ನ ಒಪ್ಪಿಕೊಳ್ಳಬೇಕಾದ ಅಥವಾ ಒಪ್ಪಿಸುವ ಪ್ರಯತ್ನ, ಹುನ್ನಾರ ಎಲ್ಲಾ ಕಡೆ. ಇವತ್ತು ಇದೇ ಮಾರಕವಾಗ್ತ ಇರೋದು. ಹಿಂಸೆಯನ್ನ ಪ್ರಚೋದಿಸುತ್ತಾ ಇರೋದು. ಜರ್ಮನಿಯಲ್ಲಿ ಆದದ್ದು ಇದೇನೇ. ಶ್ರೇಷ್ಠವಾದುದ್ದನ್ನ ಬಿಟ್ಟು ಉಳಿದೆಲ್ಲವನ್ನ ಕೊಂದುಹಾಕಬೇಕು ಅಂತ ಏನು ಹಿಟ್ಲರ್ ಮಾಡಿದನೋ, 'ನಾವೆಲ್ಲ ಹಿಂದೂ' ಅನ್ನೋದ್ರಲ್ಲೂ ಕೂಡ ಅದೇ ಎಲಿಮೆಂಟ್ ಇದೆ. ಅವತ್ತು ಶ್ರೇಷ್ಠತೆಯ ಕಲ್ಪನೆ ಎಲ್ಲಿಗೆ ತೆಗೆದುಕೊಂಡು ಹೋಯ್ತು ಅಂದ್ರೆ ಅದು ಹಿಟ್ಲರ್‌ನಂಥವನ ಹುಟ್ಟಿಗೆ ಕಾರಣವಾಯ್ತು.

ಜನಾಂಗ, ಭಾಷೆ, ನಾಡು–ನುಡಿ ಅನ್ನೋದರ ಹಿಂದೆನೇ ಶ್ರೇಷ್ಠತೆಯೂ ಬೆನ್ನಟ್ಟಿ ಬರುತ್ತೆ. ಇದು ನಮ್ಮದು, ನಮ್ಮದೇ ಶ್ರೇಷ್ಠ ಅನ್ನೋ ಭಾವ ತೆರೆದುಕೊಳ್ಳುತ್ತೆ. ಇದನ್ನ ಬಿಟ್ಟುಕೊಡ್ಬೇಕು ನಾವು. ಒಂದು ರಾಷ್ಟ್ರ ಕಟ್ಟಕ್ಳೋದು ಒಂದು ಅನುಕೂಲಕ್ಕಾಗಿ. ಅದರೊಳಗೆ ಅನೇಕ ಸಮುದಾಯಗಳಿರ್ತವೆ. ನಮ್ಮ ರಾಷ್ಟ್ರದಲ್ಲಂತೂ ಅನೇಕ ಸಮುದಾಯಗಳು, ಧರ್ಮಗಳು, ಭಾಷೆಗಳು, ಸೊಲ್ಲು, ಸಾಹಿತ್ಯ ಇದವೆ. ಇದರಲ್ಲಿ ಅನೇಕ ರಾಜಮಾರ್ಗಕ್ಕೆ ಬರದೇ ಇರೋದು, ಬರೋ ಪ್ರಯತ್ನ ಮಾಡಿದಲ್ಲಿ ದೂರ ಸರಿಸೋದು, ಕೂಡಿಕೊಳ್ಳದೇ ಇರೋದು. ಹೌದು, ಉಡುಪಿಯಲ್ಲಿ ದೇವಸ್ಥಾನದೊಳಕ್ಕೆ ಎಲ್ಲರನ್ನೂ ಬಿಡೋದು ಒಂದು ಚಳುವಳಿ ಯಾಕಾಗಬೇಕು? ಅದೊಂದು ಸಾರ್ವಜನಿಕ ಸ್ಥಳ. ಯಾರ ಖಾಸಗಿ ಆಸ್ತಿ ಅಲ್ಲವಲ್ಲ...? ಅಲ್ಲಿಯ ಪ್ರವೇಶಕ್ಕೆ ತಡೆ ಒಡ್ಡೋದು, ನೀನು ಒಳಕ್ಕೆ ಬರಕೂಡ್ದು ಅನ್ನೋದು ಈ ಎಲ್ಲಾ ನಿಷಿದ್ಧಗಳಿವೆಯಲ್ಲ ಇವು ಈ ಮಾರ್ಗ ಅಂದ ತಕ್ಷಣ ಮನಸ್ಸಿಗೆ ಬರುವಂಥವು. ಅದರ ಮೂಲಕ ಬೇರೆ ಎಲ್ಲವೂ... ಬುದ್ಧನಿಂದ ಹಿಡ್ದು ಇವತ್ತಿನವರ್ಗೆ ನಡ್ದಿರೋ ಎಲ್ಲಾ ಬಂಡಾಯಾನೂ ಇದರ ವಿರುದ್ಧನೇ.

ಈ ದೇಶದಲ್ಲಿ ಇರೋ ಅನೇಕ ಜಾತಿ, ಧರ್ಮ, ಜನಾಂಗ, ಭಾಷೆ, ಸಾಹಿತ್ಯ, ಬದುಕು ಇವುಗಳನ್ನ ಪ್ರೀತಿಯಿಂದ, ಗೌರವದಿಂದ ಒಳಗೊಂಡು ಒಟ್ಟಾರೆಯಾಗಿ ಬೆಳೆಸುವುದೇ ಪ್ರಜಾಪ್ರಭುತ್ವ. ಹೀಗೆ ಒಳಗೊಂಡಾಗಲೇ ಪ್ರಜಾಪ್ರಭುತ್ವ ಸಾರ್ಥಕ.

ಕೊನೇದಾಗಿ ಈ ಒಂದು ವಚನದೊಂದಿಗೆ ನನ್ನ ಬರಹ ಮುಗುಸ್ತೀನಿ.

*ನೂರನೋದಿ ನೂರ ಕೇಳಿದರೇನು ?*

*ಆಶೆ ಹರಿಯದು ರೋಷ ಬಿಡದು !*

*ಮಜ್ಜನಕ್ಕೆರೆದು ಫಲವೇನು ?*

*ಮಾತಿನಂತೆ ಮನವಿಲ್ಲದ*

*ಜಾತಿ–ಡೊಂಬರ ನೋಡಿ ನಗುವನಯ್ಯ*

*ಕೂಡಲ ಸಂಗಮದೇವಾ...*

**ಬಿ. ಟಿ. ಜಾಹ್ನವಿ**
೧೭೮೦, ಎ/೨೬, ಮಹಡಿ, ವಿದ್ಯಾನಗರ, ೬ನೇ ತಿರುವು
ವಿನಾಯಕ ಬಡಾವಣೆ, ದಾವಣಗೆರೆ – ೫೭೭೦೦೫




ಅನುಭವ / ಶಿಕ್ಷಣದ ಮೂಲಕ ದೊರೆಯುವ ದತ್ತಾಂಶಗಳು, ವಿಷಯ ಮಾಹಿತಿ, ತಿಳಿವಳಿಕೆ, ಅರಿವು ಮತ್ತು ಕೌಶಲವನ್ನು 'ಜ್ಞಾನ' ಎಂದು ಹೇಳಬಹುದು. ಜೀವನದ ಘಟನೆಗಳು, ಪುಸ್ತಕಗಳ ನಿರಂತರ ಓದು, ಶ್ರೇಷ್ಠ ವ್ಯಕ್ತಿಗಳ ಆದರ್ಶಗಳು, ಅವರ ಜೀವನಶೈಲಿ, ತೆರೆದ ಮನದಿಂದ ಜೀವನ ಮತ್ತು ನಿಸರ್ಗವನ್ನು ನೋಡುವುದು, ಅವನ್ನು ಸ್ವತಃ ಅನುಭವಿಸುವುದು; ಮಾಧ್ಯಮಗಳು, ಸಾಮಾಜಿಕ ಜಾಲತಾಣಗಳು, ಪೂರ್ವಜರ ಅನುಭವದ ಸಾರವೆಂದೇ ಕರೆಯಲ್ಪಡುವ ಗಾದೆ ಮಾತು – ಇವು ಜ್ಞಾನಕ್ಕಿರುವ ಹತ್ತು ಹಲವು ಮೂಲಗಳು. ಹೀಗೆ, ಹಲವು ಮೂಲಗಳಿಂದ ಬರುವ ಜ್ಞಾನದ ಗ್ರಹಿಕೆಗೆ ನಮ್ಮ ಇಂದ್ರಿಯಗಳನ್ನು ಮುಕ್ತವಾಗಿ ತೆರೆದಿಟ್ಟರೆ ಜ್ಞಾನದ ಶಿಖರವನ್ನೇ ಏರಬಹುದು.

ದಿನೇ ದಿನೇ ಅಂತರ್ಜಾಲದ ಬಳಕೆ ಹೆಚ್ಚುತ್ತಿದೆ. ಅಂತರ್ಜಾಲದ ಮೂಲಕ ಜ್ಞಾನದ ಕ್ರಾಂತಿಯೇ ನಡೆಯುತ್ತಿದೆ. ಮಕ್ಕಳು ಪಠ್ಯದಲ್ಲಿಯ ಕ್ಲಿಷ್ಟಕರವಾದ ವಿಷಯಗಳನ್ನು 'ಯೂಟ್ಯೂಬ್, ಗೂಗಲ್'ಗಳಿಂದ ತಿಳಿದುಕೊಳ್ಳುತ್ತಿದ್ದಾರೆ. ಸಾಮಾಜಿಕ ಜಾಲತಾಣಗಳಾದ 'ಫೇಸ್‌ಬುಕ್, ವಾಟ್ಸಪ್'ಗಳಲ್ಲಿ ಸಾಮಾಜಿಕ ರಾಜಕೀಯ ವಿಷಯ ಕುರಿತ ಚರ್ಚೆಗಳು ಜನರ ಜ್ಞಾನವನ್ನು ಹೆಚ್ಚಿಸುತ್ತಿವೆ. ಉದ್ಯಮಿಗಳು, ಹೂಡಿಕೆದಾರರು ಅಂತರ್ಜಾಲದಿಂದ ಷೇರುಪೇಟೆಯ ಜ್ಞಾನ ಪಡೆಯುತ್ತಿದ್ದಾರೆ. ಅಭ್ಯಾಸನಿರತ ಮಕ್ಕಳು, ಪಾಠ ಮಾಡುವ ಶಿಕ್ಷಕರು, ತನಿಖಾನಿರತ ಪೊಲೀಸರು, ವೈದ್ಯರು, ಅಧಿಕಾರಿಗಳು ...ಹೀಗೆ ಪ್ರತಿಯೊಬ್ಬರೂ ಜ್ಞಾನದ ಲಾಭ ಪಡೆಯುತ್ತಿದ್ದಾರೆ.

ರೇಡಿಯೋ, ದೂರದರ್ಶನ, ದಿನಪತ್ರಿಕೆ ಮುಂತಾದುವು ಜನರಿಗೆ ನಾನಾ ಬಗೆಯ ಜ್ಞಾನವನ್ನು ನೀಡುತ್ತಿವೆ. ಜನ ತಮ್ಮ ಹಕ್ಕುಗಳ ಅರಿವಾಗಿ ಸರ್ಕಾರವನ್ನು ಪ್ರಶ್ನಿಸುತ್ತಿದ್ದಾರೆ; ಸಾಮಾಜಿಕ ಸಮಸ್ಯೆಗಳಿಗೆ ಒಕ್ಕೊರಲಿನಿಂದ ಧ್ವನಿ ಎತ್ತುತ್ತಿದ್ದಾರೆ. ಮಾರುಕಟ್ಟೆಯಲ್ಲಿ ಜನರ ದುಡ್ಡಿಗೆ ಬೆಲೆ ಸಿಗುತ್ತಿರುವುದು, ಒಳ್ಳೆಯ ಗುಣಮಟ್ಟದ ವಸ್ತುಗಳು ಬರುತ್ತಿರುವುದು, ಆರೋಗ್ಯಕರ ಸ್ಪರ್ಧೆಗೆ ಅವಕಾಶ ದೊರೆಯುತ್ತಿರುವುದು ಜ್ಞಾನದ ಬಲದಿಂದಲೇ !

ಇಷ್ಟೆಲ್ಲ ಒಳಿತು ಮಾಡುವ ಜ್ಞಾನ ಕೂಡ ಕೆಲವೊಮ್ಮೆ ಅವಾಂತರಗಳನ್ನು ಸೃಷ್ಟಿಸಬಹುದು. ಕೆಲವು ಮಾಧ್ಯಮಗಳು, ಅಂತರ್ಜಾಲ ತಾಣಗಳು, ದಿನಪತ್ರಿಕೆಗಳು ತಮ್ಮ ಸ್ವಾರ್ಥಕ್ಕಾಗಿ ಕೋಮುವಾದ, ಪ್ರಾಂತೀಯತೆ, ಮೇಲು–ಕೀಳು ...ಹೀಗೆ ಇಂತಹ ತಪ್ಪು ಕಲ್ಪನೆಗಳನ್ನು ಜನರಲ್ಲಿ ಮೂಡಿಸುವ ಮೂಲಕ ದೇಶದ ಸಮಗ್ರತೆಗೆ ಧಕ್ಕೆ ತರುತ್ತಿವೆ. ಕೆಲವು ಸಾಹಿತಿಗಳ, ಚಿಂತಕರ ಆಯತಪ್ಪಿದ ಹೇಳಿಕೆಗಳಿಂದ ತಪ್ಪು ತಿಳಿವಳಿಕೆ ಮೂಡಿ ಸಮಾಜದ ಸ್ವಾಸ್ಥ್ಯ ಕೆಟ್ಟುಹೋಗುತ್ತಿದೆ. ಅಜ್ಞಾನದಿಂದ ಯುವಕರು ಉಗ್ರವಾದಿ ಸಂಘಟನೆಗಳತ್ತ ಆಕರ್ಷಿತರಾಗುತ್ತಿದ್ದಾರೆ ಮತ್ತು ಮಾದಕ ವಸ್ತುಗಳತ್ತ ಮುಖ ಮಾಡಿದ್ದಾರೆ.

ಜ್ಞಾನವು, ವಿಜ್ಞಾನದಲ್ಲಿರುತ್ತದಾದರೂ, ವಿಜ್ಞಾನ ಯಾವುದೇ ಒಂದು ವಸ್ತು–ವಿಷಯದ ಬಗೆಗೆ ವಿಶೇಷವಾಗಿ, ಶಿಸ್ತುಬದ್ಧ ಅಧ್ಯಯನ ಮಾಡುವಂಥದು; ಹೊಸ ಹೊಸ ಆವಿಷ್ಕಾರಗಳಿಗೆ ಕಾರಣವಾಗುವಂಥದು. ವಿಜ್ಞಾನದ ಕೊಡುಗೆಗಳಾದ ಮೊಬೈಲ್, ಅಂತರ್ಜಾಲಗಳಿಂದ ನಮಗೆ ಬೇಕಾದ ಮಾಹಿತಿಯನ್ನು ತತ್‌ಕ್ಷಣದಲ್ಲಿ ಪಡೆಯಬಹುದು. ಜಗತ್ತಿನ ಯಾವುದೇ ಭಾಗದಲ್ಲಿಯ ವ್ಯಕ್ತಿಯೊಂದಿಗೆ ವಾಟ್ಸಪ್, ಫೇಸ್‌ಬುಕ್, ಟ್ವಿಟರ್, ಇ–ಮೇಲ್‌ಗಳ ಮೂಲಕ ಸಂಪರ್ಕ ಸಾಧಿಸಬಹುದು. ವಿಜ್ಞಾನವು ಉಪಗ್ರಹ ವ್ಯವಸ್ಥೆಯ ಮೂಲಕ ಹಳ್ಳಿ–ಗುಡ್ಡಗಾಡು ಜನರಿಗೆ ಶಿಕ್ಷಣ, ವೈದ್ಯಕೀಯ ಸೌಲಭ್ಯ, ರೈತರಿಗೆ ಕೃಷಿ ಕುರಿತ ಮಾಹಿತಿ, ಗಡಿ ರಕ್ಷಣೆ ಮತ್ತಿತರ ಅನುಕೂಲಗಳನ್ನು ಕಲ್ಪಿಸಿದೆ. ಈಚಿನ ಮಾರಣಾಂತಿಕ ಏಡ್ಸ್, ಎಬೋಲಾ, ಮಿಡಲ್ ಈಸ್ಟ್ ರೆಸ್ಪಿರೇಟರಿ ಸಿಂಡ್ರೋಮ್‌ನಂತಹ ರೋಗಗಳಿಗೆ ತಕ್ಕಮಟ್ಟಿಗೆ ಕಡಿವಾಣ ಹಾಕಿದ್ದು ವಿಜ್ಞಾನವೇ. ವಿಜ್ಞಾನದ ಹೆಚ್ಚಿನ ಸಂಶೋಧನೆಗಳಿಂದ ಸುಧಾರಿತ ಎಂಜಿನ್‌ಗಳು ಬರುತ್ತಿದ್ದು, ಅವು ಇಂಗಾಲದ ಡೈಆಕ್ಸೈಡ್ ಬಿಡುಗಡೆಯ ಪ್ರಮಾಣವನ್ನು ಗಣನೀಯವಾಗಿ ತಗ್ಗಿಸಿವೆ ಮತ್ತು ಪರಿಸರ ಸಂರಕ್ಷಣೆಗೆ ಕಾರಣವಾಗಿವೆ. ಇತ್ತೀಚೆಗೆ ಒಬ್ಬ ವ್ಯಕ್ತಿಯ ಹೃದಯವನ್ನು ಇನ್ನೊಬ್ಬ ವ್ಯಕ್ತಿಗೆ ಯಶಸ್ವಿಯಾಗಿ ಕಸಿ ಮಾಡಿರುವುದು ವಿಜ್ಞಾನಕ್ಷೇತ್ರದ ಉನ್ನತ ಸಾಧನೆಯಾಗಿದೆ.

ಮಂಗಳಗ್ರಹಕ್ಕೆ ನೌಕೆಯನ್ನು ಕಳುಹಿಸಿದ್ದು, ಆಕಾಶಕಾಯಗಳ ಬಗೆಗಿನ ಅಧ್ಯಯನಕ್ಕೆ ಆಸ್ಟ್ರೋ–ಸ್ಯಾಟ್ ಉಡಾವಣೆ, ಸ್ವದೇಶಿ ತಂತ್ರಜ್ಞಾನದ ಬೆಳವಣಿಗೆ, ಕ್ಲಿಷ್ಟಕರವಾದ ಕ್ರಯೋಜನಿಕ್ ಎಂಜಿನ್ ಅಭಿವೃದ್ಧಿ, ಐಎನ್‌ಎಸ್ ಕೊಚ್ಚಿ, ಐಎನ್‌ಎಸ್ ವಿಕ್ರಮಾದಿತ್ಯ, ಐಎನ್‌ಎಸ್ ಅರಿಹಂತ, ಐಎನ್‌ಎಸ್ ಅಸ್ತ್ರಧಾರಿಣಿ ಮುಂತಾದ ಕ್ಷಿಪಣಿಗಳು, ಜಲಾಂತರ್ಗಾಮಿಗಳು, ಗಸ್ತುಹಡಗು, ನೌಕಾ ಸ್ಫೋಟಕಗಳು, ಎಲ್ಲವೂ ನೌಕಾಪಡೆಯ ಬಲ ಹೆಚ್ಚಿಸಿರುವುದು ವಿಜ್ಞಾನದ ಸಂಶೋಧನೆಯಿಂದಲೇ !

ಅದೇ ವೇಳೆ ಕೆಲವು ವೈಜ್ಞಾನಿಕ ಆವಿಷ್ಕಾರಗಳು ದುರುಪಯೋಗವಾಗುತ್ತಿರುವುದು ವಿಷಾದನೀಯ. ಐಎಸ್‌ನಂತಹ ಸಂಘಟನೆಗಳು ಅಂತರ್ಜಾಲದ ಮೂಲಕ ತಮ್ಮ ಸಿದ್ಧಾಂತ ಮತ್ತು ದುಷ್ಕೃತ್ಯಗಳನ್ನು ಪಸರಿಸುತ್ತಿರುವುದು, ಅಶ್ಲೀಲ ಜಾಲತಾಣಗಳಿಂದ ಯುವಕರ ಮನಸ್ಸು ವಿಕೃತಗೊಳ್ಳುತ್ತಿರುವುದು, ಬ್ಯಾಂಕ್ ಅಕೌಂಟ್ ಹ್ಯಾಕಿಂಗ್, ಖಾಸಗಿ ಮತ್ತು ಸರ್ಕಾರಿ ಜಾಲತಾಣಗಳಲ್ಲಿಯ ದತ್ತಾಂಶಗಳನ್ನು ವಿರೂಪಗೊಳಿಸುತ್ತಿರುವುದು ಎಲ್ಲವೂ ವಿಜ್ಞಾನದ ದುರುಪಯೋಗವೇ ಸರಿ. ವಿಜ್ಞಾನ ನೀಡುತ್ತಿರುವ ಅತಿ ಆರಾಮದಾಯಕ ಜೀವನಶೈಲಿ ಹೊಸ ರೋಗ ಮತ್ತು ಆರೋಗ್ಯ ಸಮಸ್ಯೆಗಳನ್ನು ಸೃಷ್ಟಿಸಿದೆ, ಸೃಷ್ಟಿಸುತ್ತಿದೆ.

ವಿಜ್ಞಾನ ನಮಗೆ ಆವಿಷ್ಕಾರದ ಮೂಲಕ ಹೊಸ ವಸ್ತುಗಳನ್ನು ಸೃಷ್ಟಿಸಿದರೆ, ಜ್ಞಾನ ಆ ವಸ್ತುಗಳ ಸುಸ್ಥಿರ ಬಳಕೆಯ ಬಗೆಗೆ ತಿಳಿಸುತ್ತದೆ. ಹಾಗಾಗಿ ಮನುಷ್ಯನಿಗೆ ಜ್ಞಾನ–ವಿಜ್ಞಾನಗಳೆರಡರ ಅಗತ್ಯವಿದೆ. ಇವು ಒಂದೇ ನಾಣ್ಯದ ಎರಡು ಮುಖಗಳು. ಜ್ಞಾನಾರ್ಜನೆ ಜನರ ಗುರಿಯಾದರೆ, ವಿಜ್ಞಾನ ಅದನ್ನು ತಲುಪುವ ದಾರಿ. ಸರ್ಕಾರದ ಇತ್ತೀಚಿನ 'ಕೌಶಲ ಭಾರತ ಅಭಿಯಾನ', ಎಐಐಎಮ್‌ಎಸ್‌ಗಳ ಸ್ಥಾಪನೆ, ಹೊಸ ಐಐಟಿ ಸ್ಥಾಪನೆಗೆ ಪ್ರಸ್ತಾವ ಜ್ಞಾನ–ವಿಜ್ಞಾನಗಳ ಪ್ರಗತಿಯಲ್ಲಿ ಗಮನಾರ್ಹವಾದುವು.

ಜ್ಞಾನದ ಹಸಿವಿರುವ ವಿದ್ಯಾರ್ಥಿಗಳು, ಉತ್ಸಾಹಭರಿತ ಶಿಕ್ಷಕರು, ಸದಾ ಜನರ ಸರ್ವತೋಮುಖ ಅಭಿವೃದ್ಧಿ ಬಯಸುವ ಸರ್ಕಾರ, ನಿತ್ಯನೂತನ ಆವಿಷ್ಕಾರಗಳಲ್ಲಿ ತೊಡಗಿಕೊಳ್ಳುವ ವಿಜ್ಞಾನಿಗಳು, ಹೊಸ ಮತ್ತು ಸಮತೋಲನ ವಿಚಾರಗಳ ಮೂಲಕ ಸಮಾಜ – ಸರ್ಕಾರಕ್ಕೆ ದೀವಟಿಗೆ ಹಿಡಿದು ಸರಿ ದಾರಿ ತೋರುವ ಸಾಹಿತಿ–ಚಿಂತಕರು ಶಕ್ತಿಮೀರಿ ಶ್ರಮಿಸಿದರೆ, 'ಕ್ಷಿಪಣಿ ಪಿತಾಮಹ' ಭಾರತ ಕಂಡ ಅಪರೂಪದ, ಜನಪ್ರಿಯ ರಾಷ್ಟ್ರಪತಿ ಡಾ॥ ಎ. ಪಿ. ಜೆ. ಅಬ್ದುಲ್ ಕಲಾಂ ಅವರ ಸಮೃದ್ಧ ಭಾರತದ ಕನಸು ನನಸಾಗುವುದರಲ್ಲಿ ಸಂದೇಹವೇ ಇಲ್ಲ.

**ಡಾ॥ ಸಿ. ಕೆ. ನಾವಲಗಿ**
ಜಾನಪದ ತಜ್ಞರು, ಪ್ರಾಚಾರ್ಯರು, ಜೆ. ಎಸ್. ಎಸ್. ಕಾಲೇಜು
ಗೋಕಾಕ – ೫೯೧ ೩೦೭, ಬೆಳಗಾವಿ ಜಿಲ್ಲೆ

**HOSATHU** Kannada Monthly / FEBRUARY 2016 / ₹ 20 (No. of Pages 64)
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.